|| ಶ್ರೀಃ ||

|| ಶ್ರೀಮತೇ ರಾಮಾನುಜಾಯ ನಮಃ ||


ಆರ್ಥಿಕ ನೆರವು

**ತಿರುಮಲ ತಿರುಪತಿ ದೇವಸ್ಥಾನಂ**

**ತಿರುಪತಿ**


ಸ್ವಾಮಿ ಪಿಳ್ಳೈಲೋಕಾಚಾರ್ಯರು ಅನುಗ್ರಹಿಸಿದ

# ತತ್ತ್ವತ್ರಯಮ್

(ಸ್ವಾಮಿ ಮಣವಾಳ ಮಾಮುನಿಗಳ ವ್ಯಾಖ್ಯಾನದ ಕನ್ನಡಾನುವಾದದೊಡನೆ)


ಅನುವಾದಕರು

**ಶ್ರೀಮತಿ ರಮಾ ಶ್ರೀನಿವಾಸನ್** ಬಿ.ಎಸ್ಸಿ., ಎಂ.ಎ. (ಕನ್ನಡ), ಎಂ.ಎ. (ಸಂಸ್ಕೃತ)



ಪ್ರಕಾಶಕರು

**ಶ್ರೀ ವೈಷ್ಣವಶ್ರೀ**

ನಂ. 7, 6ನೇ 'ಎ' ಮುಖ್ಯರಸ್ತೆ

ಮಾರುತಿ ಎಕ್ಸ್‌ಟೆನ್ಷನ್, ಬೆಂಗಳೂರು-560 021

ದೂರವಾಣಿ : 3320572

TATVATRAYAM : A Text by Swamy Pillailokacharya with the translation in Kannada of the commentary by Swamy Manavalamamunigal by Smt. Rama Srinivasan

Published by : "Srivaishnava Shri", No. 7,
6th 'A' Main Road
Maruthi Extension
Bangalore-560 021




P.P. : viii +194

First Edition : 2001

Price : Rs. 150/-






DTP : Vector Graphics
1532, Gayathrinagar
Bangalore-21

Printed by : Srinidhi Printers
3732, 1st Main
Gayathrinagar
Bangalore-560 021

। ಶ್ರೀಮತೇ ರಾಮಾನುಜಾಯ ನಮಃ ।
। ಪಿಳ್ಳೈ ಲೋಕಾಚಾರ್ಯರ್ ತಿರುವಡಿಗಳೇ ಶರಣಮ್ ।
। ಮಣವಾಳ ಮಾಮುನಿಜೀಯರ್ ತಿರುವಡಿಗಳೇ ಶರಣಮ್ ।

# ಅಂಜಲಿ

ಶ್ರಿಯಃಪತಿಯಾದ ಪರಮಾತ್ಮನ ನಿರ್ಹೇತುಕ ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಭಕ್ತಿರೂಪಾಪನ್ನಜ್ಞಾನವನ್ನು ಪಡೆದವರೇ ಆಳ್ವಾರುಗಳು. ಇವರುಗಳ ದಿವ್ಯಾನುಭವ ಪರೀವಾಹವಾಗಿ ಪ್ರವಹಿಸಿದ್ದೇ ನಾಲ್ಕುಸಾವಿರ ದಿವ್ಯ ಪ್ರಬಂಧಗಳು. 'ದ್ರಾವಿಡವೇದ'ಗಳೆಂದು ಪ್ರಸಿದ್ಧವಾದ ಇವುಗಳನ್ನು ಆಧರಿಸಿಯೇ ಭಗವದ್ರಾಮಾನುಜಾಚಾರ್ಯರು ಭಾಷ್ಯಗಳಲ್ಲಿ ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ ಎಂಬುದನ್ನು **'ಇದು ಕೊಂಡು ಭಾಷ್ಯಕಾರರ್ ಸೂತ್ರವಾಕ್ಯಂಗಳ್ಳೆ ಒರುಂಗ ವಿಡುವರ್'** ಎಂಬ ನಾಯನಾರರ ಶ್ರೀಸೂಕ್ತಿ ಸ್ಪಷ್ಟಪಡಿಸುತ್ತದೆ. ಈ ಮಾರ್ಗವನ್ನೇ ಅನುಸರಿಸಿ ಅನಂತರದ ಆಚಾರ್ಯರುಗಳೂ ಉಭಯವೇದಾಂತಕ್ಕೂ ಸಂಬಂಧಿಸಿದ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ.

ಈ ಆಚಾರ್ಯ ಪರಂಪರೆಯಲ್ಲಿ ಪ್ರಕಾಶಮಾನವಾಗಿ ಬೆಳಗುವ ದಿವ್ಯತಾರೆ ಸ್ವಾಮಿ **'ಪಿಳ್ಳೈಲೋಕಾಚಾರ್ಯ'**ರು. ವಿಶಿಷ್ಟಾದ್ವೈತ ಹಾಗೂ ಶ್ರೀವೈಷ್ಣವ ಸಂಪ್ರದಾಯ ವಿಚಾರಗಳನ್ನು ಪ್ರತಿಪಾದಿಸುವ ಹದಿನೆಂಟು ರಹಸ್ಯ ಗ್ರಂಥಗಳನ್ನು ರಚಿಸಿದ ಮಹಾನುಭಾವರು. **'ಅಷ್ಟಾದಶ ರಹಸ್ಯಂಗಳ್'** ಎಂದೇ ಇವುಗಳು ಇಂದಿಗೂ ಪ್ರಸಿದ್ಧವಾಗಿದೆ.

**'ತತ್ತ್ವತ್ರಯ'** ಅಷ್ಟಾದಶ ರಹಸ್ಯಗಳಲ್ಲಿ ಒಂದು ಮುಖ್ಯವಾದ ರಹಸ್ಯ ಗ್ರಂಥವಾಗಿದೆ. ಇದರಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ಮೂರು ಪ್ರಧಾನ ತತ್ವಗಳಾದ ಚಿತ್, ಅಚಿತ್, ಈಶ್ವರ ತತ್ವಗಳ ನಿರ್ದಿಷ್ಟವಾದ ನಿರೂಪಣೆಯನ್ನು ಸೂತ್ರರೂಪದಲ್ಲಿ ನೀಡಲಾಗಿದೆ.

ಇಂತಹ ಅದ್ಭುತವಾದ ಗ್ರಂಥಕ್ಕೆ ಅತಿಸುಲಭವೂ, ರಮಣೀಯವೂ ಆದ ವ್ಯಾಖ್ಯಾನವನ್ನು ರಚಿಸಿ ಸೂತ್ರಗಳ ಕ್ಲಿಷ್ಟತೆಗಳನ್ನು ಪರಿಹಾರ ಮಾಡಿದ ಮಹೋಪಕಾರಕರು ವಿಶದವಾಕ್‌ಶಿಖಾಮಣಿಗಳಾದ **'ಸ್ವಾಮಿ ಮಣವಾಳ ಮಾಮುನಿಜೀಯರ್'**. ಇದೆಲ್ಲವೂ ಮಣಿಪ್ರವಾಳದಲ್ಲಿ ರಚಿಸಲ್ಪಟ್ಟು ಕನ್ನಡಿಗರಿಗೆ ಇದರ ರಸಾನುಭವ ಕಷ್ಟ ಸಾಧ್ಯವಾಗಿದ್ದನ್ನು ಕಂಡದ್ದರ ಫಲವಾಗಿ ಈ ಕನ್ನಡಾನುವಾದವು ರೂಪತಾಳಿತು. ಇದರ ಜೊತೆಯಲ್ಲೇ **'ವಾನಮಾಮಲೈ ಜೀಯರ್ ಸ್ವಾಮಿ'**ಗಳು ರಚಿಸಿದ ಅನುಬಂಧವೂ ಕನ್ನಡರೂಪತಾಳಿತು. ಇದಕ್ಕೆ ಮೂಲ ಕಾರಣ ಅಡಿಯೇನಳ ಸ್ವಾಚಾರ್ಯರಾದ **'ಶ್ರೀರಾಮಾನುಜಮುನಿ ಯತಿರಾಜನಾರಾಯಣ ಜೀಯರ್ ಸ್ವಾಮಿ'**ಗಳ ಪರಿಪೂರ್ಣ ಅನುಗ್ರಹವಾಗಿದೆ. ಅವರ ಚರಣಗಳಲ್ಲಿ ಆತ್ಮಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಸ್ವಾಮಿ ಪ್ರತಿವಾದಿಭಯಂಕರಂ ಶ್ರೀನಿವಾಸಾಚಾರ್ಯರ್, ಮಹಾಘನ ವಿದ್ವಾಂಸರೂ, ಅತೀ ಸುಲಭರೂ ಸಹೃದಯಿಗಳೂ ಆಗಿದ್ದವರು. ಅಡಿಯೇನಳಿಗೆ ತತ್ವತ್ರಯ ಗ್ರಂಥ ಕಾಲಕ್ಷೇಪ ಹೇಳಿದವರು. ಈಗ ಪರಮಪದನಾಥನ ಕೈಂಕರ್ಯದಲ್ಲಿ ನಿತ್ಯಮುಕ್ತರೊಡನೆ ವಿರಾಜಮಾನವಾಗಿರುವ ಅವರ ಚರಣ ಕಮಲಗಳಲ್ಲಿ ನನ್ನ ಭಕ್ತಿಪೂರ್ವಕ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಈ ಕನ್ನಡಾನುವಾದದ ಸಂದರ್ಭದಲ್ಲಿ ಏರ್ಪಟ್ಟ ಅನೇಕ ಸಂದೇಹಗಳನ್ನು ನಿವಾರಿಸಿ, ಸೂಕ್ತ ಮಾರ್ಗದರ್ಶನವನ್ನು ಮಾಡಿದ್ದಲ್ಲದೆ ಈ ಗ್ರಂಥಕ್ಕೆ 'ಪರಿಚಯ ಲೇಖನ' ನೀಡಿರುವ ಶ್ರೀ ಉ.ವೇ. ಅರೈಯರ್ ಶ್ರೀರಾಮಶರ್ಮರವರ ಚರಣನಳಿನಗಳಲ್ಲಿ ಅಡಿಯೇನಳ ಗೌರವಪೂರ್ವಕ ನಮನಗಳು.

ಇತರ ರಹಸ್ಯಗ್ರಂಥಗಳನ್ನು ಕಾಲಕ್ಷೇಪರೂಪವಾಗಿ ಅನುಗ್ರಹಿಸಿ ಜ್ಞಾನವಿಶದೀಕರಣಕ್ಕೆ ಕಾರಣರಾದ ಮಹಾನುಭಾವರು ಶ್ರೀ.ಉ.ವೇ. ಇಳೈಯವಿಲ್ಲಿ ಭೂವರಾಹಾಚಾರ್ಯರ್. ಅವರ ಅನುಗ್ರಹವಿಲ್ಲದಿದ್ದಲ್ಲಿ ಯಾವ ರಚನೆಯೂ ಅಡಿಯೇನಳಿಗೆ ಅಸಾಧ್ಯ. 'ತತ್ವತ್ರಯವ್ಯಾಖ್ಯಾನ'ದಲ್ಲಿನ ಉಲ್ಲೇಖಗಳಿಗೆ ಅನುಬಂಧ ರಚಿಸಬೇಕೆಂಬ ಸಲಹೆ ನೀಡಿ, ತಮಿಳಿನಲ್ಲಿರುವ ಅನುಬಂಧ ಗ್ರಂಥವನ್ನು ನೀಡಿ ಹರಿಸಿದ ಅವರ ಪಾದ ಪದ್ಮಗಳಲ್ಲಿ ಭಕ್ತಿಪೂರ್ವಕ ಪ್ರಣಾಮಗಳು. ಪ್ರಸ್ತುತ ಪೀಠಾಲಂಕೃತರಾದ ವಾನಮಾಮಲೈ ಜೀಯರ್ ಸ್ವಾಮಿಗಳು ತಮಿಳಿನಲ್ಲಿರುವ ಅನುಬಂಧ ಗ್ರಂಥವನ್ನು ಭಗವತ್ ಭಾಗವತಆಚಾರ್ಯ ಕೈಂಕರ್ಯ ನಿರಂತರ ನಡೆಸುವಂತೆ ಮಹಾಶೀರ್ವಾದ ಮಾಡಿ ಅನುಗ್ರಹಿಸಿದವರು. ಅವರ ಚರಣ ಪದ್ಮಗಳಲ್ಲಿ ಭಕ್ತಿಪೂರ್ವಕ ನಮನಗಳು.

ಇಂತಹ ಗ್ರಂಥಗಳನ್ನು ಪ್ರಕಟಿಸಲು ಆರ್ಥಿಕ ನೆರವು ನೀಡುವವರು ಯಾರು ಎಂಬ ಅವಸಾದದಿಂದ ಅನುವಾದ ಕಾರ್ಯವನ್ನು ಅರ್ಧಕ್ಕೆ ನಿಲ್ಲಿಸಿಬಿಟ್ಟಿದ್ದಾಗ ಅಪರಿಚಿತಳಾಗಿದ್ದ ನನಗೆ ಒತ್ತಾಯಪೂರ್ವಕವಾದ ಪ್ರೋತ್ಸಾಹ ನೀಡಿ ಧನ ಸಹಾಯ ಮಾಡಿ ಶ್ರೀವೈಷ್ಣವ ಸಂಪ್ರದಾಯಕ್ಕೇ ಪರಮ ಉಪಕಾರಿಯಾದವರು **ಶ್ರೀ ಉ.ವೇ. ಅಘಲಯಂ ವಿಜಯರಾಘವಾಚಾರ್ಯಸ್ವಾಮಿಗಳು.** ಗ್ರಂಥರಚನೆಯ ಪರಿಶ್ರಮ ಸಾರ್ಥಕವಾಗುವಂತೆ ತಮ್ಮ ತೀರ್ಥರೂಪರಾದ ಶ್ರೀ.ಉ.ವೇ. ಅಘಲಯಂ ಅನಂತರಂಗಯ್ಯಚಾರ್ಯರ ಸ್ಮಾರಕವಾಗಿ **10,000** ರೂ.ಗಳ ನಿಧಿಯನ್ನು ಈ ಗ್ರಂಥಪ್ರಕಾಶನಕ್ಕೆ ಉದಾರವಾಗಿ ನೀಡಿದ್ದಾರೆ. ಅವರ ಈ ಸಹಾಯ ಹಸ್ತವಿಲ್ಲದಿದ್ದರೆ ಈ ಗ್ರಂಥ ಬೆಳಕನ್ನೇ ಕಾಣುತ್ತಿರಲಿಲ್ಲ ಎಂಬುದು ಅಕ್ಷರಶಃ ಸತ್ಯ. ಶ್ರೀ.ಉ.ವೇ. ಅಘಲಯಂ ವಿಜಯರಾಘವಾಚಾರ್ ದಂಪತಿಗಳಿಗೆ ಆ ಪರಮಾತ್ಮನು ಪರಮಾನುಗ್ರಹ ಮಾಡಲಿ ಎಂದು ಪ್ರಾರ್ಥಿಸುತ್ತಾ ಆ ದಂಪತಿಗಳಿಗೆ ಗೌರವಪೂರ್ವಕ ನಮನಗಳನ್ನು ಸಮರ್ಪಿಸುತ್ತೇನೆ.

ಇವರೊಡನೆ ಅಡಿಯೇನಳನ್ನು ಪ್ರೋತ್ಸಾಹಿಸಿ ಗ್ರಂಥ ಪ್ರಕಾಶನಕ್ಕೆ ಸಹಕರಿಸಿದವರು ಶ್ರೀ.ಉ.ವೇ. ಲಕ್ಷ್ಮೀಕಾಂತಂ ಅಯ್ಯಂಗಾರ್. (ಡೆಪ್ಯೂಟಿ ಡೈರೆಕ್ಟರ್, ಟೆಲಿಕಾಮ್ಸ್) 5000/- ರೂ.ಗಳ ಮೊತ್ತವನ್ನಿತ್ತು ಈ ಸಂಪ್ರದಾಯ ಸೇವೆ ಮಾಡಿರುವ ಇವರಿಗೂ ಇವರ ಕುಟುಂಬಕ್ಕೂ ಭಗವಂತನು ದಿವ್ಯಾನುಗ್ರಹ ಮಾಡಲಿ ಎಂದು ಪ್ರಾರ್ಥಿಸುತ್ತಾ ನನ್ನ ಆದರ ಪೂರ್ವಕ ಪ್ರಣಾಮಗಳನ್ನು ತಿಳಿಸುತ್ತೇನೆ.

ಪರಮ ಸಾತ್ವಿಕರೂ, ಆಚಾರ್ಯ ಭಕ್ತಿನಿಷ್ಠರೂ ಹಿರಿಯವ್ಯಕ್ತಿಗಳೂ ಆಗಿರುವಂತಹವರು, ತಮ್ಮ ಸಹೃದಯ ಪೂರ್ವಕ ವಾತ್ಸಲ್ಯದ ಆಶೀರ್ವಾದದೊಡನೆ 1000/- ರೂ. ಗಳ ಮಂಗಳ ನಿಧಿಯನ್ನಿತ್ತ ಮಹಾನುಭಾವರು **ಶ್ರೀ ಉ.ವೇ. ಅಘಲಯಂ ರಾಮಾನುಜಯ್ಯಂಗಾರ್ ಸ್ವಾಮಿಗಳು.** ವಯೋವೃದ್ಧರೂ, ಶೀಲವೃದ್ಧರೂ, ಜ್ಞಾನವೃದ್ಧರೂ ಆದ ಇವರ ಸ್ಮರಣೆಯೇ ಪರಮಪಾವನವಾದದ್ದು. ಅವರ ತಮ್ಮಂದಿರಾದ ಶ್ರೀ.ಉ.ವೇ. ಸಂಪತ್ತಯ್ಯಂಗಾರ್ಯರು ಅಡಿಯೇನಳ ಪರಿಚಯವಿಲ್ಲದಿದ್ದರೂ ಈ ಗ್ರಂಥ ರಚನೆಯ ವಿಷಯವನ್ನು ಕೇಳಿದೊಡನೆಯೇ 1000/- ರೂ. ಗಳನ್ನಿತ್ತು ಪ್ರೋತ್ಸಾಹಿಸಿದ್ದಾರೆ. ಇವರಿಬ್ಬರ ಚರಣಗಳಲ್ಲೂ ನನ್ನ ಭಕ್ತಿಪೂರ್ವಕ ಪ್ರಣಾಮಗಳು.

ಈ ಗ್ರಂಥವನ್ನು ಬಹಳ ಸಹನೆಯಿಂದ ಹಲವಾರು ಪ್ರೂಫ್‌ಗಳನ್ನು ನೀಡಿ, ಕಂಪೋಸ್ ಮಾಡಿಕೊಟ್ಟ ಶ್ರೀ ಮಂಜುನಾಥರವರಿಗೆ ನನ್ನ ಧನ್ಯವಾದಗಳು.

'ತತ್ವತ್ರಯ' ಗ್ರಂಥದ ಕನ್ನಡಾನುವಾದಕ್ಕೆ ಪ್ರೋತ್ಸಾಹ, ಸಲಹೆಗಳನ್ನಿತ್ತು ಅನೇಕ ಸಹೃದಯರು ಆಶೀರ್ವದಿಸಿದ್ದಾರೆ. ಅವರೆಲ್ಲರಿಗೂ ನನ್ನ ಪ್ರಣಾಮಗಳು.

ಈ ಗ್ರಂಥವನ್ನು ಆದರಿಸಿ, ವಾಚಿಸಿ, ಇನ್ನು ಅಧಿಕವಾಗಿ ಇಂತಹ ಕಾರ್ಯಕ್ಕೆ ಪ್ರೋತ್ಸಾಹ ನೀಡುವ ವಾಚಕ ವೃಂದಕ್ಕೆ ಸಾದರ ಪ್ರಣಾಮಗಳು.

-ಅಡಿಯೇನ್.
ರಮಾ ಶ್ರೀನಿವಾಸನ್

**ವಿ.ಸೂ. : ಸೂತ್ರಗಳ ವ್ಯಾಖ್ಯಾನದಲ್ಲಿನ ಉಲ್ಲೇಖಗಳಿಗೆ ಗ್ರಂಥದ ಎರಡನೆಯ ಭಾಗದಲ್ಲಿ ಕನ್ನಡ ತಾತ್ಪರ್ಯಾರ್ಥಗಳನ್ನು ನೀಡಲಾಗಿದೆ. ಅವಶ್ಯವಿದ್ದಲ್ಲಿ ವಾಚಕರು ಅದರ ಪ್ರಯೋಜನವನ್ನು ಪಡೆಯಬೇಕಾಗಿ ವಿನಂತಿ.**

ಶ್ರೀಮತೇ ರಾಮಾನುಜಾಯ ನಮಃ

# ಗ್ರಂಥ ಪರಿಚಯ

ಭಗವದ್ರಾಮಾನುಜರ ಸಿದ್ಧಾಂತದ ಪ್ರಮೇಯಾಂಶಗಳೆಲ್ಲವೂ ಒಂದೆಡೆ ಅವರ ಗ್ರಂಥಗಳಲ್ಲಿ ಸಿಗುವುದಿಲ್ಲ. ಅವರ ಸಾಕ್ಷಾತ್ ಶಿಷ್ಯರಾದ ಪರಾಶರಭಟ್ಟರು ತಮ್ಮ **'ತತ್ತ್ವರತ್ನಾಕರ'**ಗ್ರಂಥದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಮೇಯಗಳೆಲ್ಲವನ್ನೂ, ಇತರ-ದಾರ್ಶನಿಕರ ವಿಚಾರಗಳೊಡನೆ ವಿಮರ್ಶಿಸಿ ರಾಮಾನುಜದರ್ಶನದ ಖಚಿತವಾದ ಆಕಾರವನ್ನು ಪ್ರಮಾಣ ಸಹಿತವಾಗಿ ನಿರೂಪಿಸಿದ್ದಾರೆ. ಆದರೆ ಈ ಗ್ರಂಥವು ಪೂರ್ಣವಾಗಿ ಸಿಗುವುದಿಲ್ಲವೆಂದೂ ನಷ್ಟವಾಗಿದೆಯೆಂದೂ ತಿಳಿಸಿ, ಆಚಾರ್ಯ **ವೇದಾಂತದೇಶಿಕರು** ತಮ್ಮ **'ನ್ಯಾಯಸಿದ್ಧಾಂಜನ'** ವನ್ನು ಅದೇ ಶೈಲಿಯಲ್ಲಿ ಬರೆದಿದ್ದಾರೆ. ಇದೂ ಸಹ ಇಂದು ಪೂರ್ಣವಾಗಿ ಸಿಗುವುದಿಲ್ಲ. ವೇದಾಂತದೇಶಿಕರಿಂದ ಹಿರಿಯರಾದ ಹಲವಾರು ಆಚಾರ್ಯರು ಸಂಸ್ಕೃತ-ತಮಿಳು-ಮಿಶ್ರ-ಮಾಡಿ ಮಣಿಪ್ರವಾಳ ಭಾಷೆಗಳಲ್ಲಿ ಅನೇಕ ಇಂತಹ ಗ್ರಂಥಗಳನ್ನು ರಚಿಸಿದ್ದರೂ, ಅವು ಯಾವುದೂ ಸರಿಯಾಗಿ ಇಂದು ಉಪಲಬ್ಧವಿಲ್ಲ.

ಉಪಲಬ್ಧವಿರುವ ಗ್ರಂಥಗಳಲ್ಲಿ **ಪಿಳ್ಳೈಲೋಕಾಚಾರ್ಯರ 'ತತ್ತ್ವತ್ರಯಂ'** ಎಂಬ ರಹಸ್ಯ ಗ್ರಂಥವು ವಿಶಿಷ್ಟಾದ್ವೈತ-ಸಿದ್ಧಾಂತದ ಪ್ರಮೇಯಗಳಿಗೆ ಒಂದು ಒಳ್ಳೆಯ ಸಂಗ್ರಹವೂ ಕೈಪಿಡಿಯೂ ಆಗಿದೆ. ಸರಳವೂ, ಸುಂದರವೂ, ನಿರ್ಣಾಯಕವೂ ಆದ ವಿಷಯಗಳ ನಿರೂಪಣ ಶೈಲಿಯು, ಇತರ ವಾದ ವಿವಾದಗಳಿಗೆ ಪ್ರಾಮುಖ್ಯ ಕೊಡದೆ, ವಿಷಯಗಳಿಗೆ ಪ್ರಾಮುಖ್ಯವನ್ನು ಕೊಟ್ಟು, ಸೋದಾಹರಣವಾಗಿ ಹಿತ ಮಿತವಾಗಿ ಇದೆ.

ಪಿಳ್ಳೈಲೋಕಾಚಾರ್ಯರ ಅನೇಕ ರಹಸ್ಯ ಗ್ರಂಥಗಳಲ್ಲಿ **.'ಮುಮುಕ್ಷುಪ್ಪಡಿ, ತತ್ತ್ವತ್ರಯ, ಶ್ರೀವಚನಭೂಷಣಂ** ಎಂಬ ಮೂರಕ್ಕೆ ಮಾತ್ರ **ವಿಶದವಾಕ್‌ಶಿಖಾಮಣಿ** ಎನಿಸಿದ ಮಹಾತ್ಮರಾದ **ಮಣವಾಳಮಾಮುನಿಯವರು** ಬಹಳ ಸೊಗಸಾದ ವ್ಯಾಖ್ಯಾನ ಮಾಡಿದ್ದಾರೆ. ತತ್ತ್ವತ್ರಯದ ಈ ವ್ಯಾಖ್ಯಾನವನ್ನು ಪ್ರಾಚೀನಾಚಾರ್ಯರೆಲ್ಲರು **'ಕುಟ್ಟಿಭಾಷ್ಯ'** ಎಂದು ಕರೆಯುತ್ತಾರೆ, **ಶ್ರೀ ಭಾಷ್ಯವು** ಬ್ರಹ್ಮ ಸೂತ್ರಕ್ಕೆ ವ್ಯಾಖ್ಯಾನವಾದ ಕಾರಣ, ಸಕಲ ಪ್ರಮೇಯ ನಿರೂಪಣೆಯಲ್ಲಿ ಸಂಗ್ರಹ ಮತ್ತು ಕ್ರಮವನ್ನು ಅನುಸರಿಸಲು ಸಾಧ್ಯವಾಗದ ಕಾರಣ, ಬಹಳ ವಿಸ್ತಾರವೂ ಗಹನವೂ ಆದ ಕಾರಣ, ಅದು **ಪತಂಜಲಿ ಮಹರ್ಷಿಯ** ವ್ಯಾಕರಣ **ಮಹಾಭಾಷ್ಯಕ್ಕೆ** ಸಮನಾಗಿ ಪ್ರಸಿದ್ಧವಾದರೂ ಸುಲಭವೆನಿಸಲಿಲ್ಲ. ಶ್ರೀ ರಾಮಾನುಜರ ಅಪರಾವತಾರವೆನಿಸಿ, ದ್ರಾವಿಡ ಸಮುದ್ಧಾರ ಕಾರ್ಯವನ್ನು ನೆರವೇರಿಸಿದ ಮಣವಾಳಮಾಮುನಿಯವರ ಈ ತತ್ತ್ವತ್ರಯ ಭಾಷ್ಯವು ಸರಳ-ಸುಂದರ-ಸಂಗ್ರಹ-ನಿರ್ಣಾಯಕ- ರೂಪದಲ್ಲಿ ಎಲ್ಲರಿಗೂ ಗ್ರಹಿಸಲು ಸುಲಭವಾಗಿದೆ. **'ಕುಟ್ಟಿ'** ಎಂದರೆ ತಮಿಳಿನಲ್ಲಿ ಹಾವು ಮತ್ತು ಚಿಕ್ಕದು. ಆದಿಶೇಷಾವತಾರದಲ್ಲಿ ಪೆರಿಯಭಾಷ್ಯ **'ಶ್ರೀಭಾಷ್ಯ'** ಎನಿಸಿದರೆ, ಇದು ಚಿಕ್ಕ ಚೊಕ್ಕವಾದ **'ಕುಟ್ಟಿ ಭಾಷ್ಯ'** ಎನಿಸಿದೆ.

ಪಿಳ್ಳೈ ಲೋಕಾಚಾರ್ಯರ ಸಮಕಾಲದಲ್ಲೇ ವಾದಿಕೇಸರಿ ಅಳಹಿಯ ಮಣವಾಳ ಜೀಯರ್ ಮತ್ತು ಅವರ ಆಚಾರ್ಯರಾದ ನಾಯನಾರಾಚ್ಚಾನ್ ಪಿಳ್ಳೈ ಇವರೆಲ್ಲರಿಗಿಂತ ಹಿರಿಯರಾದ ನಡುವಿಲ್ ತಿರುವೀಧಿಪ್ಪಿಳ್ಳೈ ಭಟ್ಟರ್ ಮುಂತಾದವರು ''ತತ್ವತ್ರಯ''ದ ಬಗ್ಗೆ ಒಳ್ಳೊಳ್ಳೆಯ ಗ್ರಂಥಗಳನ್ನು ಬರೆದಿದ್ದಾರೆ. ಇವೆಲ್ಲವೂ ಸಂಸ್ಕೃತ ಮತ್ತು ಸುಲಭ ಸಂಸ್ಕೃತ ಮಿಶ್ರವಾದ 'ಮಣಿಪ್ರವಾಳ' ಭಾಷೆಯಲ್ಲೇ ಇವೆ. ಹೀಗಿದ್ದರೂ ಇವುಗಳಲ್ಲಿ ಕೆಲವು ಕಡೆ ಕೆಲವು ವಿಷಯಗಳು ವಿಸ್ತಾರವಾಗಿಯೂ ಮತ್ತೆ ಕೆಲವು ಕಡೆ ಸಂದೇಹ ಬರುವಂತೆಯೂ ಮತ್ತೆ ವಿಸ್ತಾರವು ಅಗತ್ಯವಾಗಿರುವ ಕೆಲವು ಕಡೆ ಅತಿ ಸಂಕ್ಷೇಪವಾಗಿಯೂ ಇವೆ. ಇವುಗಳೆಲ್ಲವನ್ನು ನಮ್ಮ ಗಮನಕ್ಕೆ ತೆಗೆದುಕೊಂಡಾಗ ಪಿಳ್ಳೈ ಲೋಕಾಚಾರ್ಯರ 'ತತ್ವತ್ರಯ' ಗ್ರಂಥದಲ್ಲಿ ಈ ಅರ್ಥಗಳು ಸ್ಪಷ್ಟವಾಗುತ್ತವೆ. ಇತರರ ಗ್ರಂಥಗಳಲ್ಲಿ ಅಸ್ಪಷ್ಟವಾದವುಗಳೂ ಈ ಗ್ರಂಥದಿಂದ

ಸ್ಪಷ್ಟವಾಗುತ್ತವೆ. ಹೀಗೆ 'ತತ್ವತ್ರಯ'ದ ಬಗ್ಗೆ ಸಕಲ ಗ್ರಂಥಗಳೂ ಪರಸ್ಪರ ಉಪಕಾರಕಗಳಾಗಿವೆ. ಈ ಅರ್ಥದ ಮಾತನ್ನು ಸ್ವತಃ ಮಣವಾಳ ಮಾಮುನಿಯವರೇ ತಮ್ಮ ವ್ಯಾಖ್ಯಾನಾರಂಭದಲ್ಲಿ ತಿಳಿಸಿ ಅದರಂತೆ ಅಲ್ಲಲ್ಲೇ ಇತರ ಆಚಾರ್ಯರ ರಹಸ್ಯ ಗ್ರಂಥಗಳಿಂದ ಸ್ಪಷ್ಟೀಕರಣ ಮಾಡಿದ್ದಾರೆ. (ಉದಾ : 82ನೇ ಸೂತ್ರ) **'ಇದು ತಾನ್ ಅಭಿಯುಕ್ತರಾಲೇ ವಿಸ್ತರೇಣ ಪ್ರತಿಪಾದಿಕ್ಕಪಟ್ಟದು''. ''ತ್ರಿವಿಧಾಚೇತನಂಗಳ್ .....ಆಹೈಯಾಲ್ ಪ್ರಮಾಣ ಪ್ರತಿಪನ್ನಾರ್ಥತ್ತಾಕ್ಕ್ ಯುಕ್ತಿವಿರೋಧಂ ಕೊಲ್ಲವರಿಯಿಲ್ಲೈ'' ಎನ್ರ್ ಇಪ್ಪಡಿ ರಹಸ್ಯತ್ರಯ ಸಾರತ್ತಿಲೇ ಪ್ರತಿಪಾದಿಕ್ಕೈಯಾಲೇ.** ಹೀಗೆ ಮಣವಾಳಮಾಮುನಿಯವರು ಅನೇಕ ಎಡೆಗಳಲ್ಲಿ ತಾವು ವ್ಯಾಖ್ಯಾನ ಮಾಡದೆ ವೇದಾಂತ ದೇಶಿಕರೇ ಮುಂತಾದ ಪೂರ್ವಾಚಾರ್ಯರ ವಾಕ್ಯಗಳನ್ನೇ-ತೋರಿಸಿ ಮುಂದುವರೆದಿದ್ದಾರೆ. ಇದು ಈ ತತ್ವತ್ರಯ ವ್ಯಾಖ್ಯಾನದ ಒಂದು ಸರ್ವಾಚಾರ್ಯಾಭಿಪ್ರಾಯಸಮನ್ವಯದ ವಿಶೇಷ.

'ತತ್ತ್ವತ್ರಯ'ದ ಭಾಷಾಂತರ ಕಾರ್ಯವು ನಮಗೆ ತಿಳಿದಂತೆ ಮೊಟ್ಟ ಮೊದಲು ಸಂಸ್ಕೃತದಲ್ಲಿ ಅಹೋಬಲಮಠದ ಶ್ರೀ ನಾರಾಯಣಮುನಿಯವರಿಂದ ಆಗಿದೆ. ಅವರು ತಮ್ಮ 'ಪುರುಷಕಾರಮೀಮಾಂಸೆ' ಎಂಬ ಗ್ರಂಥದಲ್ಲಿ ''ಅತಿಗಂಭೀರ ಸಂದರ್ಭಂ'' ಎಂದು ಪಿಳ್ಳೈಲೋಕಾಚಾರ್ಯರ ಶ್ರೀವಚನಭೂಷಣ'ವನ್ನು ಪ್ರಸ್ತಾಪಿಸಿ ಆಚಾರ್ಯರ ಗ್ರಂಥಗಳೆಲ್ಲವೂ ಆಳವಾದ ಸೂಕ್ಷ್ಮ ವಿಷಯಗಳನ್ನು ಸುಲಭವಾಗಿ ಮೇಲೆತ್ತಿ ತೋರಿಸುವಂತಿದೆ ಎಂದಿದ್ದಾರೆ. ಮೈಸೂರರಸರ ಕಾಲದಲ್ಲಿ ಚಿಕ್ಕುಪಾಧ್ಯಾಯರು ಪಿಳ್ಳೈ ಲೋಕಾಚಾರ್ಯರ ಅಷ್ಟಾದಶರಹಸ್ಯಗಳನ್ನೂ ನಡುಗನ್ನಡದಲ್ಲಿ ಅನುವಾದಿಸಿದ್ದಾರೆ. ಆದರೂ ಅವು ಈಗ ಕನ್ನಡಿಗರಿಗೆ ಸಿಗುವಂತಿಲ್ಲ. ಈಗ **ಶ್ರೀಮತಿ ವಿದುಷಿ ರಮಾ ಶ್ರೀನಿವಾಸನ್** ಅವರು ತತ್ತ್ವತ್ರಯದ ಕುಟ್ಟಿ ಭಾಷ್ಯವನ್ನು ಕನ್ನಡಕ್ಕೆ ಅನುವಾದಿಸುತ್ತಿರುವುದೂ, ಶ್ರೀಅಘಲಯಂ ಗೋಮಠಂ ವಿಜಯರಾಘವಾಚಾರ್ಯ ಮುಂತಾದವರ ಧನ ಸಹಾಯದಿಂದ ಮುದ್ರಿಸಿ ಪ್ರಕಾಶಗೊಳಿಸುತ್ತಿರುವುದೂ ಕನ್ನಡಿಗರಿಗೆ ಬಹಳ ಸಂತೋಷದ ವಿಷಯ, ಹೆಮ್ಮೆಯ ವಿಷಯ.

ಶ್ರೀವೈಷ್ಣವ ಸಿದ್ಧಾಂತದ ಪ್ರಮೇಯಗಳೆಲ್ಲವನ್ನೂ ಸಲಕ್ಷಣವಾಗಿ ತಿಳಿಯಲು ವೇದಾಂತದೇಶಿಕರ 'ತತ್ತ್ವಮುಕ್ತಾಕಲಾಪ-ಸರ್ವಾರ್ಥಸಿದ್ಧಿ' ಗ್ರಂಥಗಳು ಇದ್ದರೂ, ಇವು ಪ್ರೌಢ-ಸಂಸ್ಕೃತ-ಶಾಸ್ತ್ರ-ಶೈಲಿಯಲ್ಲಿವೆ. ದೊಡ್ಡಯ್ಯಾಚಾರ್ಯರ ಶಿಷ್ಯರಾದ ಸ್ವಾಮಿ ಪುಷ್ಕರಣೀ ಶ್ರೀನಿವಾಸಾಚಾರ್ಯರ 'ಯತೀಂದ್ರಮತದೀಪಿಕೆ'ಯು ಸಂಸ್ಕೃತದಲ್ಲಿ ಸುಲಭವಾಗಿದ್ದರೂ, ಪಿಳ್ಳೈಲೋಕಾಚಾರ್ಯರ 'ತತ್ತ್ವತ್ರಯ'ದಷ್ಟು ರಮಣೀಯವಾಗಿಲ್ಲ ಮತ್ತು ಉಭಯವೇದಾಂತಿಗಳೂ ಉಭಯಭಾಷಾವಂತರೂ ಆದ ಶ್ರೀವೈಷ್ಣವರಿಗೆ ಈ ತತ್ತ್ವತ್ರಯವು ಮಣಿಪ್ರವಾಳ ಭಾಷೆಯಲ್ಲಿ ಅನುರೂಪವಾಗಿ ಮೂಡಿ ಬಂದಿದೆ.

ಇದೆಲ್ಲವನ್ನೂ ಕನ್ನಡದಲ್ಲಿ ಈಗಿನವರು ಅನುಭವಿಸಲು ಅವಕಾಶ ಮಾಡಿಕೊಟ್ಟ ಸೌಭಾಗ್ಯ **ಶ್ರೀಮತಿ ರಮಾ ಶ್ರೀನಿವಾಸನ್** ಅವರದಾಗಿದೆ.

ವ್ಯಾಖ್ಯಾನದ ಅನುವಾದದ ಜೊತೆಗೆ ವ್ಯಾಖ್ಯಾನದಲ್ಲಿ ಉದಾಹರಿಸಿರುವ ಶ್ರುತಿ-ಸ್ಮೃತಿ-ಇತಿಹಾಸ-ಪುರಾಣಗಳ ವಾಕ್ಯಗಳನ್ನೂ, ಶ್ಲೋಕಗಳನ್ನೂ ವಿವರಿಸಿ ತಿಳಿಸುವ ವಾನಮಾಮಲೈ ಸ್ವಾಮಿಯವರ ಟಿಪ್ಪಣಿಗಳನ್ನೂ ಶ್ರೀಮತಿ ರಮಾ ಶ್ರೀನಿವಾಸನ್‌ರವರು ಕನ್ನಡಿಸಿ ಓದುಗರಿಗೆ ಹೆಚ್ಚು ಉಪಕಾರ ಮಾಡಿರುತ್ತಾರೆ. ತೆಂಗಲೆ, ವಡಗಲೆ ಎಂಬ ಕೃತಕ ಭೇದವನ್ನು ದೂರೀಕರಿಸಿ ಸಕಲ ಶ್ರೀವೈಷ್ಣವರೂ ಕನ್ನಡದಲ್ಲಿ ಆದರದಿಂದ ಸ್ವೀಕರಿಸಬಹುದಾದ ಗ್ರಂಥ ಇದಾಗಿದೆ.

ಇಂತು ವಿಜ್ಞಾಪಕ

**ತಿರುನಾರಾಯಣಪುರಂ ಅರೆಯರ್**

**ಶ್ರೀರಾಮಶರ್ಮ ರಾಮಾನುಜ ದಾಸಾನುದಾಸ**

**ಮೇಲುಕೋಟೆ**

|| ಶ್ರೀ ||

|| ಶ್ರೀಮತೇ ರಾಮಾನುಜಾಯ ನಮಃ ||

# ಪುಸ್ತಕ ಪ್ರಕಾಶನಕ್ಕೆ ಉಪಕರಿಸಿದ ದಾನಿಗಳು

| | |
|---|---|
| ಶ್ರೀ ಉ.ವೇ. ಅಘಲಯ ವಿಜಯರಾಘವಾಚಾರ್ | 10,000 ರೂ.ಗಳು |
| ಶ್ರೀ ಉ.ವೇ. ಲಕ್ಷ್ಮೀಕಾಂತಂ ಅಯ್ಯಂಗಾರ್ | 5,000 ರೂ.ಗಳು |
| ಶ್ರೀ ಉ.ವೇ. ಆರ್.ಎ. ಶ್ರೀನಿವಾಸನ್ | 5,000 ರೂ.ಗಳು |
| ಶ್ರೀ ಉ.ವೇ. ಅಘಲಯಂ ರಾಮಾನುಜ ಅಯ್ಯಂಗಾರ್ | 1,000 ರೂ.ಗಳು |
| ಶ್ರೀ ಸಂಪತ್ತಯ್ಯಂಗಾರ್ | 1,000 ರೂ.ಗಳು |
| ಶ್ರೀಮತಿ ಸುಶೀಲಾ ರಾಜಗೋಪಾಲ್ | 800 ರೂ.ಗಳು |
| ಶ್ರೀಮತಿ ಭಾರತಿ | 500 ರೂ.ಗಳು |
| ಶ್ರೀಮತಿ ಗೀತಾ | 1,000 ರೂ.ಗಳು |

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಪಿಳ್ಳೈ ಲೋಕಾಚಾರ್ಯರ್ ತಿರುವಡಿಗಳೇ ಶರಣಮ್.

ಜೀಯರ್ ತಿರುವಡಿಗಳೇ ಶರಣಮ್

# ತತ್ತ್ವತ್ರಯ ವ್ಯಾಖ್ಯಾನಮ್

**ಲೋಕಾಚಾರ್ಯಾಯ ಗುರವೇ ಕೃಷ್ಣಪಾದಸ್ಯ ಸೂನವೇ।**

**ಸಂಸಾರಭೋಗಿ ಸಂದಷ್ಟ ಜೀವಜೀವಾತವೇಃ ನಮಃ।**

**ಶ್ರೀ ಶೈಲೇಶದಯಾಪಾತ್ರಂ ಧೀಭಕ್ತ್ಯಾದಿ ಗುಣಾರ್ಣವಂ।**

**ಯತೀಂದ್ರಪ್ರವಣಂ ವಂದೇ ರಮ್ಯಜಾಮಾತರಂ ಮುನಿಮ್।**

## ಅವತಾರಿಕೆ

**'ಅನಾದಿಮಾಯಯಾ ಸುಪ್ತಃ'** ಎಂಬಂತೆ ಅನಾದಿಯಾದ ಅಚಿತ್ ಸಂಬಂಧದಿಂದ ಉಂಟಾದ ಅಜ್ಞಾನಾಂಧಕಾರದಿಂದ ಕವಿಯಲ್ಪಟ್ಟು, ಆತ್ಮ ಸ್ವರೂಪವು ಪ್ರಕೃತಿತತ್ವಕ್ಕಿಂತ ಉತ್ಕೃಷ್ಟವಾದದ್ದೆಂದೂ, ಜ್ಞಾನಾನಂದಮಯವಾಗಿ ಭಗವದನನ್ಯಾರ್ಹ ಶೇಷವಾದದ್ದೆಂದೂ ಅರಿಯದೆ, **'ದೇವೋಹಂ ಮನುಷ್ಯೋಹಂ'** ಎಂದು ಜಡವಾದ ದೇಹದಲ್ಲಿ 'ನಾನು' ಎಂಬ ಭಾವನೆಯನ್ನು ಮಾಡುವುದು; ಆತ್ಮ ಬೇರೆ, ದೇಹ ಬೇರೆ ಎಂಬ ಜ್ಞಾನ ಏರ್ಪಟ್ಟರೆ **'ಈಶ್ವರೋಹಂ : ಅಹಂ ಭೋಗೀ'** ಎಂಬುದಾಗಿ ಆತ್ಮ ಸ್ವತಂತ್ರನೆಂದು ಭಾವಿಸುವುದು; ಆತ್ಮ ದಾಸಭೂತ ಎಂಬ ಜ್ಞಾನ ಏರ್ಪಟ್ಟರೂ ಅದನ್ನು ಅಪ್ರಾಪ್ತ ವಿಷಯಗಳಲ್ಲಿ ವಿನಿಯೋಗಿಸುವುದು . ಹೀಗೆ

**ಯೋಽನ್ಯಥಾ ಸನ್ತಮಾತ್ಮಾನಮನ್ಯಥಾ ಪ್ರತಿಪದ್ಯತೇ।** [1]

**ಕಿಂ ತೇನ ನಕೃತಂ ಪಾಪಂ ಚೋರೇಣ ಆತ್ಮಾ ಪರಿಹಾರಿಣಾ।**

ಎಂಬಂತೆ ಆತ್ಮ ಸ್ವರೂಪದಲ್ಲಿ ಬೇರೊಂದು ಪ್ರತಿಪತ್ತಿ ಯಿಂದ ಸಕಲಪಾಪಕ್ಕೂ ಮೂಲವಾದ ಆತ್ಮಾಪಹಾರವನ್ನು ಮಾಡಿ, ಅಲ್ಪ, ಅಸ್ಥಿರ ಮುಂತಾದ ದೋಷಗಳಿಂದ ಕೂಡಿದ ಶಬ್ದಾದಿ ಭೋಗಗಳಲ್ಲಿ ತತ್ಪರರಾಗಿ

**ವಿಚಿತ್ರಾದೇಹ ಸಂಪತ್ತಿಃ ಈಶ್ವರಾಯ ನಿವೇದಿತುಂ।** [2]

**ಪೂರ್ವಮೇವ ಕೃತಾ ಬ್ರಹ್ಮನ್ ಹಸ್ತಪಾದಾದಿಸಂಯುತಾ।**

ಎಂಬಂತೆ ಕರಣಕಳೇಬರಗಳಿಲ್ಲದೆ ಭೋಗ ಮೋಕ್ಷ ಶೂನ್ಯರಾಗಿ ಅಚಿತ್ ಸಂಪರ್ಕವೇ ಇಲ್ಲದೆ ಪ್ರಳಯ ಸಾಗರದಲ್ಲಿ ಬಿದ್ದಿರುವ ಸ್ಥಿತಿಯಲ್ಲಿ , ಪರಮದಯಾಳುವಾದ ಸರ್ವೇಶ್ವರನು ತನ್ನ ಚರಣಕಮಲಗಳನ್ನು ಸಮಾಶ್ರಯಣ ಮಾಡುವುದಕ್ಕೆ ಉಪಕರಣವಾಗಿ ಕೊಟ್ಟ ಶರೀರದಿಂದ ಪರಮಾತ್ಮನನ್ನು ಆಶ್ರಯಿಸಿ ಉಜ್ಜೀವಿಸಬೇಕಾಗಿರುವಾಗ ಹಾಗೆ ಮಾಡದೆ **'ಅನ್ನಾಳ್ ನೀತನ್ದ ಆಕ್ಕೈಯಿನ್'** ಎಂಬಂತೆ ಆ ಇಂದ್ರಿಯಗಳ ಜಾಡಿನಲ್ಲಿ ಹೋಗಿ ನದಿಯನ್ನು ದಾಟಲು ಕೊಟ್ಟ ದೋಣಿಯ ಮೂಲಕ ಆಚೆ ದಡವನ್ನು ಸೇರಬೇಕಾಗಿರುವಾಗ ನದಿ

ನೀರಿನ ಪ್ರವಾಹಕ್ಕೆ ಅನುಗುಣವಾಗಿ ಹರಿದು ಸಾಗರವನ್ನು ಸೇರುವವರಂತೆ, ಸಂಸಾರಸಾಗರ ದಾಟಲು ಉಪಕಾರಿಯಾದ ಕರಣ ಕಳೇಬರಗಳನ್ನು ಸಂಸರಣಕ್ಕೆ ಸಾಧನವಾಗಿಸಿ; ಅನಾದಿಯಾದ ಅವಿದ್ಯೆಯಿಂದ ಒಟ್ಟು ಗೂಡಿರುವ ಅನಂತ ಪುಣ್ಯಪಾಪರೂಪ ಕರ್ಮಾನುಗುಣವಾಗಿ **'ಮಾರಿಮಾರಿ ಪಲಪಿರುಪ್ಪುಂ ಪಿರಂದು '** ಎಂಬಂತೆ ಮತ್ತೆ ಮತ್ತೆ ಹುಟ್ಟಿ, ಜನ್ಮಪೂರ್ತಿ ತಾಪತ್ರಯದ ಬೇಗೆಯಲ್ಲಿ ಬೆಂದು, ಹೀಗೆ ಅನಾದಿಕಾಲ ನಡೆಯುತ್ತಿರಲು ಏನೊಂದನ್ನೂ ಅರಿಯದವನಾದ್ದರಿಂದ ಯಾವ ಕ್ಲೇಶವೂ ಇಲ್ಲದೆ ಗರ್ಭ, ಜನ್ಮ ,ಬಾಲ್ಯ, ಯೌವನ, ವಾರ್ಧಕ್ಯ, ಮರಣ, ರೂಪವಾದ ಅವಸ್ಥಾ ಸಪ್ತಕವನ್ನು ಹೊಂದಿ ದುಃಖ ಪರಂಪರೆಗಳನ್ನು ಅನುಭವಿಸುತ್ತಾ, ಅನಂತ ಕ್ಲೇಶ ಭಾಜನವಾದ ಸಂಸಾರ ಸಾಗರದಲ್ಲಿ ಮುಳುಗಿರುವ ಚೇತನರ ಅನರ್ಥ ವಿಶೇಷವನ್ನು ಕಂಡು. ಈ ಚೇತನರ ಉಜ್ಜೀವನಕ್ಕಾಗಿ ಕೃಷಿ ಮಾಡುವ ಸರ್ವಭೂತ ಸುಹೃತ್ತಾದ ಸರ್ವೇಶ್ವರನು **'ಏವಂ ಸಂಸೃತಿ ಚಕ್ರಸ್ಥೇ ಭ್ರಾಮ್ಯಮಾಣೇ ಸ್ವಕರ್ಮ ಜೀವೇ ದುಃಖಾಕುಲೇವಿಷ್ಣೋಃ ಕೃಪಾಕಾಪ್ಯುಪಜಾಯತೇ।'** [3] ಎಂಬಂತೆ ತನ್ನ ಹೃದಯದಲ್ಲಿ ಏರ್ಪಟ್ಟ ಅಪಾರ ಕಾರುಣ್ಯದಿಂದ **'ಜಾಯಮಾನಂ ಹಿ ಪುರುಷಂ ಯಂ ಪಶ್ಯೇತ್ ಮಧುಸೂದನಃ ॥ ಸಾತ್ವಿಕಸ್ಸತು ವಿಜ್ಞೇಯಃ ಸ ವೈ ಮೋಕ್ಷಾರ್ಥಚಿಂತಕಃ'** [4] ಎಂಬಂತೆ ಹುಟ್ಟುವ ಕಾಲದಲ್ಲಿ ಪರಮಾತ್ಮ ಮಾಡಿದ ವಿಶೇಷ ಕಟಾಕ್ಷದಿಂದ ಸಮಸ್ತ ರಜಸ್ಸು, ತಮಸ್ಸುಗಳು ಕಳೆದು ಸತ್ವಗುಣವು ಪ್ರವೃದ್ಧವಾಗಿ, ಮುಮುಕ್ಷುವಾದ ಚೇತನನಿಗೆ ತತ್ವಜ್ಞಾನ ಏರ್ಪಟ್ಟ ಹೊರತು ಮೋಕ್ಷ ಸಿದ್ಧಿ ಇಲ್ಲದ್ದರಿಂದ, ತತ್ವಜ್ಞಾನವು ಶಾಸ್ತ್ರಗಳಿಂದಲೋ ಅಥವಾ ಉಪದೇಶದಿಂದಲೋ ಏರ್ಪಡಬೇಕಾಗಿರುವುದು. **'ಶಾಸ್ತ್ರ ಜ್ಞಾನಂ ಬಹುಕ್ಲೇಶಂ ಬುದ್ಧೇಶ್ಚಲನ ಕಾರಣಂ '** ಎಂಬಂತೆ ಶಾಸ್ತ್ರಜ್ಞಾನವು ಅತ್ಯಂತ ಕ್ಲೇಶಕರವಾದ್ದರಿಂದ ದುಸ್ಸಾಧ್ಯವಾದದ್ದಾಗಿ ಹೇಗೋ ಕಷ್ಟಪಟ್ಟು ಸಾಧಿಸಿ **'ಅನಂತಪಾರಂ ಬಹುವೇದಿತವ್ಯಂ ಅಲ್ಪಶ್ಚ ಕಾಲೋ ಬಹವಶ್ಚ ವಿಘ್ನಾಃ'** [5] ಎಂಬಂತೆ ಚೇತನರು ಮಂದಮತಿಗಳೂ ಅಲ್ಪ ಆಯಸ್ಸುಗಳೂ ಆಗಿ ಅದಕ್ಕೆ ಬೇರೆ ವಿಘ್ನಗಳು ಅಪಾರವಾಗಿರುವುದರಿಂದಲೂ ಎಲ್ಲರಿಗೂ ಸುಲಭವಲ್ಲದ್ದರಿಂದಲೂ, ಸ್ತ್ರೀ ಶೂದ್ರಾದಿಗಳಿಗೆ ಮುಮುಕ್ಷತ್ವ ಏರ್ಪಟ್ಟರೂ, ಶಾಸ್ತ್ರಾಭ್ಯಾಸಕ್ಕೆ ಅವರು ಅನಧಿಕಾರಿಗಳಾದ್ದರಿಂದ ಶಾಸ್ತ್ರಗಳಿಂದ ಜ್ಞಾನವನ್ನು ಪಡೆಯುವುದು ಕಷ್ಟ ಸಾಧ್ಯ. ಆದರೆ ಉಪದೇಶದಿಂದ ಜ್ಞಾನವನ್ನು ಪಡೆಯುವುದಾದರೆ ಇಂತಹ ದೋಷಗಳೊಂದೂ ಇಲ್ಲವಾಗುತ್ತದೆ. ಆದ್ದರಿಂದ ಸಕಲಶಾಸ್ತ್ರನಿಪುಣರಾದ ಈ ವಿಶೇಷಾರ್ಥಗಳನ್ನು ಹೃದ್ಗತವಾಗಿಸಿಕೊಂಡ ಸ್ವಾಮಿ ಪಿಳ್ಳೆಲೋಕಾಚಾರ್ಯರು ಶ್ರುತಿ ಸ್ಮೃತಿ ಇತಿಹಾಸ ಪುರಾಣಗಳಲ್ಲಿ ದುರವಗಾಹವಾಗಿ ಹೇಳಲ್ಪಟ್ಟಿರುವ ಚಿತ್, ಅಚಿತ್, ಈಶ್ವರರುಗಳ ಸ್ವರೂಪ, ಸ್ವಭಾವ ವಿಶೇಷಗಳನ್ನು ಸಕಲ ಚೇತನರೂ ಅರಿಯುವಂತೆ ಸುಗ್ರಹವಾಗಿಯೂ, ಸುವ್ಯಕ್ತವಾಗಿಯೂ ಈ 'ತತ್ವತ್ರಯಂ' ಎಂಬ ಗ್ರಂಥದ ಮೂಲಕ ಅನುಗ್ರಹಿಸಿದ್ದಾರೆ.



ಶ್ರೀಃ
ಪಿಳ್ಳೈ ಲೋಕಾಚಾರ್ಯರ್ ತಿರುವಡಿಕಳೇ ಶರಣಮ್.
ಜೀಯರ್ ತಿರುವಡಿಕಳೇ ಶರಣಮ್
ಸರ್ವಜ್ಞರಾದ ಪಿಳ್ಳೈ ಲೋಕಾಚಾರ್ಯರ್ ಅನುಗ್ರಹಿಸಿದ

# ತತ್ವತ್ರಯಮ್

## ಚಿತ್ ಪ್ರಕರಣಮ್

### ಸೂ. 1 ಮುಮುಕ್ಷುವಾನ ಚೇತನನಕ್ಕು ಮೋಕ್ಷಮುಣ್ಡಾಮ್ಪೋದು ತತ್ವತ್ರಯ ಜ್ಞಾನ ಮುಣ್ಡಾಕವೇಣುಮ್

ಮುಮುಕ್ಷುವಾದ ಚೇತನನಿಗೆ ತತ್ವತ್ರಯ ಜ್ಞಾನವು ಏರ್ಪಡಬೇಕು.

**(ಮುಮುಕ್ಷು)**- ಎಂದರೆ ಮುಕ್ತನಾಗಲು ಇಚ್ಛಿಸುವವನು. ಸಂಸಾರದಿಂದ ಬಿಡುಗಡೆಯನ್ನು ಪಡೆಯಲು ಅಪೇಕ್ಷಿಸುವವನು. 'ಮುಮುಕ್ಷುವಾನ' ಎಂಬುದರಿಂದ ಸಂಸಾರದಿಂದ ವಿಮೋಚನೆಯನ್ನು ಬಯಸುವವರು ಅತಿವಿರಳ ಎಂಬುದು ಸೂಚಿತವಾಗುತ್ತದೆ. ಈ ಇಚ್ಛೆ ಉಂಟಾಗದೇ ಇದ್ದುದರಿಂದಲೇ ಅನಾದಿಕಾಲ ಈ ಸಂಸಾರದಲ್ಲಿ ಇದ್ದದ್ದು. ಚೇತನರನ್ನುದ್ದರಿಸಲು ಆಸೆಯುಳ್ಳ ಸರ್ವೇಶ್ವರನೂ ಸಂಸಾರಿಗೆ ಈ ಇಚ್ಛೆ ಏರ್ಪಡುವುದನ್ನೇ ನಿರೀಕ್ಷಿಸುತ್ತಿರುತ್ತಾನೆ. ಸಂಸಾರವನ್ನು ಹೇರಿಕೊಳ್ಳಲು ಇಚ್ಛಿಸುವ ಆತ್ಮನಿಗೆ ಅದರ ನಿವೃತ್ತಿಯಲ್ಲಿ ಇಚ್ಛೆ ಉಂಟಾಗುವುದು ದುರ್ಲಭ ತಾನೇ.

**(ಚೇತನನ್)**-ಈ ಪದವೂ ಸಾಭಿಪ್ರಾಯವಾಗಿದೆ. ಚೈತನ್ಯದ ಪ್ರಯೋಜನವು ಏರ್ಪಡಲು ಪ್ರಾರಂಭಿಸುವುದೇ ಮುಮುಕ್ಷುತ್ವ ಏರ್ಪಟ್ಟಾಗ ಮಾತ್ರವೇ. ಉಜ್ಜೀವನಕ್ಕೆ ಆ ಚೈತನ್ಯ ಕಾರಣವಾಗದ್ದರಿಂದಲೇ ಅದು ಮುಕ್ತಿಯನ್ನು ಬಯಸುವುದು. ಅನಾದಿಕಾಲದಿಂದ ವ್ಯರ್ಥವಾಗಿದೆ ಈ ಚೈತನ್ಯ (ನಿರಾಸ್ತಾತಿಶಯ ಆಹ್ಲಾದ ಸುಖಭಾವೈಕ ಲಕ್ಷಣ್ಯೆಯಾದ) ಅತ್ಯಂತ ಆನಂದಮಯವಾದ ಭಗವತ್ಪ್ರಾಪ್ತಿಗೆ ಅನುವಾಗುವುದೇ ಈ ಚೈತನ್ಯದ ಪ್ರಯೋಜನವಾಗಿದೆ. **'ತಾಮರೈಯಾಳ್ ಕೇಳ್ವನ್ ಒರುವನ್ನೈಯೇ ನೋಕ್ಕುಂ ಉಣರ್ವು'** ಎಂಬಂತೆ ಶ್ರಿಯಃಪತಿಗೆ ಅಭಿಮುಖವಾಗುವುದೇ 'ಎಚ್ಚರ', 'ಜ್ಞಾನ' ಎನ್ನಲಾಗಿದೆ.ಆತ್ಮಪ್ರಾಪ್ತಿಗಾಗಿ ಸಂಸಾರ ನಿವೃತ್ತಿಯನ್ನು ಇಚ್ಛಿಸಿದರೂ ಅದು ವಿಪರೀತ ಜ್ಞಾನವಾಗುತ್ತದೆ. ಆದ್ದರಿಂದ ಭಗವತ್ಪ್ರಾಪ್ತಿಗೆ ವಿರುದ್ಧವಾದ ಸಂಸಾರದ ನಿವೃತ್ತಿಯಲ್ಲಿ ಅಪೇಕ್ಷೆಯುಳ್ಳ ಅಧಿಕಾರಿಗೆ, ಅವನಾಸೆಪಡುವ ಮೋಕ್ಷ ಪುರುಷಾರ್ಥ ಲಭಿಸುವ ಸಮಯದಲ್ಲಿ 'ತತ್ವತ್ರಯ' ಜ್ಞಾನ ಉಂಟಾಗಬೇಕು. ತತ್ವತ್ರಯ ಜ್ಞಾನೋತ್ಪತ್ತಿಗೆ ಮುನ್ನವೇ ಮುಮುಕ್ಷುತ್ವ ಉಂಟಾಗುವುದೇ ಎಂದರೆ 'ಪರೀಕ್ಷ್ಯಲೋಕಾನ್';

**'ಜಾಯಮಾನಂ ಹಿ ಪುರುಷಂ ಯಂ ಪಶ್ಯೇತ್ ಮಧುಸೂದನಃ'।**[1]

**ಸಾತ್ವಿಕಸ್ತು ವಿಜ್ಞೇಯಃ ಸವೈ ಮೋಕ್ಷಾರ್ಥ ಚಿಂತಕಃ॥**

ಇತ್ಯಾದಿ ಶ್ರುತಿ ಸ್ಮೃತಿ ಪ್ರಮಾಣಗಳಲ್ಲಿ ಹೇಳಲ್ಪಡುವಂತೆ ಭಗವತ್ ಕಟಾಕ್ಷದಿಂದ ಮುಮುಕ್ಷುತ್ವವು ಏರ್ಪಡುತ್ತದೆ.

**(ಉಣ್ಣಾಕವೇಣುಮ್)**-ಎಂದು ಅವಶ್ಯಾಪೇಕ್ಷಿತವು ತೋರುವಂತೆ ಹೇಳಿರುವುದರಿಂದ **'ತತ್ವಜ್ಞಾನಾತ್ ಮೋಕ್ಷಲಾಭಮ್'** ಎಂಬ ನಿಯಮವು ಸೂಚಿಸಲ್ಪಟ್ಟಿದೆ. **'ತತ್ವಜ್ಞಾನಾನ್ಮೋಕ್ಷಂ'** ಎಂಬುದು ಸಕಲ ಸಿದ್ಧಾಂತಕ್ಕೂ ಸಾಧಾರಣವಾದದ್ದು. ಮೋಕ್ಷದಲ್ಲೂ, ತತ್ವದಲ್ಲೂ ಬೇರೆ ಬೇರೆ ಮತಾನುಸಾರ ವ್ಯತ್ಯಾಸಗಳಿವೆಯಷ್ಟೇ. ಆದರೆ **'ಜ್ಞಾನಾನ್ಮೋಕ್ಷಮ್'** ಎಂಬ ನಿಯಮವನ್ನು ಹೇಳುವಾಗ

**ಪಶುರ್ಮನುಷ್ಯಃ ಪಕ್ಷೀವಾ ಯೇ ಚ ವೈಷ್ಣವ ಸಂಶ್ರಯಾಃ।**
**ತೇನೈವ ತೇ ಪ್ರಯಾಸ್ಯಂತೇ ತದ್ವಿಷ್ಣೋಃ ಪರಮಂಪದಂ ।** [2] ಎಂದೂ
**ಯಂ ಯಂ ಸ್ಪೃಶತಿ ಪಾಣಿಭ್ಯಾಂ ಯಂ ಯಂ ಪಶ್ಯತಿ ಚಕ್ಷುಷಾ।**
**ಸ್ಥಾವರಾಣ್ಯಾಪಿ ಮುಚ್ಯಂತೇ ಕಿಂ ಪುನರ್ ಬಾಂಧವಾಜನಾಃ।** [3]

ಎಂದೂ ಜ್ಞಾನ ಯೋಗ್ಯತೆಯಿಲ್ಲದ ತಿರ್ಯಕ್ ಸ್ಥಾವರಗಳಿಗೂ, ವೈಷ್ಣವ ಸಂಬಂಧದಿಂದ ಮೋಕ್ಷ ಸಿದ್ಧಿಯೆಂದು ಹೇಳುವ ವಾಕ್ಯಗಳನ್ನೂ ಹೇಗೆ ಸಮನ್ವಯ ಮಾಡುವುದು? ವಿರೋಧವೇರ್ಪಡುವುದಿಲ್ಲವಾ ಎಂದರೆ ಇಲ್ಲ ಎನ್ನುತ್ತಾರೆ. ಏಕೆಂದರೆ ಅವುಗಳಿಗೆ ಮುಮುಕ್ಷುತ್ವವೇ ಇಲ್ಲ. ಇಲ್ಲಿ ಮುಮುಕ್ಷುವಾದ ಚೇತನನಿಗೆ ಮೋಕ್ಷಸಿದ್ಧಿಗಾಗಿ ಜ್ಞಾನ ಎನ್ನಲಾಗಿದೆ. ಮೃಗ, ಪಕ್ಷಿ ವೃಕ್ಷಾದಿಗಳ ವಿಷಯದಲ್ಲೂ ಈ ತತ್ವಜ್ಞಾನ ಪರಿಪೂರ್ಣವಾಗುಳ್ಳ ಒಬ್ಬ ವೈಷ್ಣವನ ಅಭಿಮಾನವೇ ಕಾರ್ಯಕರವಾದದ್ದಾಗಿದೆ. ಆದ್ದರಿಂದ ಆಭಿಮಾನಿಯ ಜ್ಞಾನ ವಿಶೇಷವನ್ನು ನೋಡಿಯೇ ಅಭಿಮಾನಕ್ಕೊಳಪಟ್ಟು ಇವುಗಳ ಕಾರ್ಯವನ್ನು ಪರಮಾತ್ಮ ಮಾಡುತ್ತಾನಾದ್ದರಿಂದ 'ಜ್ಞಾನಾನ್ಮೋಕ್ಷಮ್' ಎಂಬುದು ಸದ್ವಾರಕವಾಗಿ (ವೈಷ್ಣವನ ಅಭಿಮಾನದ ಮೂಲಕ) ಸಿದ್ಧಿಸುತ್ತದೆ.

**(ತತ್ವತ್ರಯ ಜ್ಞಾನಮ್)**-ತತ್ವಜ್ಞಾನ ಎನ್ನದೆ 'ತತ್ವತ್ರಯಜ್ಞಾನ' ಎಂದಿರುವುದರಿಂದ ತತ್ವಗಳನ್ನು ಮೂರಕ್ಕಿಂತ ಅಧಿಕವಾಗಿಯೂ, ಕಡಿಮೆಯಾಗಿಯೂ ಅಂಗೀಕರಿಸುವ ಬಾಹ್ಯಕುದೃಷ್ಟಿಮತಗಳು ನಿವಾರಿಸಲ್ಪಟ್ಟಿವೆ.

'ತತ್ವತ್ರಯ' ಎಂದು ನಿರ್ಣಯಿಸಲು ಪ್ರಮಾಣವೇನೆಂದರೆ: ನಿರ್ದೋಷ ಪ್ರಮಾಣವಾದ ವೇದಾಂತಗಳು **'ಭೋಕ್ತಾ ಭೋಗ್ಯಂ ಚ ಪ್ರೇರಿತಾರಂ ಚಮತ್ವಾ'** [4] ಎಂಬುದಾಗಿ ಭೋಕ್ತೃ, ಭೋಗ್ಯ, ಪ್ರೇರಯಿತೃ ' ಶಬ್ದಗಳಿಂದ ಚಿತ್, ಅಚಿತ್, ಈಶ್ವರನೆಂಬ ಮೂರು ತತ್ವಗಳನ್ನೇ ಹೇಳಿರುವುದು. ಆದ್ದರಿಂದ ವೇದಾಂತ ಪ್ರತಿಪಾದ್ಯವಾದದ್ದು ತತ್ವತ್ರಯವೇ ಎಂದು ನಿಶ್ಚಯಿಸಿ, ಮೋಕ್ಷವುಂಟಾಗಲು ತತ್ವತ್ರಯ ಜ್ಞಾನವು ಏರ್ಪಡಬೇಕು ಎನ್ನಲಾಗಿದೆ.

**ಆದರೆ ತಮೇವಂ ವಿದ್ವಾನ್ ಅಮೃತ ಇಹ ಭವತಿ ।**
**ನಾನ್ಯಃ ಪಂಥಾ ಅಯನಾಯ ವಿದ್ಯತೇ।** [5]

ಎಂದು ವೇದಾಂತಗಳು ಭಗವತತ್ವಜ್ಞಾನವೊಂದೇ ಮೋಕ್ಷಸಾಧನ ಎನ್ನುವಾಗ ಇಲ್ಲಿ ಉಳಿದ ತತ್ತ್ವಗಳ ಜ್ಞಾನವೂ ಮೋಕ್ಷಸಾಧನವೆನ್ನಲು ಕಾರಣವೇನೆಂದರೆ, ಭಗವತತ್ತ್ವವನ್ನು ಅರಿಯುವಾಗ ಸಕಲ ಚೇತನಾಚೇತನ ವಿಲಕ್ಷಣವಾಗಿಯೂ, ಇವುಗಳಿಗೆ (ಚೇತನ ಮತ್ತು ಅಚೇತನಗಳಿಗೆ) ಈಶ್ವರನನ್ನು ಕಾರಣವಾಗಿಯೂ, ವ್ಯಾಪಕವಾಗಿಯೂ ಧಾರಕವಾಗಿಯೂ, ನಿಯಾಮಕವಾಗಿಯೂ, ಸ್ವಾಮಿಯಾಗಿಯೂ ಅರಿಯಬೇಕಾದ್ದರಿಂದ ಚಿತ್ ಮತ್ತು ಅಚಿತ್ ಜ್ಞಾನವೂ ಅತ್ಯಾಪೇಕ್ಷಿತವಾಗಿರುವುದೇ ಆಗಿದೆ. ಚಿತ್, ಅಚಿತ್, ತತ್ತ್ವಗಳನ್ನು ಅರಿಯದಿದ್ದರೆ ಭಗವತತ್ತ್ವವನ್ನು ಹೀಗೆ ಯಥಾವತ್ತಾಗಿ ಅರಿಯಲು ಸಾಧ್ಯವಿಲ್ಲದ್ದರಿಂದ ತತ್ತ್ವತ್ರಯ ಜ್ಞಾನವು ಅವಶ್ಯಕ ಎನ್ನಲಾಗಿದೆ.

'ಭೋಕ್ತಾ ಭೋಗ್ಯಂ ಚ ಪ್ರೇರಿತಾರಂ ಚ ಮತ್ವಾ' ಎಂಬುದಕ್ಕೂ 'ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತ ಸ್ತೇನಾಮೃತತ್ವಮೇತಿ'[6] ಎಂಬ ಶ್ರುತಿವಾಕ್ಯಕ್ಕೂ ಇದೇ ಅಭಿಪ್ರಾಯವಾಗಿದೆ. ಹೀಗಿಲ್ಲದಿದ್ದರೆ 'ತಮೇವಂ ವಿದ್ವಾನ್' ಇತ್ಯಾದಿ ಶ್ರುತಿವಾಕ್ಯಗಳಿಗೆ ವಿರೋಧವುಂಟಾಗುತ್ತದೆ. ಆದ್ದರಿಂದ ಈ ಶ್ರುತಿಛಾಯೆಯಲ್ಲೇ ಸೂತ್ರಕಾರರೂ ಅನುಗ್ರಹಿಸಿರುವುದರಿಂದ ವೇದಾಂತ ವಿರೋಧ ಪ್ರಸಂಗವು ಇಲ್ಲಿಲ್ಲ.

## ಸೂ. 2 ತತ್ವತ್ರಯಮಾವದು – ಚಿತ್ತುಮ್, ಅಚಿತ್ತುಮ್, ಈಶ್ವರನುಮ್.

ತತ್ವತ್ರಯಗಳು ಯಾವುವೆಂದರೆ **ಚಿತ್, ಅಚಿತ್** ಮತ್ತು **ಈಶ್ವರ.** '**ಚಿತ್**' ಎಂದರೆ - ಚೈತನ್ಯಾಧಾರವಾದ ವಸ್ತು, ಚೈತನ್ಯಕ್ಕೆ ಆಶ್ರಯವಾಗಿರುವುದು ಎಂದರ್ಥ. '**ಅಚಿತ್**' ಎಂದರೆ - ಚೈತನ್ಯಕ್ಕೆ ಆಧಾರವಲ್ಲದ ವಸ್ತು ಚೈತನ್ಯರಹಿತವಾಗಿರುವುದು ಎಂದರ್ಥ. 'ಈಶ್ವರ' ಎಂದರೆ ಈ ಚಿತ್ ಮತ್ತು ಅಚಿತ್‌ನ್ನು ನಿಯಮಿಸುವವನು. ಯೋಗವೈಶೇಷಿಕಾದಿ ಮತಗಳಲ್ಲಿ ಹೇಳುವಂತೆ ಪುರುಷವಿಶೇಷ ಮಾತ್ರವಲ್ಲದೆ ಸರ್ವನಿಯಂತಾ ಆದವನು. **'ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ';**[1] **'ಪ್ರಧಾನಕ್ಷೇತ್ರಜ್ಞಃ ಪತಿರ್ಗುಣೇಶಃ'**[2] ಎಂಬಂತೆ ಇರುವವನು.

## ಸೂ. 3 ಚಿತ್ತೆನ್ಗಿರದು- ಆತ್ಮಾವೈ

'**ಚಿತ್**' ಎಂಬುದು ಆತ್ಮನನ್ನು.

ನಡುವಿಲ್ ತಿರುವೀಧಿಪ್ಪಿಳ್ಳೈ ಭಟ್ಟರೂ. ಆಚ್ಚಾನ್‌ಪಿಳ್ಳೈ ಮೊದಲಾದ ಆಚಾರ್ಯರುಗಳೂ ತತ್ವತ್ರಯವನ್ನು ನಿರೂಪಿಸುವಾಗ '**ಅಚಿತ್**'ನ್ನು ಮೊದಲು ವಿವರಿಸಿದ್ದಾರೆ. ಇಲ್ಲಿ ಸೂತ್ರಕಾರರು '**ಚಿತ್**' ನ್ನು ಮೊದಲು ಹೇಳಿದ್ದಾರೆ. ಇದಕ್ಕೆ ಕಾರಣ '**ಅಚಿತ್**' ಹೇಯತಯಾ ಅರಿಯಬೇಕಾದ್ದರಿಂದಲೂ, '**ಈಶ್ವರ**'ನು ಉಪಾದೇಯತಯಾ ಅರಿಯಬೇಕಾದವನಾದ್ದರಿಂದಲೂ; ಹೀಗೆ ಎರಡು ತತ್ವಗಳನ್ನು ಅರಿಯಲು ಅಧಿಕಾರಿಯಾದ ಚೇತನನ ಸ್ವರೂಪವನ್ನು ಮೊದಲು ಅರಿಯುವುದು ಅವಶ್ಯಕವಾದ್ದರಿಂದಲೂ '**ಚಿತ್**' ಸ್ವರೂಪವನ್ನುಮೊದಲು ಹೇಳಲಾಗಿದೆ. ಆದರೆ ಅವರುಗಳು 'ಅಚಿತ್'ನ್ನು ಮೊದಲು ಹೇಳಲು ಕಾರಣವೇನೆಂದರೆ; 'ಆತ್ಮಾ-ಪ್ರಕೃತಿ (ಅಚಿತ್) ಗಿಂತ ಬೇರೆಯಾದವನು ಎಂಬುದನ್ನು ಅಚಿತ್ತನ್ನು ಅರಿಯದೇ ತಿಳಿದುಕೊಳ್ಳುವುದು ಕಷ್ಟವಾದ್ದರಿಂದ ಎಂಬುದಾಗಿದೆ. ಆದ್ದರಿಂದ ಮೊದಲು ಪ್ರಕೃತಿಯನ್ನು ಅರಿತು, ಆನಂತರ ಅದಕ್ಕೆ ವ್ಯತಿರಿಕ್ತವಾಗಿ ಪ್ರಕೃತಿಯ ಅಂತರ್ವರ್ತಿಯಾಗಿರುವ ಆತ್ಮವನ್ನು ಅರಿತು, ಆನಂತರ ಆತ್ಮನಿಗೆ ಅಂತರ್ಯಾಮಿಯಾಗಿ, ಶರೀರಕ್ಕೆ ಆತ್ಮನಂತೆ, ಎರಡಕ್ಕೂ ಅಭಿಮಾನಿಯಾದ ಪರಮಾತ್ಮನನ್ನು ಅರಿಯುವುದು ಬುದ್ಧಿಗೆ ಸುಲಭ ಎಂಬುದರಿಂದಾಗಿದೆ.

'ಅಚಿತ್' ನಿಂದ ಪ್ರಾರಂಭಿಸಿರುವುದು '**ಅನ್ನಮಯಮ್**' ಎಂದು ಪ್ರಾರಂಭಿಸಿ '**ಆನಂದಮಯಃ**' ಎಂಬುವವರೆಗೆ ಹೇಳಿರುವ ಶ್ರುತಿಕ್ರಮಕ್ಕೆ ಅನುಗುಣವಾಗಿದೆ. ಈ ಗ್ರಂಥದಲ್ಲಿ ಚಿತ್ತನ್ನು ಮೊದಲು ಹೇಳಿರುವುದು **'ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ'** ಎಂಬ ಶ್ರುತಿಗೆ ಅನುಗುಣವಾಗಿದೆ. ಆದ್ದರಿಂದ ಇವೆರಡು ಕ್ರಮವೂ ವೇದಾಂತ ಸಿದ್ಧವಾದದ್ದು.

**'ಚಿದಚಿದೀಶ್ವರ ತತ್ವಭಾವ'**[1] ಎಂದು ಆಳವಂದಾರರೂ (ಶ್ರೀರಾಮಾನುಜಾಚಾರ್ಯರಿಗೆ ಗುರುವಾದ ಶ್ರೀಯಾಮುನಾಚಾರ್ಯರು) **'ಅಶೇಷ ಚಿದಚಿದ್ವಸ್ತುಶೇಷಿಣೇ'**[2] ಎಂದು ಶ್ರೀ ಭಾಷ್ಯಕಾರರೂ ಅನುಗ್ರಹಿಸಿರುವ ಶ್ರೀಸೂಕ್ತಿಗಳು ಉಭಯಕೋಟಿಯಲ್ಲೂ ಸೇರುತ್ತವೆ. ಹೇಗೆಂದರೆ ಚಿದುಪಕ್ರಮಯೋಜನೆಯಲ್ಲಿ ತಾನೇ

ಸ್ವರಸವಾಗಿದೆ. ಅಚಿದುಪಕ್ರಮ ಯೋಜನೆಯಲ್ಲಿ ಕ್ರಮವಿವಕ್ಷೆಯಾಗಿ ಅಲ್ಲ, ಸಮಸ್ತಪದವಾಗಿ ಅದು ಹೇಳಲ್ಪಟ್ಟಿದೆ. ಸಮಾಸದಲ್ಲಿ ಅಭ್ಯರ್ಹಿತವಾದ ಅಲ್ಪಾಚ್‌ತರವಾದದ್ದು ಮೊದಲು ಬರಬೇಕೆಂಬ ವ್ಯಾಕರಣ ನಿಯಮಕ್ಕನುಸಾರವಾಗಿ, ಅಲ್ಪಾಚ್‌ತರವಾದ **'ಚಿತ್'** ಶಬ್ದವು ಮೊದಲು ಹೇಳಲ್ಪಟ್ಟಿದೆ. ಅಭ್ಯರ್ಹಿತನಾದ ಈಶ್ವರನನ್ನು ಮೊದಲು ಹೇಳದೆ **'ಚಿತ್'** ಶಬ್ದದಿಂದ ಚೇತನನ್ನು ಮೊದಲು ಹೇಳಲು ಕಾರಣ **'ಅಲ್ಪಾಚ್‌ತರಂ ಪೂರ್ವಂ'** ಎಂಬ ಅನುಶಾಸನ ಬಲದಿಂದಾಗಿದೆ. ಹೀಗೆ ಎರಡು ಕ್ರಮವೂ ವೇದ ವೈದಿಕ ಪರಿಗ್ರಹೀತವಾದದ್ದರಿಂದ ಎರಡೂ ಮುಖ್ಯವೆಂದು ಅಂಗೀಕರಿಸಬಹುದಾಗಿದೆ.

**'ಚಿತ್'** ಶಬ್ದವು **'ಪ್ರೇಕ್ಷೋಪಲಬ್ಧಿಶ್ಚಿತ್ ಸಂವಿತ್ ಪ್ರತಿಪಜ್ಞಪ್ತಿಚೇತನಾಃ'** ಎಂದು ಜ್ಞಾನವಾಹಿ ಶಬ್ದಗಳೊಡನೆ ನಿಘಂಟುವಿನಲ್ಲಿ ಸಹಪಠಿತವಾಗಿದೆ. ಆದರೆ **'ಜ್ಞಾನಾಶ್ರಯ'** ವಸ್ತುವೆಂದು ಇದು ಪ್ರಸಿದ್ಧವಲ್ಲದ್ದರಿಂದಲೂ **'ಕ್ಷರಾತ್ಮನಾವೀಶತೇದೇವ ಏಕಃ'; 'ಯ ಆತ್ಮಾನಮನ್ತರೋಯಮಯತಿ ಯಮಾತ್ಮಾ ನ ವೇದ '; 'ಯಸ್ಯಾತ್ಮಾ ಶರೀರಮ್' 'ಆತ್ಮಾಶುದ್ಧೋಕ್ಷರಃ'; 'ಆತ್ಮಾಜ್ಞಾನಮಯೋಮಲಃ'** ಎಂದು ಶ್ರುತಿಸ್ಮೃತಿಗಳಲ್ಲಿ ಹಲವೆಡೆಗಳಲ್ಲಿ **'ಆತ್ಮಾ'** ಶಬ್ದವು 'ಜೀವ' ಎಂಬರ್ಥದಲ್ಲಿ ಪ್ರಸಿದ್ಧಿಯಾದದ್ದರಿಂದ **'ಚಿತ್ ಎನ್ಗಿರದು ಆತ್ಮಾವೈ'** ಎಂದು ಸ್ಫುಟವಾಗಿ ನಿರೂಪಿಸಲಾಗಿದೆ.

## ಸೂ. 4 ಆತ್ಮಸ್ವರೂಪಮ್ 'ಶೆನ್ರು ಶೆನ್ರು ಪರಂಪರಮಾಯ್' ಎನ್ಗಿರಪಡಿಯೇ ದೇಹೇಂದ್ರಿಯ ಮನಃ ಪ್ರಾಣಬುದ್ಧಿವಿಲಕ್ಷಣಮಾಯ್, ಅಜಡಮಾಯ್, ಆನನ್ದರೂಪಮಾಯ್, ನಿತ್ಯಮಾಯ್, ಅಣುವಾಯ್, ಅವ್ಯಕ್ತಮಾಯ್, ಅಂಚಿತ್ಯಮಾಯ್, ನಿರವಯವಮಾಯ್, ನಿರ್ವಿಕಾರಮಾಯ್, ಜ್ಞಾನಾಶ್ರಯಮಾಯ್, ಈಶ್ವರನುಕ್ಕು ನಿಯಾಮ್ಯಮಾಯ್, ಧಾರ್ಯಮಾಯ್, ಶೇಷಮಾಯಿರುಕ್ಕುಮ್.

**'ಶೆನ್ರು ಶೆನ್ರು ಪರಂಪರಮಾಯ್'** ಎಂಬ ಆಳ್ವಾರ್ ಶ್ರೀ ಸೂಕ್ತಿಯಿಂದ ಆತ್ಮನ 'ಸ್ವರೂಪ'ವಿರುವ ಪರಿಯನ್ನು ಈ ಸೂತ್ರದಲ್ಲಿ ನಿರೂಪಿಸಲಾಗಿದೆ.

**(ಆತ್ಮ....ಪರಂಪರಮಾಯ್)** ಶ್ರುತಿಸ್ಮೃತ್ಯಾದಿಗಳಲ್ಲಿನ ಯಾವುದಾದರೊಂದು ವಾಕ್ಯವನ್ನು ಉದಾಹರಿಸದೆ ಆಳ್ವಾರರ ಶ್ರೀ ಸೂಕ್ತಿಯನ್ನು ಉದಾಹರಿಸಲು ಕಾರಣವೇನೆಂದರೆ, ತತ್ವಪ್ರತಿಪಾದಕವಾದ ಶ್ರುತ್ಯಾದಿಗಳಿಗಿಂತ ತತ್ವದರ್ಶಿಗಳಲ್ಲಿ ಪ್ರಧಾನರಾದ ಆಳ್ವಾರರ ವಚನವೇ ತತ್ವ ನಿರ್ಣಯಕ್ಕೆ ಮುಖ್ಯ ಪ್ರಮಾಣವೆಂದು ನಿರೂಪಿಸುವುದಕ್ಕಾಗಿ. **'ತ್ವದೀಯಗಂಭೀರ ಮನೋನುಸಾರಿಣಃ'**[1] ಎಂದು ಪರಮಾಚಾರ್ಯರಾದ ಆಳವಂದಾರ್ ಇದನ್ನೇ ನಿರೂಪಿಸಿದ್ದಾರೆ.

ಸ್ವರೂಪವೆಂದರೆ- ಸ್ವಮ್ಮಾದ ರೂಪವಾಗಿದೆ-ಅಂದರೆ-ಅಸಾಧಾರಣಾಕಾರ. **'ಶೆನ್ರುಶೆನ್ರು ಪರಂಪರಮಾಯ್'** ಎಂಬಂತೆ ಒಂದಕ್ಕೊಂದು ಮೇಲಾಗಿರುವ 'ಅನ್ನಮಯ ಪ್ರಾಣಮಯ ಮನೋಮಯ'ಗಳಿಗಿಂತ ಭಿನ್ನವಾಗಿದೆ.

**(ದೇಹೇಂದ್ರಿಯ....ವಿಲಕ್ಷಣಮಾಯ್)**-ಇಲ್ಲಿ 'ಬುದ್ಧಿ-ಶಬ್ದವು' ಮಹತ್ ತತ್ತ್ವದಿಂದ ಏರ್ಪಟ್ಟ ಅಂತಃಕರಣವನ್ನು ತಿಳಿಸುವುದಾ? ಅಥವಾ ಜ್ಞಾನವನ್ನು ತಿಳಿಸುವುದಾ ಎಂದರೆ ಇಲ್ಲಿ 'ಜ್ಞಾನ'ವೇ ವಿವಕ್ಷಿತವಾಗಿದೆ 'ತತ್ವಶೇಖರ' ವೆಂಬ ಗ್ರಂಥದಲ್ಲಿ ದೇಹವೈಲಕ್ಷಣವನ್ನು ತಿಳಿಸುವಲ್ಲಿಯೂ 'ಜ್ಞಾನ'ವೆಂದೇ ಅರ್ಥೈಸಲಾಗಿದೆ. **'ದೇಹೇಂದ್ರಿಯ ಮನಃ ಪ್ರಾಣಾಧಿಭ್ಯೋಅನ್ಯಃ '** ಎಂದೇ ಆಳವಂದಾರರೂ ಅನುಗ್ರಹಿಸಿದ್ದಾರೆ.

ಈ ಸೂತ್ರದಲ್ಲಿರುವ ಒಂದೊಂದು ವಿಷಯವನ್ನು ಮುಂದಿನ ಸೂತ್ರಗಳಲ್ಲಿ ಬೇರೆ ಬೇರೆಯಾಗಿ ವಿವರಿಸಲಾಗುತ್ತದೆ.

## ಸೂ. 5 ಆತ್ಮಸ್ವರೂಪಮ್ ದೇಹಾದಿವಿಲಕ್ಷಣಮಾನಪಡಿ ಎನ್ನೆನ್ನಿಲ್.

ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ **'ದೇಹಾದಿವಿಲಕ್ಷಣ'** ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಉದ್ದೇಶ, ಲಕ್ಷಣ, ಪರೀಕ್ಷೆ ಎಂಬುದಾಗಿ ತತ್ವ ನಿರ್ಣಯಕ್ರಮವು ಮೂರು ವಿಧವಾಗಿರುತ್ತದೆ. (ಚಿತ್ತುಂ ಅಚಿತ್ತುಂ ಈಶ್ವರನುಂ) - ಎಂಬ ತತ್ವತ್ರಯವನ್ನು ಕುರಿತು ಉದ್ದೇಶಿತಕ್ರಮದಲ್ಲಿ ಅವುಗಳ ಸ್ವರೂಪಶೋಧದಲ್ಲಿ ತೊಡಗಿ ಮೊದಲು ಚಿತ್ ಶಬ್ದೋದ್ದಿಷ್ಟನಾದ ಆತ್ಮನ ಸ್ವರೂಪವನ್ನು ನಿರೂಪಿಸಲು ಉಪಕ್ರಮಿಸುತ್ತಾರೆ.

**(ದೇಹೇಂದ್ರಿಯ........ವಿಲಕ್ಷಣಮಾಯ್)** ಎಂದು ಪ್ರಾಂಭಿಸಿ**(ಶೇಷಮಾಯಿರುಕ್ಕುಮ್)** ಎಂಬ ಪರ್ಯಂತ ಆತ್ಮಸ್ವರೂಪ ಲಕ್ಷಣವನ್ನು ನಿರೂಪಿಸುತ್ತಾರೆ. ಅದಕ್ಕಾಗಿ ಇದನ್ನು ಅರಿಯಲು ಕುತೂಹಲಿಗಳಾದ ಜಿಜ್ಞಾಸುಗಳ ಪ್ರಶ್ನೆಯನ್ನು**(ಆತ್ಮಸ್ವರೂಪಮ್..........ಪಡಿಯೆನ್ನೆನ್ನಿಲ್)** ಎಂದು ಪ್ರಶ್ನಿಸಿಕೊಂಡು ಇವರೇ 'ತತ್ವ ಶೇಖರ' ಗ್ರಂಥದಲ್ಲಿ ಕೇಳಕಂಡಂತೆ ವಿವರಿಸಿದ್ದಾರೆ.

'ದೇಹ'ವು ಅನೇಕ ಅವಯವಗಳ ಸಮೂಹ ಎಂಬುದು ಸಿದ್ಧವಾದುದು. ಅದರಲ್ಲಿ ಎಲ್ಲಾ ಅವಯವಗಳಿಗೂ ಚೈತನ್ಯವುಂಟು ಎಂಬುದಾದರೆ. ಅನೇಕ ಚೇತನರುಗಳು ಇರಬೇಕಾದ ಪ್ರಸಂಗ ಉಂಟಾಗುತ್ತದೆ. ಅವಯವಗಳಿಗೆ ಅನ್ಯೋನ್ಯತೆಯೂ, ಅವಿವಾದ ನಿಯಮವೂ ಅವುಗಳಲ್ಲಿ ಮಮತಾಬುದ್ಧಿಯೂ, ಮಮತಾವ್ಯವಹಾರವೂ ಕೂಡದು. ಒಂದು ಅವಯವಕ್ಕೇ ಚೈತನ್ಯವುಂಟೆಂದು ಅಂಗೀಕರಿಸಿದರೆ; ಆ ಅವಯವವು ವಿಚ್ಛಿನ್ನವಾದಾಗ ಅದು ಅನುಭವಿಸಿದ್ದನ್ನು ಸ್ಮರಿಸಬಾರದು. ಅನಂತರ ಅಹಂ ಬುದ್ಧಿವ್ಯವಹಾರವೂ, ಮಮತಾಬುದ್ಧಿ ವ್ಯವಹಾರಗಳೂ ಇಲ್ಲವಾಗಬೇಕು. ಸರ್ವಶರೀರವ್ಯಾಪಿಯಾದ ಸುಖದುಃಖಾನುಭವಗಳೂ ಇರಬಾರದು.(ಆದರೆ ವಾಸ್ತವವಾಗಿ ಹೀಗಿಲ್ಲ) ಆದ್ದರಿಂದ ಶರೀರವು ಅವಯವ ಸಂಘಾತವಾಗಿದೆ. ಅದು ಅವಯವಿ. ಅದರಲ್ಲಿ ಚೈತನ್ಯವುಂಟೆಂದು ಹೇಳಬಾರದು. ಉಪಲಂಭಾನುಪತ್ತಿಗಳಿಲ್ಲವಾದ್ದರಿಂದ, ಅವಯವಿಸ್ವೀಕಾರವೂ ಅನುಪಪನ್ನವಾದ್ದರಿಂದ ಹೇಳುವಂತಿಲ್ಲ. **'ಬಾಲದೇಹೋಹಂ ಮಂದಜ್ಞಾನಃ; ಯುವ ದೇಹೋಹಂ ಬಹುಜ್ಞಾನಃ; ಮಮಶರೀರಮ್'** ಎಂದು ಶರೀರ, ಅಹಮರ್ಥಗಳಲ್ಲಿ ಏರ್ಪಡುವ ಭೇದಪ್ರತಿಪತ್ತಿಯೂ, ಭೇದ ವ್ಯವಹಾರವೂ ಕೂಡದು. ('ನನ್ನ ಶರೀರ'ಎನ್ನುವಾಗ ನಾನು ಬೇರೆ ನನ್ನ ಶರೀರ ಬೇರೆ ಎಂಬುದು ತಿಳಿಯುತ್ತದೆ. ಶರೀರವೇ ಆತ್ಮಾವಾದರೆ 'ನನ್ನ' ಎಂಬ ಶಬ್ದಕ್ಕೆ ಆಸ್ಪದವೇ ಇಲ್ಲ . ಆದ್ದರಿಂದ 'ನನ್ನ'; 'ಶರೀರ' ಎಂಬುದರಿಂದಲೇ ಅವೆರಡರ ಭೇದಗಳು ತಿಳಿಯುತ್ತವೆ. ಒಂದೇ ಆಗಿರುವುದಾದರೆ ನಾನು ಮತ್ತು ನನ್ನ ಎಂಬ ಪ್ರತಿಪತ್ತಿ ಭೇದ ವ್ಯವಹಾರ, ಕೂಡದು ಎಂಬುದು ಇದರ ಅರ್ಥ.)

**'ಮಮಾಯಾಮಾತ್ಮಾ'** ಎಂಬಲ್ಲಿ ಹೇಳುವಂತೆ 'ಮಮ'; 'ನನ್ನ' ಎಂಬುದು ಅಮುಖ್ಯ ಎಂದು ಹೇಳುವಂತಿಲ್ಲ 'ಮಮ' ಎಂಬಲ್ಲಿನ ಮುಖ್ಯಾರ್ಥಕ್ಕೆ ಭಾಧೆ ಇಲ್ಲದ್ದರಿಂದ ಎರಡನೇ ಅರ್ಥ ಹೇಳಬಾರದು. ಅಷ್ಟೇ ಅಲ್ಲದೆ, 'ಅಹಂ' ಬುದ್ಧಿಗೆ ಶರೀರವೇ ವಿಷಯವೆಂದು ಅಂಗೀಕರಿಸಿದರೂ ಶ್ರುತಿ, ಶ್ರುತ್ಯರ್ಥಾಪತ್ತಿಗಳಿಂದಲೂ ದೇಹಾತಿರಿಕ್ತನಾಗಿ (ದೇಹಕ್ಕಿಂತ ಬೇರೆಯಾಗಿ) ದೇಹಾಂತರ ಪರಿಗ್ರಹ ಯೋಗ್ಯನಾದವನು ಆತ್ಮಾ ಎಂಬುದು ಪ್ರಸಿದ್ಧವಾದದ್ದರಿಂದ ಶರೀರವೇ ಆತ್ಮಾ ಎಂದು ಹೇಳುವಂತಿಲ್ಲ. ಬ್ಯಾಹೇಂದ್ರಿಯಗಳೂ ಆತ್ಮಾ ಆಗಲಾರದು. ಇಂದ್ರಿಯಗಳೇ ಆತ್ಮಾ ಎನ್ನುವುದಾದರೆ, ಯಾವ ನಾನು ಈ ಅರ್ಥವನ್ನು ಕಂಡೆನೋ, ಅದೇ ನಾನು ಸ್ಮರಿಸುತ್ತಿದ್ದೇನೆ ಎಂಬ ಅನುಸಂಧಾನ ಕೂಡದು. ಚಕ್ಷುಸ್ಸೇ ಆತ್ಮವಾದರೆ ಕುರುಡನು ರೂಪವನ್ನು ಸ್ಮರಿಸುವಂತಿಲ್ಲ. ಶ್ರೋತ್ರವೇ ಆತ್ಮವಾದರೆ ಕಿವುಡನು ಶಬ್ದವನ್ನು ಸ್ಮರಿಸುವಂತಿಲ್ಲ. ಹೀಗೇ ಉಳಿದ ಇಂದ್ರಿಯಗಳ ವಿಷಯವನ್ನೂ ಅನ್ವಯಿಸಿಕೊಳ್ಳಬೇಕು.

ಅಂತಃಕರಣವೂ (ಮನಸ್ಸು) 'ಆತ್ಮಾ' ಆಗಲಾರದು. ಸ್ಮರಿಸುವವನ ಸ್ಮರಣಾದಿಕಾರ್ಯಗಳಿಗೆ ಇದು ಕರಣವಾದ್ದರಿಂದ ಇದು ತಾನೇ ಸ್ಮರಿಸುತ್ತದೆ ಎನ್ನುವಂತಿಲ್ಲ. ಸ್ಮರಣೆಗೆ ಕರಣವಿಲ್ಲದ್ದರಿಂದ. ಇದೇ ಕರಣ ಎನ್ನುವಂತೆಯೂ ಇಲ್ಲ. ಅದು ವಿರುದ್ಧವಾಗುತ್ತದೆ. ಬೇರೊಂದು ಕರಣವಿದೆ ಎನ್ನುವುದಾದರೆ-ಅದು ಬಾಹ್ಯಕರಣವಾದರೆ, ಅದಿಲ್ಲದವನಿಗೆ ಸ್ಮೃತಿ ಇರಬಾರದು. ಆತ್ಮಾ ಅಂತಃಕರಣವೇ ಎನ್ನುವುದಾದರೆ ಆತ್ಮನಿಗೆ 'ಮನಸ್ಸು' ಎಂದು ಹೆಸರಿಟ್ಟಂತಾಗುತ್ತದೆ. ಆಂತರಕರಣವು ಅಪೇಕ್ಷಿತವಾದರೆ, ಇಂದ್ರಿಯಗಳಿಗೂ ವಿಷಯಗಳಿಗೂ ಸಂಬಂಧವೇರ್ಪಟ್ಟಾಗಲೆಲ್ಲಾ ಜ್ಞಾನವು ಏರ್ಪಡಬೇಕು. ಆದ್ದರಿಂದ 'ಮನಸ್ಸು' ಆತ್ಮಾ' ಆಗಲಾರದು. ಪ್ರಾಣಗಳೂ ಆತ್ಮಾ ಆಗಲಾರದು. ಏಕೆಂದರೆ ಪ್ರಾಣಗಳು 'ಸಂಘಾತ' ರೂಪವಾದದ್ದರಿಂದ. ದೇಹವೇ ಆತ್ಮಾ ಎಂಬುದಕ್ಕೆ ಹೇಳಿದ ದೋಷಗಳೆಲ್ಲವೂ ಇಲ್ಲಿಯೂ ಅನ್ವಯವಾಗುತ್ತದೆ. 'ನನಗೆ ಜ್ಞಾನ ಏರ್ಪಟ್ಟಿತು,' ಇಲ್ಲವಾಯಿತು' ಎಂಬುದರಿಂದ ಕ್ಷಣಿಕವಾಗಿಯೂ, ಆತ್ಮದ ಧರ್ಮವಾಗಿಯೂ ತೋರಿಬರುವುದರಿಂದ ಜ್ಞಾನವೂ ಆತ್ಮಾ ಆಗಲಾರದು. ಸ್ಥಿರವಾದ ಆತ್ಮಾ ಉಂಟೆಂಬುದು 'ನಿನ್ನೆ ಕಂಡ ನಾನೇ ಇಂದೂ ಕಾಣುತ್ತಿದ್ದೇನೆ' ಎಂಬ ಪ್ರತ್ಯಭಿಜ್ಞೆಯಿಂದಲೂ ಸಿದ್ಧವಾಗುತ್ತದೆ.

ಈ ರೀತಿವಿಸ್ತರೇಣ ತತ್ವಶೇಖರದಲ್ಲಿ ಪ್ರತಿಪಾದಿಸಲಾಗಿದೆ.

**ಸೂ. 6 ದೇಹಾದಿಗಳ್ 'ಎನ್ನುಡೈಯ ದೇಹಾದಿಗಳ್' ಎನ್ರುಂ, ಆತ್ಮಾವಿಲ್ ವೇರುಪಟ್ಟು ತೋತ್ತುಕ್ಕೈಯಾಲುಂ, 'ಇದಂ' ಎನ್ರು ತೋತ್ತುಕ್ಕೈಯಾಲುಂ, ಆತ್ಮಾ ನಾನೆನ್ರು ತೋತ್ತು ಕೈಯಾಲುಂ, ಇವೈಯೊರುಕಾಲ್ ತೋತ್ತಿ ಒರುಕಾಲ್ ತೋತ್ತಾಮೈಯಾಲುಂ, ಆತ್ಮಾ ಎಪ್ಪೋದುಂ ತೋತ್ತುಕ್ಕೈಯಾಲುಂ, ಇವೈ ಪಲವಾಕ್ಕೈಯಾಲುಂ, ಆತ್ಮಾ ಒರುವನಾಕ್ಕೈಯಾಲುಮ್ ಆತ್ಮಾ ಇವತ್ತಿಲ್ ವಿಲಕ್ಷಣನೆನ್ರು ಕೊಳ್ಳವೇಣುಮ್.**

ಹೀಗೆ ಬಿಡಿಬಿಡಿಯಾಗಿ ಹೇಳುತ್ತಾ ವಿವರಿಸಿದರೆ ಗ್ರಂಥವಿಸ್ತರವಾಗುವುದಿಲ್ಲವಾ ಎಂದರೆ ಮಂದಮತಿಗಳಿಗೂ ಪ್ರತಿಪತ್ತಿ ಏರ್ಪಡುವಂತೆ, ದೇಹಾದಿಗಳನ್ನು ಸಮುಚ್ಚಿತ್ಯೋಪಾದನ ಮಾಡಿ(ಒಟ್ಟಾಗಿ ಕೂಡಿಸಿ) ಅವುಗಳಿಗಿಂತಲೂ ಆತ್ಮನಿಗೆ ಉಂಟಾದ ವೈಲಕ್ಷಣವನ್ನು ಸುಗ್ರಹವಾಗಿ (ದೇಹಾದಿಗಳ್) ಎಂದು ಪ್ರಾರಂಭಿಸಿ ನಿರೂಪಿಸುತ್ತಾರೆ.

**(ದೇಹಾದಿಗಳ್.... ನಾನ್ ಎನ್ನು ತೋತ್ತುಕೈಯಾಲುಂ)**- ದೇಹಾದಿಗಳು ನನ್ನ ದೇಹ, ನನ್ನ ಇಂದ್ರಿಯ, ನನ್ನ ಮನಸ್ಸು, ನನ್ನ ಪ್ರಾಣ, ನನ್ನ ಬುದ್ಧಿ ಎಂಬಂತೆ ಮಮತಾಬುದ್ಧಿಗೂ, (ನನ್ನದು ಎಂಬ ಬುದ್ಧಿ ಮತ್ತು ವ್ಯವಹಾರ) ಮಮತಾ ವ್ಯವಹಾರಕ್ಕೂ ವಿಷಯವಾಗಿರುವುದರಿಂದಲೂ, 'ಆಹಂ'-ನಾನು' ಎಂದು ಹೇಳಲ್ಪಡುವ ಆತ್ಮನಿಗಿಂತ ಬೇರೆಯಾಗಿ ತೋರುವುದರಿಂದಲೂ;

ಹಾಗೆಯೇ 'ಇದು ದೇಹ, ಇದು ಇಂದ್ರಿಯ' ಎಂದು 'ಇದಂ ಬುದ್ಧಿ ವ್ಯವಹಾರ ವಿಷಯವಾಗಿ 'ಅಹಂ'- 'ನಾನು' ಎಂದು ಹೇಳಲ್ಪಡುವ ಆತ್ಮನಿಗಿಂತ ಬೇರೆಯಾಗಿ ತೋರುವುದರಿಂದಲೂ:

ಹಾಗೆಯೇ 'ಇದು ದೇಹ ಇದು ಇಂದ್ರಿಯ' ಎಂದು 'ಇದಂ ಬುದ್ಧಿವ್ಯವಹಾರ ವಿಷಯವಾಗಿ 'ಅಹಂ-ನಾನು' ಎಂಬುದಕ್ಕೆ ವ್ಯತಿರಿಕ್ತವಾಗಿ ತೋರುವುದರಿಂದಲೂ: ಅಷ್ಟೇ ಅಲ್ಲದೆ 'ಆತ್ಮಾ' ಅಹಮರ್ಥ (ನಾನು) ಭೂತನಾಗಿ ತೋರುವುದರಿಂದಲೇ ಆತ್ಮಾ ವಿಲಕ್ಷಣನಾಗಿದ್ದಾನೆ.

**(ಇವೈಯೊರು ಕಾಲ್...ಎಪ್ಪೋತುಂ ತೋತ್ತುಕೈಯಾಲುಂ)**- 'ಇವೈ' ಎಂಬುದು ದೇಹೇಂದ್ರಿಯಾದಿಗಳನ್ನು ಪರಾಮರ್ಶಿಸುತ್ತದೆ.

'ದೇಹ'ವು ಒಮ್ಮೆ ತೋರಿ ಒಮ್ಮೆ ತೋರದೆ ಇರುವುದು ಎಂದರೆ -ಜಾಗೃತಾವಸ್ಥೆಯಲ್ಲಿ 'ಸ್ಥೂಲೋಹಂ, ಕೃಶೋಹಂ' ಇತ್ಯಾದಿಗಳಿಂದ ಅಹಂಬುದ್ಧಿ ವಿಷಯವಾಗಿ ಆತ್ಮತ್ವೇನ ತೋರುವುದೇ ಆದರೂ ಸುಷುಪ್ತಿ (ನಿದ್ರೆ) ದೆಸೆಯಲ್ಲಿ ಆರೀತಿ ಇಲ್ಲವಾಗಿರುವಿಕೆ. 'ಆತ್ಮಾ ಯಾವಾಗಲೂ ತೋರುವುದು 'ಎಂದರೆ' ನಿದ್ರಿಸುವುದಕ್ಕೆ ಮುನ್ನ ಇವೆಲ್ಲವನ್ನೂ ಅರಿತಿದ್ದ ನಾನು ನಿದ್ರಿಸುವಾಗ ನನ್ನ ಶರೀರವನ್ನೊಳಗೊಂಡಂತೆ ಏನನ್ನೂ ಅರಿಯಲಿಲ್ಲ ಎಂದು ಪ್ರತ್ಯಭಿಜ್ಞೆ (ಸ್ಮರಣೆ) ಮಾಡುವುದರಿಂದಲೂ : ಎರಡು (ಜಾಗೃತಿ, ಸುಷುಪ್ತಿ) ಅವಸ್ಥೆಗಳಲ್ಲೂ ದೇಹಕ್ಕಿಂತ ಬೇರೆಯಾದ ಒಂದು ಆತ್ಮಾ ಉಂಟೆಂಬುದು ಏರ್ಪಡುತ್ತದೆ.

ಅಥವಾ ಜನನ ಮರಣಗಳನ್ನುಳ್ಳ ದೇಹವು ಒಮ್ಮೆ ಇದ್ದು ಇನ್ನೊಮ್ಮೆ ಇಲ್ಲದಿರುವುದರಿಂದಲೂ, 'ನಾನು ಜನ್ಮಾಂತರದಲ್ಲಿ ಮಾಡಿದ ಪಾಪದ ಫಲವಿದು' ಎಂಬ ಲೋಕವ್ಯವಹಾರದಿಂದಲೂ, ಆತ್ಮಾ ಜನ್ಮಮರಣಾದಿ ರಹಿತನಾಗಿ ಯಾವಾಗಲೂ ಇರುವುದರಿಂದಲೂ ಆತ್ಮಾ ದೇಹಕ್ಕಿಂತ ಬೇರೆಯಾದವನು ಎಂಬುದು ನಿರೂಪಿತವಾಗುತ್ತದೆ.

ಇದೇ ರೀತಿ 1) ಚಕ್ಷುರಾದಿರೂಪೇಣ ತೋರುವ ಇಂದ್ರಿಯಗಳು. ಅಂಧ ಕಿವುಡಾದಿ ಅವಸ್ಥೆಗಳಲ್ಲಿ ತೋರದಿರುವುದರಿಂದಲೂ, 2) ಸಂಕಲ್ಪತ್ವಾದಿಗಳಿಂದ ತೋರುವ ಮನಸ್ಸು ಒಂದು ಕಾಲ ವಿಶೇಷದಲ್ಲಿ, ಮೂಢವಾಗಿ ಏನೂ ತೋರದಿರುವುದರಿಂದಲೂ, 3) ಉಚ್ಛ್ವಾಸ ನಿಶ್ವಾಸನಾದಿಗಳಿಂದ ತೋರುವ ಪ್ರಾಣಗಳು ಮೋಹ (ಮೂರ್ಛೆ) ದೆಸೆಯಲ್ಲಿ ನೆತ್ತಿಯನ್ನು ಚುಚ್ಚಿ ನೋಡಬೇಕಾಗುವಂತೆ ತೋರದೇ ಇರುವುದರಿಂದಲೂ, 4) ವಿಷಯಗ್ರಹಣ ವೇಳೆಯಲ್ಲಿ ಪ್ರಕಾಶಿಸುವ ಜ್ಞಾನವು ವಿಷಯಗ್ರಹಣ ಅಭಾವ ದೆಸೆಯಲ್ಲಿ ತೋರದೇ ಇರುವುದರಿಂದಲೂ, ಸ್ಥಿರವಾದ ಆತ್ಮಾ ಇವುಗಳಲ್ಲವೆನ್ನುವುದು ಸಿದ್ಧವಾಗುತ್ತದೆ. ಹಾಗೆಯೇ 5) 'ನಾನು ಮೊದಲು ಕಣ್ಣು ಕಿವಿಗಳನ್ನುಳ್ಳವನಾಗಿದ್ದೆ , ಈಗ ಕುರುಡನೂ ಕಿವುಡನೂ ಆಗಿದ್ದೇನೆ' ಎಂದೂ, 'ಮೊದಲು ನನ್ನ ಮನಸ್ಸು ವಿಶದವಾಗಿದ್ದಿತು, ಈಗ ಏನೂ ತಿಳಿಯುತ್ತಿಲ್ಲ' ಎಂದೂ,. 'ಆಗ ನಾನು ಪ್ರಾಣಹೀನನಾಗಿ ಬಿದ್ದಿದ್ದೆ, ಈಗ ಪ್ರಾಣವುಳ್ಳವನಾದೆ' ಎಂದೂ, 'ನನಗೆ ಆಗ ಜ್ಞಾನವುಂಟಾಗಿತ್ತು, ಈಗ ನಶಿಸಿತು' ಎಂಬಂತೆ ಇವುಗಳು ಒಮ್ಮೆ ಇದ್ದು ಇನ್ನೊಮ್ಮೆ ಇಲ್ಲವಾದಾಗಲೂ ಆತ್ಮಾ ಮಾತ್ರ ಇರುವುದರಿಂದಲೂ ಆತ್ಮ ಇವುಗಳಿಗಿಂತ ಭಿನ್ನ ಎಂಬುದು ಏರ್ಪಡುತ್ತದೆ. 6) ಇವುಗಳು ಹಲವಾಗಿರುವುದರಿಂದಲೂ ಆತ್ಮಾ ಒಂದೇ ಆಗಿರುವುದರಿಂದಲೂ ಹೀಗೆ ಹೇಳಲಾಗುತ್ತದೆ. 'ಇವೈ' ಎಂದು ದೇಹಾದಿ (ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿ) ಗಳನ್ನು ಪರಾಮರ್ಶಿಸಲಾಗಿದೆ.

'ದೇಹ' ಎಂಬಲ್ಲಿ ಹಲವು ಎನ್ನಲು ಕಾರಣ ಅನೇಕ ಅವಯವಗಳಿಂದ ಕೂಡಿರುವುದರಿಂದ .

'ಇಂದ್ರಿಯ'ಗಳನ್ನು ಹಲವು ಎನ್ನಲು ಕಾರಣ ಚಕ್ಷು, ಶ್ರೋತ್ರ ಇತ್ಯಾದಿ ಭೇದಗಳಿರುವುದರಿಂದ.

'ಮನಸ್ಸ'ನ್ನು ಹಲವು ಎನ್ನಲು ಕಾರಣ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ರೂಪವಾದ ಭೇದಗಳಿರುವುದರಿಂದ.

'ಪ್ರಾಣ'ವನ್ನು ಹಲವು ಎನ್ನಲು ಕಾರಣ ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನ ಎಂಬ ಭೇದಗಳಿರುವುದರಿಂದ.

'ಬುದ್ಧಿ'ಯನ್ನು ಹಲವು ಎನ್ನಲು ಕಾರಣ ಇದು ಘಟ, ಇದು ಪಟ, ಇದು ಪಾತ್ರೆ, ಇದು ಗೋಡೆ ಎಂಬಂತೆ ಭೇದಗಳಿರುವುದರಿಂದ.

ಹೀಗೆ ಇವುಗಳು ಒಂದೊಂದೂ ಹಲವಾಗಿವೆ. ಹೀಗಿಲ್ಲದೆ 'ಅಹಂ-ನಾನು' ಎಂಬ ವ್ಯವಹಾರಕ್ಕೆ 'ಅರ್ಹನಾದ' ಆತ್ಮಾ ಒಂದೇ ಆದದ್ದರಿಂದಲೂ ದೇಹಾದಿಗಳಿಗಿಂತ ಆತ್ಮಾ ವಿಲಕ್ಷಣನೆಂದು ಅರಿಯಬೇಕು.

ಹೀಗೆ ದೇಹಾದಿ ಪ್ರಕಾರವನ್ನೂ ಆತ್ಮನ ಪ್ರಕಾರವನ್ನೂ ನಿರೂಪಿಸಿರುವುದು ಆತ್ಮ ದೇಹಾದಿಗಳಿಗಿಂತ ಭಿನ್ನವಾದದ್ದೆಂದು ಅವಶ್ಯಕವಾಗಿ ಅರಿಯಬೇಕೆಂಬುದಾಗಿದೆ.

## ಸೂ. 7 ಇನ್ದಯುಕ್ತಿಗಳುಕ್ಕು ಕಣ್ಣಳಿವುಣ್ಡೇಯಾಕಿಲುಂ, ಶಾಸ್ತ್ರಬಲತ್ತಾಲೇ ಆತ್ಮಾ ದೇಹಾದಿವಿಲಕ್ಷಣನಾಕಕ್ಕಡವನ್.

ಹೀಗೆ ಯುಕ್ತಿಗಳಿಂದ ಸಾಧಿಸಲ್ಪಟ್ಟ ಅರ್ಥವನ್ನು ಶಾಸ್ತ್ರಪ್ರಮಾಣಗಳಿಂದ ಈ ಸೂತ್ರದಲ್ಲಿ ದೃಢೀಕರಿಸಲಾಗಿದೆ.

'ಕಣ್ಣಳಿವು ಉಣ್ಡೇಯಾಕಿಲುಂ' ಎಂಬುದರಿಂದ ಇದಕ್ಕೆ 'ಅಪವಾದ' ಹೇಳಲು ಯಾರಿಂದಲೂ ಸಾಧ್ಯವಿಲ್ಲ. ಹಾಗೆ ಒಂದು ಪಕ್ಷ ಅಪವಾದ ಏರ್ಪಟ್ಟರೂ ಈ ಅರ್ಥ ಶ್ರುತಿಸ್ಮೃತ್ಯಾದಿ ಪ್ರಸಿದ್ಧವಾದ್ದರಿಂದ ಇದು ಅನುಪಪನ್ನವಾಗುವುದಿಲ್ಲ. ಶಾಸ್ತ್ರಬಲವೇ ಈ ಅರ್ಥವನ್ನು ಸಾಧಿಸುತ್ತದೆ ಎಂಬುದು ಇದರ ಭಾವವಾಗಿದೆ.

'ಪಂಚವಿಂಶೋಽಯಂ ಪುರುಷಃ' ಎಂದೂ 'ಪಂಚವಿಂಶತಿ ಆತ್ಮಾ ಭವತಿ' ಎಂದೂ
ಭೂತಾನಿ ಚ ಕವರ್ಗೇಣ ಚವರ್ಗೇ ಚ ಇಂದ್ರಿಯಾಣಿ ಚ।
ಟವರ್ಗೇಣ ತವರ್ಗೇಣ ಜ್ಞಾನ ಗಂಧಾದಯಸ್ತಥಾ।
ಮನಸಃ ಮಕಾರೇಣ ಪಂಚವಿಂಶಃ ಪ್ರಕೀರ್ತಿತಃ।[1] ಎಂದೂ
ಯಃ ಪರಃ ಪ್ರಕೃತೇಃ ಪ್ರೋಕ್ತಃ ಪುರುಷಃ ಪಂಚವಿಂಶಕಃ।
ಸ ಏವ ಸರ್ವಭೂತಾತ್ಮಾ ನರ ಇತ್ಯಭಿಧೀಯತೇ॥[2] ಎಂದೂ
ಆತ್ಮಾ ಶುದ್ಧೋಽಕ್ಷರ ಶ್ಶಾನ್ತೋ ನಿರ್ಗುಣಃ ಪ್ರಕೃತೇಃ ಪರಃ।
ಪ್ರವೃದ್ಧ್ಯಪಚಯೌ ನಸ್ತ ಏಕಸ್ಯಾಖಿಲಜಂತುಷು॥[3] ಎಂದೂ

ಹೀಗೆ ಶ್ರುತಿ, ಸ್ಮೃತ್ಯಾದಿ ಸಕಲಶಾಸ್ತ್ರ ಪ್ರತಿಪನ್ನವಾದ ಆತ್ಮನ ದೇಹಾದಿ ವೈಲಕ್ಷಣ್ಯವು ನಿರಾಕರಿಸಲ್ಪಡುವಂತಹವುದಲ್ಲ. ಎಂಬ ಅಭಿಪ್ರಾಯದಿಂದಲೇ; ಶಾಸ್ತ್ರಬಲದಿಂದ ಆತ್ಮಾ ದೇಹಾದಿ ವಿಲಕ್ಷಣನಾಗಿದ್ದಾನೆ ಎಂಬುದನ್ನು ಸುನಿಶ್ಚಯವಾಗಿ ನಿರೂಪಿಸಲಾಯಿತು.

## ಸೂ. 8 ಅಜಡಮಾಕೈಯಾವತು-ಜ್ಞಾನತ್ತೈ ಒಳಿಯವುಮ್ ತಾನೇ ತೋತ್ತುಕೈ.

'ಅಜಡತ್ವ' ಎಂಬುದು ಇಲ್ಲಿ ವಿವರಿಸಲ್ಪಟ್ಟಿದೆ. 'ಅಜಡತ್ವ' ವೆಂದರೆ ಅನನ್ಯಾಧೀನ ಪ್ರಕಾಶತ್ವ - ಸ್ವಯಂ ಪ್ರಕಾಶತ್ವ ಎಂದರ್ಥ.

ಸ್ವಯಂ ಪ್ರಕಾಶತ್ವವೆಂದರೆ-'ದೀಪವು ದೀಪಾಂತರ ನಿರಪೇಕ್ಷವಾಗಿ ಸ್ವವ್ಯವಹಾರಕ್ಕೆ ಕಾರಣವಾಗಿರುವುದು. ಅಂದರೆ ಪ್ರಕಾಶಾಂತರ ನಿರಪೇಕ್ಷವಾಗಿ ಸ್ವವ್ಯವಹಾರಕ್ಕೆ ಕಾರಣವಾಗಿರುವಿಕೆ. (ತಾನು ವ್ಯಕ್ತವಾಗಲು ಇನ್ನೊಂದರ ಸಹಾಯವನ್ನು ಅಪೇಕ್ಷಿಸದೆ ಇರುವಿಕೆ)

(ಜ್ಞಾನತ್ತೈ....ತೋತ್ತುಕೈ) (ತಾನಾಗಿಯೇ ಪ್ರಕಾಶಿಸುವುದು ) -'ಹೃದ್ಯನ್ತರ್ಜ್ಯೋತಿಃ ಪುರುಷಃ'[1] ಎಂಬಂತೆಯೂ 'ಅತ್ರಾಯಂ ಪುರುಷಃ ಸ್ವಯಂ ಜ್ಯೋತಿರ್ಭವತಿ'[2] ಎಂದೂ 'ವಿಜ್ಞಾನ ಘನಃ' ಎಂದೂ 'ಆತ್ಮಾ ಜ್ಞಾನ ಮಯಃ'[3] ಎಂದೂ 'ತಚ್ಚ ಜ್ಞಾನಮಯಂ ವ್ಯಾಪಿಸ್ವಸಂವೇದ್ಯ ಮನೂಪಮಮ್'[4] ಎಂದೂ 'ಆತ್ಮ ಸಂವೇದ್ಯ ತತ್ ಜ್ಞಾನಂ'[5] ಎಂಬುದೂ ಪ್ರಸಿದ್ಧವಾಗಿದೆ.

## ಸೂ. 9 ಆನಂದರೂಪಮಾಕ್ಕೈಯಾವತು ಸುಖರೂಪಮಾಯಿರುಕ್ಕೈ.

'ಆನಂದರೂಪತ್ವ' - ಎಂದರೆ 'ಸ್ವತ ಏವೇಷ್ಟತ್ವಮ್' ಅಂದರೆ ಸ್ವಭಾವವೇ ಅನುಕೂಲವಾಗಿರುವಿಕೆ.

**ಅನುಕೂಲಂ ಸುಖಂ ದುಃಖಂ ಪ್ರತಿಕೂಲ ಮಿತಿ ಸ್ಥಿತೇಃ।**

**ಸ್ವಾತ್ಮಾಸ್ವಸ್ಯಾನುಕೂಲೋಹಿತ್ಯಾತ್ಮಸಾಕ್ಷಿಕ ಏವ ಸಃ।**[1] ಎಂಬಂತೆ ತನಗೆ ತಾನೇ ಸುಖರೂಪವಾಗಿರುವಿಕೆ.

## ಸೂ. 10 ಉಣರ್ನ್ದವನ್ ಸುಖಮಾಗವುರಂಗಿನೇನ್ ಎನ್ಗೈಯಾಲೇ ಸುಖರೂಪಮಾಗಕ್ಕಡವತು.

ಆತ್ಮಸ್ವರೂಪವು ಸುಖರೂಪವಾದದ್ದು ಎಂಬುದನ್ನು ನಿರೂಪಿಸಲು ಸುಪ್ತ, ಪ್ರಬುದ್ಧ ಮತ್ತು ಪ್ರತ್ಯಭಿಜ್ಞೆ (ಸ್ಮರಣೆ) ಗಳನ್ನು ಪ್ರಮಾಣವಾಗಿ ಈ ಸೂತ್ರದಲ್ಲಿ ತಿಳಿಸಲಾಗಿದೆ. '' ಸುಖವಾಗಿ ನಿದ್ರಿಸಿದೆ' ಎಂಬ ಪ್ರತ್ಯಭಿಜ್ಞೆ ಇಲ್ಲಿ ಪ್ರಮಾಣ' ಎಂದು 'ತತ್ವಶೇಖರ' ದಲ್ಲೂ ಹೇಳಲ್ಪಟ್ಟಿದೆ. ಸುಷುಪ್ತಿ ದೆಸೆಯಲ್ಲಿ (ನಿದ್ರಿಸುವಾಗ ಪರೋಕ್ಷ ವಿಷಯಾನುಭವವಿಲ್ಲದ್ದರಿಂದಲೂ,) ಪರಾಗರ್ಥಾನುಭವವಿಲ್ಲದ್ದರಿಂದಲೂ, ಪ್ರತ್ಯಗರ್ಥಸ್ಫುರಣ (ತನ್ನಬಗ್ಗೆಮಾತ್ರ) ವೇರ್ಪಡುವುದರಿಂದಲೂ ನಿದ್ರೆಯಿಂದ ಎಚ್ಚೆತ್ತವನಿಂದ ಹೇಳಲ್ಪಡುವ ಸುಖವು 'ಸ್ವರೂಪಸುಖವೇ' ಆಗಿರಬೇಕು. 'ಈಗ ಸುಖವೇರ್ಪಡುವಂತೆ ನಿದ್ರಿಸಿದೆ' ಎಂಬುದೇ 'ಸುಖವಾಗಿ ನಿದ್ರಿಸಿದೆ' ಎಂಬುದರ ಅರ್ಥವಾಗಿದೆ ಎಂದು ಹೇಳಬಾರದು. ಏಕೆಂದರೆ 'ಸವಿಯಾಗಿ ಹಾಡಿದೆ' ಎಂಬಂತೆಯೇ (ಪ್ರತಿಪತ್ತಿ ಶರೀರವು) 'ಸುಖವಾಗಿ ನಿದ್ರಿಸಿದೆ' ಎಂಬುದೂ ಇರುವುದರಿಂದ. ಇದನ್ನು ಶ್ರೀಭಾಷ್ಯದಲ್ಲಿ '**ಏವಂ ಹಿ ಸುಪ್ತೋತ್ಥಿತಸ್ಯ ಪರಾಮರ್ಶಃ ಸುಖಮಹಮಸ್ವಾಪ್ಸಮಿತಿ ಅನೇನ ಪ್ರತ್ಯವಮರ್ಶನೇನ ತದಾನೀಮಪ್ಯಹಮರ್ಥಸ್ಯೈವಾತ್ಮನಃ ಸುಖಿತ್ವಂ ಜ್ಞಾತೃತ್ವಂ ಚ ಜ್ಞಾಯತೇ ನ ಚ ವಾಚ್ಯಂ ಯಥೇದಾನೀಂ ಸುಖಭವತಿ ತಥಾತದಾನೀ ಮಸ್ವಾಪ್ಸಮಿತ್ಯೇಷಾ ಪ್ರತಿಪತ್ತಿರಿತಿ, ಅತದ್ರೂಪತ್ವಾತ್ ಪ್ರತಿಪತ್ತೇಃ**'[1] ಎಂದು ಶ್ರೀಭಾಷ್ಯಕಾರರೂ ಅನುಗ್ರಹಿಸಿದ್ದಾರೆ.

ಸ್ವರೂಪವು ಅನುಕೂಲವಲ್ಲದಿದ್ದರೆ ಪ್ರೇಮಾಸ್ಪದತ್ವ ಕೂಡದು. '**ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮ್**'[2] ಇತ್ಯಾದಿಗಳಿಂದ ಈ ಅರ್ಥವು ಸಿದ್ಧವಾಗುತ್ತದೆ. '**ಆದ್ರ್ರಂ ಜ್ವಲತಿ**'[3], '**ನಿರ್ವಾಣಮಯ ಏವಾಯಮಾತ್ಮಾ**'[4], '**ಜ್ಞಾನಾನಂದಮಯಸ್ತ್ವಾತ್ಮಾ**'[5], '**ಜ್ಞಾನಾನಂದದ್ಯೆಲಕ್ಷಣಮ್**'[6] ಇತ್ಯಾದಿ ಶ್ರುತಿ ಸ್ಮೃತಿ ವಾಕ್ಯಗಳಿಂದ ಆತ್ಮನ ಆನಂದರೂಪತ್ವವು ಸುಸ್ಪಷ್ಟವಾಗಿದೆ.

ಹಿಂದಿನ ಸೂತ್ರಗಳಲ್ಲಿ ಪ್ರಕೃತಿಗಿಂತ ವಿಲಕ್ಷಣ ಎನ್ನುವುದರಿಂದ ದೇಹಾತ್ಮವಾದವನ್ನು ನಿರಸನ ಮಾಡಲಾಯಿತು. ನಂತರ ಅಜಡತ್ವ, ಆನಂದತ್ವಗಳನ್ನು ಹೇಳುವುದರಿಂದ ಜಡಾತ್ಮವಾದವನ್ನು ನಿರಸನಮಾಡಲಾಯಿತು.

## ಸೂ. 11 ನಿತ್ಯಮಾಕ್ಕೈಯಾವತು- ಎಪ್ಪೋತು ಮುಣ್ಡಾಕ್ಕೈ.

ನಿತ್ಯತ್ವವೆಂದರೆ- ಸರ್ವಕಾಲವರ್ತಿತ್ವ

ಎಲ್ಲಾ ಕಾಲಗಳಲ್ಲಿಯೂ ನಿಯತವಾಗಿ ಇರುವಿಕೆ.

## ಸೂ. 12 ಎಪ್ಪೋದು ಮುಣ್ಡಾಕಿಲ್ ಜನ್ಮಮರಣಂಗಳುಣ್ಡಾಕಿರ ಪಡಿಯೆನ್ನೆನ್ನಿಲ್: ಜನ್ಮಮಾವತು-ದೇಹ ಸಂಬಂಧಮ್. ಮರಣಮಾವತ್-ದೇಹವಿಯೋಗಮ್

ಆತ್ಮಾ ಸರ್ವಕಾಲ ಇರುವಂತಹುದಾದರೆ 'ಪ್ರಜಾಪತಿಃ ಪ್ರಜಾ ಅಸೃಜತ'[1] ; 'ಸನ್ಮೂಲಾಸ್ಸೋಮ್ಯೇ ಮಾಸ್ಸರ್ವಾಃ ಪ್ರಜಾಃ;[2] 'ಯತೋವಾ ಇಮಾನಿ ಭೂತಾನಿ ಜಾಯಂತೇ'; 'ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನಜೀವಾನ್ ವ್ಯಸಸರ್ಜ ಭೂಮ್ಯಾಮ್'[3] ಇತ್ಯಾದಿ ಶ್ರುತಿ ವಾಕ್ಯಗಳಲ್ಲಿ ಹೇಳಲ್ಪಡುವ ಜನನ ಮರಣಗಳು ಏರ್ಪಡುವುದು ಹೇಗೆಂದರೆ: ಜನ್ಮವೆಂದರೆ ದೇಹಸಂಬಂಧ, ಮರಣವೆಂದರೆ ದೇಹವಿಯೋಗ. ನಿತ್ಯನಾದರೆ ಸೃಷ್ಟಿಗೆ ಮುಂಚೆ ಏಕತ್ವಾವಧಾರಣ ಕೂಡದು. ಎಂದರೆ; (ಏಕತ್ವವೆಂದರೆ ನಾಮರೂಪ ವಿಭಾಗಗಳಿಲ್ಲದೇ ಇರುವುದು) ಅದೂ ಕೂಡ ಸಂಸಾರದೆಶೆಯಲ್ಲಿ ಆತ್ಮಾ ಇಲ್ಲ ಎನ್ನುವುದಾದರೆ, ಈಶ್ವರನಿಗೆ ಉಪಾದಾನತ್ವಕೂಡದು. ಅಕೃತಾಭ್ಯಾಗಮಕೃತ ವಿಪ್ರಣಾಶಗಳು ಬರುತ್ತವೆ. ಆದ್ದರಿಂದ ಆತ್ಮನ ನಿತ್ಯತ್ವವನ್ನು ಒಪ್ಪಿಕೊಳ್ಳಬೇಕು. 'ನಜಾಯತೇ ಮ್ರಿಯತೇ ವಾ ವಿಪಶ್ಚಿತ್';[4] 'ಜ್ಞಾಜ್ಞಾ ದ್ವಾವಜಾವೀಶನೀಶೌ' ; 'ನಿತ್ಯೋನಿತ್ಯಾನಾಂ'; 'ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ'; [5] 'ನಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾಭವಿತಾ – ನಭೂಯಃ। ಅಜೋನಿತ್ಯಶ್ಶಾಶ್ವತೋಯಂ ಪುರಾಣೋ ನಹನ್ಯತೇ ಹನ್ಯಮಾನೇ ಶರೀರೇ';[6] ಎಂದು ಆತ್ಮನಿತ್ಯತ್ವ ಪ್ರತಿಪಾದಕಗಳಾದ ಶ್ರುತಿಸ್ಮೃತಿಗಳು ಅನೇಕವಾಗಿದೆ.

## ಸೂ. 13 ಅಣುವಾನಪಡಿ ಎನ್ನೆನ್ನಿಲ್.

ಅಚಿತ್‌ಗಿಂತ ಬೇರೆಯಾಗಿ, ಅಜಡವಾಗಿ, ಆನಂದರೂಪವಾಗಿ, ನಿತ್ಯವಾಗಿದ್ದರೂ ವಿಭುವಾಗಿರಬಹುದಲ್ಲ; ಆತ್ಮಸ್ವರೂಪವು ಅಣು ಎಂದು ಅರಿಯುವ ಬಗೆ ಹೇಗೆ ಎಂಬ ಜಿಜ್ಞಾಸು ಪ್ರಶ್ನೆಯನ್ನು ಈ ಸೂತ್ರದಲ್ಲಿ ಅನುವದಿಸಲಾಗಿದೆ.

## ಸೂ. 14 ಹೃದಯ ಪ್ರದೇಶತ್ತಿಲ್ ನಿನ್ರುಂ ಉತ್ಕ್ರಮಿತ್ತು ಪ್ಪೋವತು ವರುವತಾಮೆನ್ರು ಶಾಸ್ತ್ರಮ್ ಶೊಲ್ಲುಕೈಯಾಲೇ ಆತ್ಮಾ ಅಣುವಾಕಕ್ಕಡವತು.

ಹಿಂದಿನ ಸೂತ್ರದಲ್ಲಿನ ಪ್ರಶ್ನೆಗೆ ಈ ಸೂತ್ರದಲ್ಲಿ ಉತ್ತರಿಸಲಾಗಿದೆ. 'ಹೃದಿಹ್ಯೇವಾಯಮಾತ್ಮಾ'[1] ಎಂದು ಹೃದಯ ಸ್ಥಿತಿಯನ್ನೂ; 'ತೇನ ಪ್ರದ್ಯೋತೇ ನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷೋವಾ ಮೂರ್ಧ್ನೋರ್ವಾಽನ್ಯೇಭ್ಯೋವಾ ಶರೀರ ದೇಶೇಭ್ಯಃ[2] ಎಂದು ಉತ್ಕ್ರಮಣವನ್ನೂ; 'ಯೇವೈಕೇಚಾಸ್ಮಾಲ್ಲೋಕಾತ್ಪ್ರಯಂತಿ ಚಂದ್ರಮಸಮೇವ ತೇ ಸರ್ವೇಗಚ್ಛಂತಿ'[3] ಎಂದು ಗಮನವನ್ನು; 'ತಸ್ಮಾಲ್ಲೋಕಾತ್ಪುನರೇತ್ಯ ಸ್ಮೈ ಲೋಕಾಯ ಕರ್ಮಣೇ'[4] ಎಂದು ಆಗಮನವನ್ನೂ ; ನಿರ್ದೋಷ ಪ್ರಮಾಣವಾದ ವೇದಾಂತಶಾಸ್ತ್ರ ಹೇಳುವುದರಿಂದ 'ಆತ್ಮ' ತತ್ತ್ವವನ್ನು 'ಅಣು' ಎನ್ನಲಾಗುತ್ತದೆ. ವಿಭುವಾದರೆ ಇದಾವುದೂ ಹೊಂದುವುದಿಲ್ಲ. ಸೂತ್ರಕಾರರೂ (ಬ್ರಹ್ಮಸೂತ್ರಕಾರರಾದ ಶ್ರೀ ವ್ಯಾಸ ಭಗವಾನರು) ಆತ್ಮನ ಅಣುತ್ವವನ್ನು ಸಾಧಿಸುವಲ್ಲಿ 'ಉತ್ಕ್ರಾಂತಿಗತ್ಯಾಗತೀನಾಮ್' ಎಂದು ಈ ಉಪನಿಷದ್ವಾಕ್ಯದ ಆಧಾರದಿಂದಲೇ ಹೇಳಿದರು. 'ಏಷೋಣುರಾತ್ಮಾಚೇತಸಾವೇದಿತವ್ಯಃ'[5] ಎಂದೂ 'ವಾಲಾಗ್ರಶತ ಭಾಗಸ್ಯ ಶತಧಾಕಲ್ಪಿತಸ್ಯ ಚ ಭಾಗೋ ಜೀವಸ್ಸವಿಜ್ಞೇಯಃ'[6] ಎಂದೂ 'ಆರಾಗ್ರಮಾತ್ರೋಹ್ಯವರೋಪಿ ದೃಷ್ಟಃ'[7] ಎಂದೂ

'ಸ್ವರೂಪಮಣುಮಾತ್ರಂ ಸ್ಯಾತ್ ಜ್ಞಾನಾನಂದೈಕಲಕ್ಷಣಮ್।
ತ್ರಸರೇಣು ಪ್ರಮಾಣಾಸ್ತೇ ರಶ್ಮಿ ಕೋಟಿ ವಿಭೂಷಿತಾಃ।[8] ಎಂಬ
ಇತ್ಯಾದಿ ಶ್ರುತಿ ಸ್ಮೃತಿಗಳಿಂದಲೂ ಆತ್ಮನ ಅಣುತ್ವವು ಸಿದ್ಧವಾಗಿದೆ.

## ಸೂ. 15 ಅಣುವಾಯ್ ಹೃದಯತ್ತಳವಿಲೇ ನಿರ್ಕುಮಾಕಿಲ್ ಶರೀರಮೆಂಗುಮೊಕ್ಕ ಸುಖದುಃಖಙ್ಗಳ್ಳೈ ಭುಜಕ್ಕಿರಪಡಿ ಎನ್ನೆನ್ನಿಲ್.

ಆತ್ಮಾ ಅಣುವಾದರೆ, ಹೃದಯ ಪ್ರದೇಶದಲ್ಲಿ ಇರುವವನಾದರೆ ಶರೀರ ವ್ಯಾಪಿಯಾದ ಸುಖದುಃಖಾನುಭವ ಏರ್ಪಡುವುದು ಹೇಗೆ? 'ಪಾದೇ ಮೇ ವೇದನಾ; ಶಿರಸಿ ಮೇ ವೇದನಾ, ಪಾದೇ ಮೇ ಸುಖಂ ಶಿರಸಿ ಮೇ ಸುಖಂ' ಎಂಬ ಅನುಭವ ಹೇಗೆ ಉಂಟಾಗುತ್ತದೆ' ಎಂಬ ಶಂಕೆಯನ್ನು ಇಲ್ಲಿ ಅನುವದಿಸಲಾಗಿದೆ.

## ಸೂ. 16 ಮಣಿದ್ಯುಮಣಿದೀಪಾದಿಗಳ್ ಓರಿಡತ್ತಿಲಿರುಕ್ಕ ಪ್ರಭೈ ಎಂಗುಮೊಕ್ಕ ವ್ಯಾಪಿಕ್ಕು ಮಾಪೋಲೇ ಜ್ಞಾನಮೆಙ್ಗಮೊಕ್ಕ ವ್ಯಾಪಿಕ್ಕಯಾಲೇ ಅವತ್ತೈ ಭುಜಿಕ್ಕತ್ತಟ್ಟಿಲ್ಲೈ.

ಹಿಂದಿನ ಸೂತ್ರದ ಶಂಕೆಯನ್ನು ಈ ಸೂತ್ರದಲ್ಲಿ ಪರಿಹರಿಸಲಾಗಿದೆ. ಮಣಿ, ಸೂರ್ಯ, ದೀಪ ಇತ್ಯಾದಿ ಪ್ರಭೆಗಳನ್ನುಳ್ಳ ಪದಾರ್ಥಗಳು ಒಂದೇ ಸ್ಥಳದಲ್ಲಿದ್ದರೂ ಅವುಗಳ ಪ್ರಭೆ ಸುತ್ತಲೂ ವ್ಯಾಪಿಸುವಂತೆ, ಆತ್ಮಾ ಹೃದಯ ಪ್ರದೇಶದಲ್ಲಿದ್ದರೂ ಆತ್ಮನ ಧರ್ಮವಾದ ಜ್ಞಾನವು ಎಲ್ಲೆಡೆ ವ್ಯಾಪಿಸುತ್ತದೆ. ಆದ್ದರಿಂದ ಶರೀರದಾದ್ಯಂತ ಏರ್ಪಡುವ ಅನುಭವಗಳನ್ನು ಹೊಂದಲು ಯಾವ ತಡೆಯೂ ಇಲ್ಲ. '**ಗುಣದ್ವಾಲೋಕವತ್**'[1] ಎಂಬ ಬ್ರಹ್ಮ ಸೂತ್ರದಲ್ಲಿ ಇದನ್ನು ನಿರೂಪಿಲಾಗಿದೆ.ಭಗವದ್ರಾಮಾನುಜಾಚಾರ್ಯರೂ ಶ್ರೀ ಭಾಷ್ಯದಲ್ಲಿ ಇದನ್ನೇ ವಿವರಿಸಿದ್ದಾರೆ. ಜ್ಞಾನ ವ್ಯಾಪ್ತಿಯಿಂದಲೇ ಶರೀರಗತವಾದ ಸರ್ವವನ್ನೂ ಆತ್ಮಾ ಅನುಭವಿಸುತ್ತಾನೆ ಎಂಬುದು ಬೃಹದಾರಣ್ಯಕದಲ್ಲಿ ಹೇಳಲ್ಪಟ್ಟಿದೆ. ''**ಪ್ರಜ್ಞಯಾವಾಚಂ ಸಮಾರುಹ್ಯ ವಾಚಾಸರ್ವಾಣಿ ಕಾಮಾನ್ಯಾ ಪ್ನೋತಿ**'' ;[2] ''**ಪ್ರಜ್ಞಯಾ ಘ್ರಾಣಂ ಸಮಾರುಹ್ಯ ಘ್ರಾಣೇನ ಸರ್ವಾನ್ ಗನ್ಧಾನ್ ಆಪ್ನೋತಿ**'' ಇತ್ಯಾದಿಯಾಗಿ ಇದನ್ನು ಕಾಣಬಹುದು.

## ಸೂ. 17 ಒರುವನ್ ಏಕಕಾಲತ್ತಿಲ್ ಅನೇಕ ದೇಹಂಗಳ್ಳೈ ಪರಿಗ್ರಹಿಕ್ಕಿರತುಮ್ ಜ್ಞಾನ ವ್ಯಾಪ್ತಿಯಾಲೇ.

ಒಂದೇ ಶರೀರದಲ್ಲಿ ಮಾತ್ರವಲ್ಲದೆ, ಏಕಕಾಲದಲ್ಲೇ ಅನೇಕ ಶರೀರವನ್ನು ಪರಿಗ್ರಹಿಸುವುದು ಕೂಡ ಸಾಧ್ಯವಾಗುವುದು ಈ ಜ್ಞಾನ ವ್ಯಾಪ್ತಿಯಿಂದಲೇ. ಹೀಗೆ ಏಕಕಾಲದಲ್ಲೇ ಜ್ಞಾನ ವ್ಯಾಪ್ತಿಯಿಂದ ಅನೇಕ ಶರೀರ ಪರಿಗ್ರಹ ಮಾಡಿರುವುದನ್ನು ಸೌಭರಿ ಮಹರ್ಷಿಗಳಲ್ಲಿ ಕಾಣಬಹುದು.

## ಸೂ. 18 ಅವ್ಯಕ್ತಮಾಕೈಯಾವತು- ಘಟಪಟಾದಿಗಳ್ಳೈ ಗ್ರಹಿಕ್ಕಿರ ಚಕ್ಷುರಾದಿಕಳಾಲ್ ತೋತ್ತಾದಿರುಕ್ಕೈ.

ಈ ಆತ್ಮವಸ್ತು ಯಾವುದಕ್ಕೂ ಗೋಚರವಲ್ಲ ಎಂದರೆ ಆ ಪದಾರ್ಥ ತುಚ್ಛವಾಗಿಬಿಡುತ್ತದೆ.

'ತುಚ್ಛ' ಎಂದರೆ 'ಇಲ್ಲವೇ ಇಲ್ಲ ' ಎಂದು ಅರ್ಥ. ಆದ್ದರಿಂದ ಆತ್ಮನನ್ನು 'ಅವ್ಯಕ್ತ' ಎಂದು ಹೇಳುವುದರ ಅರ್ಥ, ಇಂದ್ರಿಯ ಜ್ಞಾನಗೋಚರವಲ್ಲ ಆದರೆ ಮಾನಸಜ್ಞಾನಗಮ್ಯವಾದದ್ದು ಎಂಬುದಾಗಿದೆ.

ಆಳ್ವಾರರೂ '**ಶೆನ್ರು ಶೆನ್ರು ಪರಂಪರಮಾಯ್**' ಎಂದು ಪ್ರಾರಂಭಿಸಿ '**ಜ್ಞಾನಮ್ ಕಡನ್ದತೇ**' ಎಂದು ಇಂದ್ರಿಯ ಜ್ಞಾನ ಅಗೋಚರತ್ವವನ್ನು ತಿಳಿಸಿದರು. '**ಛೇದನಾದಿ ಯೋಗ್ಯಾನಿ ಘಟಪಟಾದೀನಿ ವಸ್ತೂನಿ ಯೈಃ ಪ್ರಮಾಣೈರ್ವ್ಯಜ್ಯಂತೇ. ತೈರಯಂ ಆತ್ಮಾ ನ ವ್ಯಜ್ಯತ ಇತಿ ಅವ್ಯಕ್ತಃ**' [1] ಎಂದು ಶ್ರೀಭಾಷ್ಯಕಾರರೂ ಭಾಷ್ಯದಲ್ಲಿ ನಿರೂಪಿಸಿದ್ದಾರೆ. ಇದನ್ನೇ ಈ ಸೂತ್ರದಲ್ಲಿ ಹೀಗೆ ಹೇಳಲಾಗಿದೆ.

## ಸೂ. 19 ಅಂಚಿತ್ಯಮಾಕೈಯಾವತು - ಅಚಿತ್ತೋಡು ಸಜಾತೀಯಮೆನ್ರು ನಿನೈಕ್ಕವೊಣ್ಣಾತಿರುಕ್ಕೈ.

'**ಯತಶ್ಛೇದ್ಯಾದಿ ವಿಸಜಾತೀಯಸ್ತತ ಏನ ಸರ್ವವಸ್ತು ಸಜಾತೀಯ ತ್ವೇನ ತತ್ತತ್ಸ್ವಭಾವಯುಕ್ತತಯಾ ಚಿಂತಯಿತುಮಪಿನಾರ್ಹಃ**' [1] ಎಂದು ಶ್ರೀಭಾಷ್ಯದಲ್ಲಿ ನಿರೂಪಿಸಲ್ಪಟ್ಟಿದ್ದಕ್ಕನುಗುಣವಾಗಿ ಈ ಸೂತ್ರವು ಇದೆ.

'ಅಂಚಿತ್ಯ' ಎಂದರೆ ಚಿಂತನೆಗೆ ಯೋಗ್ಯವಲ್ಲ ಎಂದು ಅರ್ಥೈಸಬಾರದು. ಏಕೆಂದರೆ ಆತ್ಮ ವಿಷಯಿಕವಾದ ಶ್ರವಣ ಮನನಾದಿಗಳಿಗೆ ಆಗ ವಿರೋಧ ಏರ್ಪಡುತ್ತದೆ. ಆದ್ದರಿಂದ 'ಅಂಚಿತ್ಯ' ಎಂದರೆ ಅಚಿತ್ತಿನಂತೆಯೇ ಎಂದು ಭಾವಿಸಲಾಗದೇ ಇರುವಿಕೆ ಎಂದು ಅರ್ಥೈಸಬೇಕು. ಅಚಿತ್‌ಗಿಂತ ಬೇರೆಯಾದದ್ದು ಎಂದರ್ಥ.

(ಅಚಿತ್‌ಗೆ ಸಜಾತೀಯವಾಗಿರಲು ಅನರ್ಹವಾದದ್ದೇ ಅಂಚಿತ್ಯ) ಶ್ರೀಗೀತೆಯಲ್ಲಿ '**ಅವ್ಯಕ್ತೋಽಯಂ ಅಚಿಂತ್ಯೋಽಯಂ**' [2] ಎಂಬುದಕ್ಕನುಸಾರವಾಗಿ ಆತ್ಮ ಸ್ವರೂಪವೈಲಕ್ಷಣವನ್ನು ಈ ಸೂತ್ರದಲ್ಲಿ ಪ್ರಕಟಗೊಳಿಸಲಾಯಿತು.

## ಸೂ. 20 ನಿರವಯವಮಾಕೈಯಾವತು – ಅವಯವಸಮುದಾಯಮನ್ರಿಕ್ಕೇ ಇರುಕ್ಕೈ.

'**ವಿಜ್ಞಾನಮಯಃ**' ಎಂದೂ '**ವಿಜ್ಞಾನಘನಃ**' ಎಂದೂ ಶ್ರುತಿ ಹೇಳುವಂತೆ ಜ್ಞಾನೈಕಾಕಾರವಾದ್ದರಿಂದ ಅಚಿತ್ ವಸ್ತುಗಳಂತೆ ಅವಯವಗಳ ಸಂಘಾತಾತ್ಮಕವಲ್ಲದೇ (ಗುಂಪು) ಇರುವಿಕೆಯೇ ನಿರವಯವತ್ವ.

## ಸೂ. 21 ನಿರ್ವಿಕಾರ ಮಾಕೈಯಾವತು -ಅಚಿತ್ತುಪ್ಪೋಲೇ ವಿಕರಿಕ್ಕೈಯನ್ರಿಕ್ಕೇ ಒರುಪಡಿಪಟ್ಟಿರುಕ್ಕೈ.

'**ಅಮೃತಾಕ್ಷರಂ ಹರಃ**'; '**ಆತ್ಮಾಶುದ್ಧೋಕ್ಷರಃ**' ಎಂದು 'ಅಕ್ಷರ ' ಶಬ್ದದಿಂದ ಹೇಳಲ್ಪಡುವ ವಸ್ತುವಾದ್ದರಿಂದ, ಅಚಿತ್‌ನಂತೆ ವಿಕಾರಕ್ಕೆ (ಬದಲಾವಣೆ) ಒಳಗಾಗದೆ ಇರುವಿಕೆಯೇ ನಿರ್ವಿಕಾರತ್ವ. ಆದ್ದರಿಂದಲೇ '**ಅವಿಕಾರ್ಯೋಽಯಮ್**' ಎಂದು ಗೀತಾಚಾರ್ಯನಾದ ಪರಮಾತ್ಮನೂ ಉಪದೇಶಿಸಿದ್ದಾನೆ.

## ಸೂ. 22 ಇಪ್ಪಡಿಯಿರುಕ್ಕೈಯಾಲೇ ಶಸ್ತ್ರಮ್, ಅಗ್ನಿ, ಜಲಮ್ ವಾತಮ್, ಆತಪಮ್ ತೊಡಕ್ಕಮಾನವತ್ತಾಲ್ ಭೇದಿತ್ತಲ್, ದಹಿತ್ತಲ್, ನನೈತ್ತಲ್, ಶೋಷಿಪ್ಪಿತ್ತಲ್ ಶೆಯ್‌ಕೈಕ್ಕು ಅಯೋಗ್ಯಮಾಯಿರುಕ್ಕುಮ್.

ಹಿಂದಿನ ಸೂತ್ರದಲ್ಲಿ ನಿರೂಪಿಸಿದ ಲಕ್ಷಣವನ್ನುಳ್ಳದ್ದರಿಂದ ಭೇದ್ಯಾದಿಗಳಿಗೆ ಒಳಗಾಗುವಂತಹದಲ್ಲ ಎಂದು ಈ ಸೂತ್ರದಲ್ಲಿ ಪ್ರತಿಪಾದಿಸುತ್ತಾರೆ.

ಒಂದು ವಸ್ತುವನ್ನು ಶಸ್ತ್ರವು ಭೇದಿಸಬೇಕಾದರೂ, ಅಗ್ನಿಯು ದಹಿಸಬೇಕಾದರೂ ಆ ವಸ್ತುವಿನಲ್ಲಿ ವ್ಯಾಪಿಸಬೇಕು. ಆತ್ಮನು ಸರ್ವ ಅಚಿತ್ ತತ್ತ್ವದ ಒಳಗೂ ಹೋಗಬಲ್ಲ ವ್ಯಾಪಕನಾಗಿ, ಅವುಗಳಿಗಿಂತಲೂ ಅತ್ಯಂತ ಸೂಕ್ಷ್ಮಭೂತನಾಗಿದ್ದಾನೆ. ಅಚಿತ್ ತತ್ತ್ವವು ವ್ಯಾಪ್ಯವಾಗಿ ಸ್ಥೂಲಭೂತವಾದ್ದರಿಂದಲೂ, ಈ ಅಚಿತ್ತಾದ ಶಸ್ತ್ರವೋ, ಅಗ್ನಿಯೋ ಆತ್ಮನೊಳಗೆ ಪ್ರವೇಶಿಸಲಾರದು. ಆದ್ದರಿಂದ ಶಸ್ತ್ರ, ಅಗ್ನಿ, ವಾಯು, ಜಲಗಳಿಂದ ಏರ್ಪಡುವ ಭೇದನ, ದಹನಾದಿಗಳು ಆತ್ಮನಿಗೆ ಏರ್ಪಡಲಾರದು.

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನೈಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ॥**
**ಅಚ್ಛೇದ್ಯೋಽಯಂ ಅದಾಹ್ಯೋಽಯಂ ಅಕ್ಲೇದ್ಯೋ ಅಶೋಷ್ಯ ಏವಚ॥**
**ನಿತ್ಯಃ ಸರ್ವಗತ ಸ್ಥಾಣುಃ ಅಚಲೋಽಯಂ ಸನಾತನಃ ।** [1] ಎಂಬುದಾಗಿ ಗೀತೆಯಲ್ಲೂ ಇದು ಹೇಳಲ್ಪಟ್ಟಿದೆ.

## ಸೂ. 23 ಅರ್ಹತರ್ ಆತ್ಮಾ ವೈ ದೇಹ ಪರಿಮಾಣಮೆನ್ರಾರ್‌ಕಳ್.

ನಿರ್ವಿಕಾರವಾದ ಆತ್ಮ ವಸ್ತುವಿಗೆ ಪರಿಣಾಮಿತ್ವವನ್ನು ಹೇಳುವ ಅರ್ಹತ ಮತವು ಅಯುಕ್ತ ಎಂಬುದನ್ನು ತಿಳಿಸುತ್ತಾರೆ.

ಅರ್ಹತರೆಂದರೆ ಜೈನರು.ಅವರುಗಳು 'ಪಾದೇ ಮೇ ವೇದನಾ' ಇತ್ಯಾದಿ. ಪ್ರಕಾರದಂತೆ ತಲೆಯಿಂದ ಕಾಲಿನವರೆಗೂ ದೇಹದಲ್ಲಿ ಏರ್ಪಡುವ ದುಃಖಾದಿ ಅನುಭವವು, ಆತ್ಮಾ ದೇಹ ಪರಿಮಾಣವಲ್ಲದಿದ್ದರೆ ಉಂಟಾಗುವುದಿಲ್ಲ. ಆದ್ದರಿಂದ 'ಆತ್ಮಾ ತನ್ನ ಕರ್ಮಾನುಗುಣವಾಗಿ ಪರಿಗ್ರಹಿಸುವ ಗಜ ಪಿಪೀಲಿಕಾದಿ (ಆನೆ, ಇರುವೆ ಇತ್ಯಾದಿ) ಶರೀರಗಳಿಗನುಗುಣವಾಗಿ ಪರಿಣಮಿಸಿ, ಆಯಾಯಾ ದೇಹ ಪರಿಮಾಣವನ್ನು ಉಳ್ಳವನಾಗುತ್ತಾನೆ' ಎನ್ನುತ್ತಾರೆ. ದೇಹ ಎಷ್ಟಿದೆಯೋ, ಆತ್ಮದ ಆಕಾರ ಅಷ್ಟೇ ಇದೆ ಎನ್ನುತ್ತಾರೆ.

## ಸೂ. 24 ಅದು ಶ್ರುತಿವಿರುದ್ಧಮ್.

ಜೈನರ ಈ ನಿರೂಪಣೆ ಶ್ರುತಿ ವಿರುದ್ಧವಾಗಿದೆ.

ಸೂತ್ರಕಾರರಿಗೆ ಇಲ್ಲಿ ವಿವಕ್ಷಿತವಾದ ಶ್ರುತಿ ಯಾವುದೆಂದರೆ, **'ಅಮೃತಾಕ್ಷರಂ ಹರಃ'** ಎಂದು ಆತ್ಮನ ನಿರ್ವಿಕಾರತ್ವವನ್ನು ಪ್ರತಿಪಾದಿಸುವುದಾಗಬೇಕು. ದೇಹಪರಿಮಾಣನಾದವನು ಎಂಬುದು ಆತ್ಮಾ ನಿರ್ವಿಕಾರನೆಂಬ ಶ್ರುತಿಯಿಂದ ಬಾಧಿಸಲ್ಪಡುತ್ತದೆ. ಎಂದು ಸೂತ್ರಕಾರರೇ ತತ್ವಶೇಖರದಲ್ಲಿ ತಿಳಿಸಿದ್ದಾರೆ. **'ಏಷಾಣುರಾತ್ಮಾ ವಾಲಾಗ್ರಶತಭಾಗಸ್ಯ'** ಎಂಬ ಶ್ರುತಿಗಳೂ ಆತ್ಮಾ ದೇಹ ಪರಿಮಾಣವೆನ್ನುವುದನ್ನು ಬಾಧಿಸುವುದರಿಂದ ಅವುಗಳನ್ನೂ ಅಲ್ಲಿ ಹೇಳುವವರಿದ್ದಾರೆ.

## ಸೂ. 25 ಅನೇಕ ದೇಹಂಗಳೈ ಪರಿಗ್ರಹಿಕ್ಕಿರ ಯೋಗಿಕಳ್ ಸ್ವರೂಪತ್ತುಕ್ಕು ಶೈಥಿಲ್ಯಮುಮ್ ವರುಮ್.

ಇದೇ ವಿಷಯವಾಗಿ ಇರುವ ಮತ್ತೊಂದು ದೂಷಣೆಯನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ.

ಆತ್ಮಾ ದೇಹ ಪರಿಮಾಣ ಎನ್ನುವ ಪಕ್ಷದಲ್ಲಿ, ಸಂಸಿದ್ಧಯೋಗರಾಗಿ ಸೌಭರಿಯಂತೆ ಏಕಕಾಲದಲ್ಲಿ ಅನೇಕ ದೇಹಗಳನ್ನು ಪರಿಗ್ರಹಿಸಬೇಕಾದಾಗ ವಿರೋಧ ಬರುತ್ತದೆ.

ಪರಕಾಯ ಪ್ರವೇಶ ಮುಖೇನ ಅನೇಕ ಶರೀರಗಳನ್ನು ಪರಿಗ್ರಹಿಸುವ ಯೋಗಿಗಳ ಸ್ವರೂಪಕ್ಕೆ, ಸ್ಥೂಲವಾದ ಶರೀರವನ್ನು ಬಿಟ್ಟು ಸೂಕ್ಷ್ಮವಾದ ಶರೀರವನ್ನು ಪರಿಗ್ರಹಿಸುವಾಗ ಮತ್ತು ಇತ್ಯಾದಿ ಕಡೆಗಳಲ್ಲೆಲ್ಲಾ ಈ ದೇಹ ಪರಿಮಾಣವಾದಕ್ಕೆ ಶೈಥಿಲ್ಯವೇರ್ಪಡುತ್ತದೆ. **'ಏವಂ ಚಾತ್ಮಾ ಕಾರ್ತ್ಸ್ನ್ಯಮ್'** [1] ಎಂಬ ಸೂತ್ರದಲ್ಲಿ ಹೇಳಲ್ಪಡುವಂತೆ, ಅಲ್ಪ ಮಹತ್ ಪರಿಮಾಣಗಳಾದ ಗಜಪಿಪೀಲಿಕಾದಿ ಶರೀರಗಳನ್ನು ಸ್ವಕರ್ಮಾನುಗುಣವಾಗಿ ಪರಿಗ್ರಹಿಸುವವರಿಗೆ - ಆನೆಯ ಶರೀರವನ್ನು ಬಿಟ್ಟು ಇರುವೆ ಶರೀರವನ್ನು ಪ್ರವೇಶಿಸುವಾಗ, ಅವಕಾಶ ಸಾಲದೆ ಶೈಥಿಲ್ಯವೇರ್ಪಡುತ್ತದೆ ಎಂಬುದಾಗಿ ಈ ವಾಕ್ಯವನ್ನು ಅರ್ಥೈಸಬಹುದೇ ಎಂದರೆ ಅದು ಕೂಡದು . **'ಯೋಗಿಗಳ್ ಸ್ವರೂಪತ್ತುಕ್ಕು'** ಎಂದಿರುವುದರಿಂದ, ಆ ಅರ್ಥ ಹೊಂದುವುದಿಲ್ಲ.

## ಸೂ. 26 ಜ್ಞಾನಾಶ್ರಯ ಮಾಕ್ಕೈಯಾವತು - ಜ್ಞಾನತ್ತುಕ್ಕಿ ರುಪ್ಪಿಡಮಾಯಿರುಕ್ಕೈ.

ಜ್ಞಾನವೆಂದರೆ- ಸ್ವಸತ್ತಾಮಾತ್ರದಿಂದ ಸ್ವಾಶ್ರಯವನ್ನು ಕುರಿತು ಸ್ವಪರವ್ಯವಹಾರಕ್ಕೆ ಅನುವಾಗಿರುವ ಆತ್ಮ ಧರ್ಮ.

ಜ್ಞಾನಕ್ಕೆ ಆತ್ಮಾ ಆಶ್ರಯವಾಗಿರುವುದೆಂದರೆ-ದೀಪ ಮತ್ತು ಪ್ರಭೆ ಎರಡೂ ತೇಜಃ ಪದಾರ್ಥ ವಾಗಿರುವಾಗ, ದೀಪವು ಪ್ರಭೆಗೆ ಆಶ್ರಯವಾಗಿರುವಂತೆ. ತಾನು ಜ್ಞಾನ ಸ್ವರೂಪನಾಗಿರುವಾಗ, ತನ್ನ **'ಧರ್ಮವಾದ ಜ್ಞಾನ'**ಕ್ಕೂ ತನ್ನ ಹೊರತಾಗಿ ಬೇರೆ ಸ್ಥಿತಿ, ಉಪಲಂಭಗಳಿಲ್ಲದಂತೆ ಆಧಾರವಾಗಿರುವಿಕೆ.

**'ಅಥಯೋವೇದೇದಂ ಜಿಘ್ರಾಣೀತಿ'** ; [1] **'ಸ ಆತ್ಮಾ ಮನಸೈವೈತಾನ್'**; **'ಕಾಮಾನ್ ಪಶ್ಯನ್ ರಮತೇ'** ; [2] **'ನ ಪಶ್ಯೋ ಮೃತ್ಯುಂ'ಪಶ್ಯತಿ'** ; [3] **'ವಿಜ್ಞಾ ತಾ ರಮತೇ ಕೇನ ವಿಜಾನೀಯಾತ್'**; [4] **'ಜಾನಾತ್ಯೇವಾಯಂ ಪುರುಷಃ'**;[5] **'ಏಷ ಹಿ ದ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮನ್ತಾ ಬೋದ್ಧಾ ಕರ್ತಾ'**; **'ವಿಜ್ಞಾನಾತ್ಮಾ ಪುರುಷಃ'**;[6] **'ಏವಮೇವಾಸ್ಯಪರಿದ್ರಷ್ಟುಃ'** [7] ಇತ್ಯಾದಿ ಶ್ರುತಿ ವಾಕ್ಯಗಳಿಂದ ಆತ್ಮನ ಜ್ಞಾತೃತ್ವವು ಸಿದ್ಧವಾಗಿದೆ.

## ಸೂ. 27 ಆತ್ಮಾ ಜ್ಞಾನತ್ತುಕ್ಕಿ ರಪ್ಪಿಡ ಮನ್ರಿಕ್ಕೇ ಜ್ಞಾನ ಮಾತ್ರಮಾಕಿಲ್.

ಆತ್ಮನ ಜ್ಞಾತೃತ್ವವನ್ನು (ಜ್ಞಾನವುಳ್ಳವನು ಎಂದು) ಒಪ್ಪದೆ, ಜ್ಞಾನ ಮಾತ್ರವೆಂದು ಹೇಳುವ ಬೌದ್ಧಾದಿಗಳ ಮತವನ್ನು ನಿರಾಕರಿಸುವುದಕ್ಕಾಗಿ ಅವರ ಮತವನ್ನು ಇಲ್ಲಿ ತಿಳಿಸುತ್ತಾರೆ.

## ಸೂ. 28 ನಾನರಿವೆನ್ರು ಶೊಲ್ಲವೇಣುಮ್; ನಾನರಿಯಾನಿನ್ರೇ ನೆನ್ನ ಕ್ಕೂಡಾದು.

'ಅಹಮಿದಂ ಜಾನಾಮಿ' ಎಂಬ ಪ್ರತ್ಯಕ್ಷ ಅನುಭವದಿಂದ ಈ ಬೌದ್ಧರ ವಾದವನ್ನು ನಿರಾಕರಿಸುತ್ತಾರೆ.

ಆತ್ಮಾ ಜ್ಞಾನಾಶ್ರಯವಲ್ಲದೆ ಕೇವಲ ಜ್ಞಾನಮಾತ್ರವಿರುವುದಾದರೆ 'ನಾನು ಅರಿವು '(ನಾನು ಜ್ಞಾನ) ಎನ್ನಬೇಕೇ ವಿನಃ 'ನಾನು ಇದನ್ನು ಅರಿತೆ' ಎಂದು ತನ್ನನ್ನು ಜ್ಞಾತಾ (ಅರಿಯುವವನು) ಎನ್ನುವಂತಿಲ್ಲ. 'ಇದನ್ನು ನಾನು ಅರಿತೆ'ಎಂಬುದರಿಂದ ವಿಷಯವನ್ನು ಗ್ರಹಿಸುವ ಜ್ಞಾನಕ್ಕೆ ತಾನು ಆಶ್ರಯ ಎಂಬುದು ಏರ್ಪಡುತ್ತದೆ. ಈರೀತಿ ಆತ್ಮನ ಜ್ಞಾತೃತ್ವ ಪ್ರತ್ಯಕ್ಷ ಸಿದ್ಧವಾದದ್ದರಿಂದ ಇದು ಅಬಾಧಿತವಾದದು. **'ಇದಮಹಮಭಿವೇದ್ಮೀತ್ಯಾತ್ಮವಿತ್ತೋರ್ವಿಭೇದೇ ಸ್ಫುರತಿ ಯದಿತದೈಕ್ಯಂ ಬಾಹ್ಯಮಪ್ಯೇಕ ಮಸ್ತು'** [1] ಎಂದು ಭಟ್ಟರ್ ಬೌದ್ಧ ಮತ ನಿರಾಕರಣೆ ಮಾಡುವಲ್ಲಿ ಇದನ್ನು ತಿಳಿಸಿದ್ದಾರೆ.

## ಸೂ. 29 ಜ್ಞಾತಾವೆನ್ರಪೋತೇ ಕರ್ತಾ ಭೋಕ್ತಾವೆನ್ನುಮಿಡಮ್ ಶೊಲ್ಲಿತ್ತಾಯಿತ್ತು.

ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವಗಳು ಮೂರನ್ನೂ ಹೇಳಬೇಕಾಗಿರುವಾಗ 'ಜ್ಞಾನಾಶ್ರಯ' ಎಂದು ಜ್ಞಾತೃತ್ವ ಮಾತ್ರವನ್ನು ಹೇಳಿ ಮತ್ತೆರಡನ್ನು ಏಕೆ ಹೇಳಲಿಲ್ಲವೆಂದರೆ, ಜ್ಞಾತೃತ್ವವನ್ನು ಹೇಳಿದಾಗಲೇ ಕರ್ತೃತ್ವ ಭೋಕ್ತೃತ್ವಗಳೂ ಹೇಳಲ್ಪಟ್ಟವು ಎನ್ನುತ್ತಾರೆ.

## ಸೂ. 30 ಕರ್ತೃತ್ವ ಭೋಕ್ತೃತ್ವಂಗಳ್ ಜ್ಞಾನಾವಸ್ಥಾವಿಶೇಷಂಗಳಾಕೈಯಾಲೇ.

ಹಿಂದಿನ ಸೂತ್ರದಲ್ಲಿ ತಿಳಿಸಿದ್ದಕ್ಕೆ ಕಾರಣವನ್ನು ಇಲ್ಲಿ ಹೇಳಲಾಗಿದೆ.

**ಹೇಯೋಪಾದೇಯತಾ ಜ್ಞಾನಮೂಲಂ ಜ್ಞಾತೃತ್ವಮಾತ್ಮನಃ।**

**ತತ್ತತ್ಪ್ರಹ್ ಣೋಪಾದಾನ ಚಿಕೀರ್ಷಾಕರ್ತೃತಾಶ್ರಯಾ।** [1]

ಎಂಬಂತೆ ಆತ್ಮನ ಜ್ಞಾತೃತ್ವವು ಹೇಯ, ಉಪಾದೇಯಗಳ ಪ್ರತಿಪತ್ತಿಗೆ ಕಾರಣವಾಗಿದೆ. ಹೇಯಗಳನ್ನು ಬಿಡುವುದರಲ್ಲೂ, ಉಪಾದೇಯಗಳನ್ನು ಹೊಂದುವುದರಲ್ಲೂ ಇರುವ ಕರ್ತೃತ್ವವನ್ನು ಆಧರಿಸಿದೆ. ಕರ್ತೃವಿಗೇ ಇಚ್ಛೆಯಿರುವುದು. ಆ ಇಚ್ಛೆ ಜ್ಞಾನಾವಸ್ಥಾ ವಿಶೇಷವಾಗಿದೆ. ಅದರೊಡನೆ ಕರ್ತೃತ್ವಕ್ಕುಂಟಾದ ಪ್ರತ್ಯಾಸತ್ತಿಯಿಂದ (ಅನುಸ್ಯೂತವಾದ ನಿಕಟ ಸಂಬಂಧ) ಕರ್ತೃತ್ವವನ್ನೂ ಜ್ಞಾನದ ವಿಶೇಷ ಎಂದು ಔಪಚಾರಿಕವಾಗಿ ಹೇಳಲಾಗಿದೆ. ಅಷ್ಟೇ ಅಲ್ಲದೆ ಕರ್ತೃತ್ವವು ಕ್ರಿಯಾಶ್ರಯತ್ವವಾದದ್ದರಿಂದ ಅದನ್ನು ಜ್ಞಾನಾವಸ್ಥಾವಿಶೇಷವೆಂದು ಮುಖ್ಯವಾಗಿ ಹೇಳುವಂತಿಲ್ಲ.

ಕ್ರಿಯೆಯೆಂದರೆ- ಜಾನಾತಿ, ಇಚ್ಛತಿ, ಪ್ರಯತತೇ, ಕರೋತಿ- ಎಂದು ಜ್ಞಾನ, ಇಚ್ಛಾ ಪ್ರಯತ್ನದ ನಂತರದ ಪ್ರವೃತ್ತಿಯಾದದ್ದರಿಂದಲೂ, ತದಾಶ್ರಯತ್ವ ಕರ್ತೃತ್ವವಾದದ್ದರಿಂದಲೂ, ಅದನ್ನು ಜ್ಞಾನಾವಸ್ಥಾ ವಿಶೇಷವೆಂದು ಔಪಚಾರಿಕಾವಾಗಿ ತಿಳಿಯಬೇಕು.

ಭೋಕ್ತೃತ್ವವೆಂದರೆ-ಭೋಗಾಶ್ರಯತ್ವ. ಭೋಗವೆಂದರೆ-ಸುಖದುಃಖರೂಪ ವಾದ ಅನುಭವಜ್ಞಾನ ಅದು ಜ್ಞಾನಾವಸ್ಥಾ ವಿಶೇಷವಾಗಿದೆ. ಈ ಭೋಗಕ್ಕೆ ಆಶ್ರಯವಾದದ್ದರಿಂದ, ಭೋಕ್ತೃತ್ವವನ್ನೂ ಜ್ಞಾನಾವಸ್ಥಾ ವಿಶೇಷವೆಂದು ಔಪಚಾರಿಕವಾಗಿ ಹೇಳಲಾಗುತ್ತದೆ.

ಹೀಗೆ ಜ್ಞಾತೃತ್ವಕ್ಕೂ, ಕರ್ತೃತ್ವ , ಭೋಕ್ತೃತ್ವಗಳಿಗೂ ಇರುವ ಪ್ರತ್ಯಾಸತ್ತಿಯ ಅತಿಶಯತೆಯಿಂದ ಅವು ಮೂರನ್ನೂ ಒಂದಾಗಿ ಹೇಳಬಹುದಾಗಿದೆ. ಆದ್ದರಿಂದ ಜ್ಞಾತೃತ್ವವನ್ನು ಹೇಳಿದಾಗಲೇ ಕರ್ತೃತ್ವ ಮತ್ತು ಭೋಕ್ತೃತ್ವಗಳು ಹೇಳಲ್ಪಟ್ಟಿತು ಎಂಬುದರಲ್ಲಿ ಯಾವ ಹಾನಿಯೂ ಇಲ್ಲ.

## ಸೂ. 31 ಶಿಲರ್ ಗುಣಂಗಳುಕ್ಕೇ ಕರ್ತೃತ್ವಮುಳ್ಳತು, ಆತ್ಮಾವುಕ್ಕಿಲ್ಲೈಯೆನ್ರಾರ್‌ಕಳ್.

ಹೀಗೆ ಆತ್ಮನಿಗೆ ಸ್ವಾಭಾವಿಕವಾದ ಕರ್ತೃತ್ವವು ಇಲ್ಲ. 'ಪ್ರಕೃತಿಗೇ ಕರ್ತೃತ್ವ' ಎನ್ನುವ ಸಾಂಖ್ಯರನ್ನು ಈ ಸೂತ್ರದಲ್ಲಿ ನಿರಾಕರಿಸಲಾಗಿದೆ.

ಸಾಂಖ್ಯಮತದಲ್ಲಿ ಗುಣಗಳು ಮತ್ತು ಪ್ರಕೃತಿಗೆ ಭೇದವಿಲ್ಲ. ಆದ್ದರಿಂದ 'ಪ್ರಕೃತಿಗೆ' ಎನ್ನುವಲ್ಲಿ 'ಗುಣಂಗಳುಕ್ಕೇ' ಎಂದು ಸೂತ್ರದಲ್ಲಿ ಹೇಳಲಾಗಿದೆ.

**'ಮೂಲ ಪ್ರಕೃತಿರ್ನಾಮ, ಸುಖ ದುಃಖ ಮೋಹಾತ್ಮಕಾನಿ, ಲಾಘವ ಪ್ರಕಾಶ ಚಲನೋಪಷ್ಟಂಭನ ಗೌರವಾವರಣ ಕಾರ್ಯಾಣಿ, ಅತ್ಯನ್ತಾತೀನ್ದ್ರಿಯಾಣಿ, ಕಾರ್ಯೈಕ ನಿರೂಪಣವಿವೇಕಾನಿ, ಅನ್ಯೂನಾನತಿರೇಕಾಣಿ, ಸಮತಾಮುಪೇತಾನಿ ಸತ್ವರಜಸ್ತಮಾಂಸಿದ್ರವ್ಯಾಣಿ'** [1] ಎಂಬುದು ಸಾಂಖ್ಯರ ಸಿದ್ಧಾಂತ, ಅವರ ಪ್ರಕಾರ ಪ್ರಕೃತಿಗೇ ಕರ್ತತ್ವ. ಆತ್ಮನಿಗೆ ಇಲ್ಲ.

ಕಠವಲ್ಲಿಯಲ್ಲಿ 'ನ ಜಾಯತೇ ಮ್ರಿಯತೇ' ಇತ್ಯಾದಿ ವಾಕ್ಯಗಳು ಆತ್ಮನಿಗೆ ಜನ್ಮ ಮರಣಾದಿ ಪ್ರಕೃತಿ ಧರ್ಮಗಳೆಲ್ಲವನ್ನು ಪ್ರತಿಷೇಧಿಸುತ್ತದೆ.

**ಹನ್ತಾಚೇನ್ಮನ್ಯತೇ ಹನ್ತುಂ ಹತಶ್ಚೇನ್ಮನ್ಯತೇ ಹತಮ್।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ।**[2]

ಎಂದು ಹನನಾದಿ ಕ್ರಿಯೆಗಳಲ್ಲೂ ಕರ್ತೃತ್ವವು ನಿಷೇಧಿಸಲ್ಪಟ್ಟಿದೆ.

**'ನಾನ್ಯಂ ಗುಣೇಭ್ಯಃ ಕರ್ತಾರಂ ಯಥಾದ್ರಷ್ಟಾನು ಪಶ್ಯತಿ।'** [3] ಎಂದೂ,

**ಕಾರ್ಯಕಾರಣ ಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ।**
**ಪುರುಷ ಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ।** [4]

ಎಂದು ಸರ್ವೇಶ್ವರನೇ ಗೀತೆಯಲ್ಲಿ ತಿಳಿಸಿದ್ದಾನೆ.

ಹೀಗೆ ಅಧ್ಯಾತ್ಮಶಾಸ್ತ್ರಗಳಲ್ಲಿ ಆತ್ಮಾವಿಗೆ ಅಕರ್ತೃತ್ವವನ್ನೂ, ಗುಣಗಳಿಗೇ ಕರ್ತೃತ್ವವನ್ನೂ ಹೇಳಿರುವುದರಿಂದ ಪ್ರಕೃತಿಗೇ ಕರ್ತೃತ್ವ ಆತ್ಮಾವಿಗೆ ಕರ್ತೃತ್ವವಿಲ್ಲ ಕೇವಲ ಭೋಕ್ತೃತ್ವ ಮಾತ್ರವೇ ಎಂದು ಸಾಂಖ್ಯರು ಹೇಳುತ್ತಾರೆ.

## ಸೂ. 32 ಅಪ್ಪೋತಿವನುಕ್ಕು ಶಾಸ್ತ್ರವಶ್ಯತೈಯುಮ್ ಭೋಕ್ತೃತ್ವಮುಮ್ ಕುಲೈಯುಮ್.

ಹಿಂದಿನ ಸೂತ್ರದಲ್ಲಿ ತಿಳಿಸಿದ ಸಾಂಖ್ಯರ ಮತವನ್ನು ಇಲ್ಲಿ ನಿರಾಕರಿಸಲಾಗಿದೆ.

ಪ್ರಕೃತಿಗೇ ಕರ್ತೃವಿದ್ದು ಆತ್ಮನಿಗೆ ಇಲ್ಲ ಎಂಬುದಾದರೆ: ವಿಧಿನಿಷೇಧ ರೂಪವಾದ ಶಾಸ್ತ್ರಕ್ಕೆ ಅಧಿಕಾರಿಯಾಗಿ, ಶಾಸ್ತ್ರವಶನಾಗಿ ನಡೆಯುವುದೂ; ವಿಹಿತ, ನಿಷಿದ್ಧಗಳನ್ನು ಮಾಡುವುದರಿಂದ ಉಂಟಾಗುವ ಸುಖ, ದುಃಖರೂಪವಾದ ಫಲ ಭೋಕ್ತೃತ್ವವೂ ಆತ್ಮನಿಗೆ ಏರ್ಪಡುವುದಿಲ್ಲ.

ಆತ್ಮಾ ಕರ್ತಾ ಅಲ್ಲ ಎಂದರೆ ಶಾಸ್ತ್ರಕ್ಕೆ ವೈಯರ್ಥ್ಯ ಏರ್ಪಡುತ್ತದೆ. **'ಶಾಸ್ತ್ರಂ ಫಲಂ ಪ್ರಯೋಕ್ತರಿ'**; [1] **'ಕರ್ತಾ ಶಾಸ್ತ್ರಾರ್ಥವತ್ತ್ವಾತ್'** [2]ಎಂದು ಹೇಳಲ್ಪಟ್ಟಿದೆ. **'ಸ್ವರ್ಗಕಾಮೋಯಜೇತ'** ; **'ಮುಮುಕ್ಷುರ್ಬ್ರಹ್ಮೋಪಾಸೀತ'**[3] ಎಂಬುದಾಗಿ ಸ್ವರ್ಗ ಮೋಕ್ಷಾದಿ ಫಲಭೋಕ್ತಾ ಆದವನನ್ನೇ ಶಾಸ್ತ್ರಗಳು ಕರ್ತಾವಾಗಿ ನಿಯೋಜಿಸುತ್ತದೆ. ಆದ್ದರಿಂದ ಫಲವನ್ನು ಅನುಭವಿಸುವವನೇ ಅದಕ್ಕಾಗಿ ಕ್ರಿಯೆಯನ್ನು ನಡೆಸುವ ಕರ್ತಾ ಆಗಬೇಕು. ಅಚೇತನವಾದ ಪ್ರಕೃತಿಯೇ ಕರ್ತಾವಾದರೆ ಚೇತನನನ್ನು ಕುರಿತು ಶಾಸ್ತ್ರಗಳು ಏನನ್ನೂ ವಿಧಿಸಕೂಡದು. **'ಶಾಸನಾತ್ ಶಾಸ್ತ್ರಮ್'** ಎಂದೇ

ಪ್ರಸಿದ್ಧವಾಗಿದೆ. ಶಾಸನವೆಂದರೆ-ಪ್ರವರ್ತನ. ಶಾಸ್ತ್ರಕ್ಕೆ ಪ್ರವರ್ತಕತ್ವವು ಬೋಧಜನನದ (ಅರಿವನ್ನು ಉಂಟುಮಾಡುವುದು) ಮೂಲಕವಾಗಿ. ಅಚೇತನವಾದ ಪ್ರಕೃತಿಗೆ ಬೋಧವನ್ನು ಉಂಟುಮಾಡುವುದು ಸಾಧ್ಯವಿಲ್ಲ. ಆದ್ದರಿಂದ ಶಾಸ್ತ್ರ ಅರ್ಥವತ್ತಾಗಬೇಕಾದರೆ ಭೋಕ್ತಾ ಆದ ಚೇತನನಿಗೇ ಕರ್ತೃತ್ವ ವಿರಬೇಕು.

ಈ ಎಲ್ಲಾ ಅಭಿಪ್ರಾಯಗಳನ್ನು ಆದರಿಸಿಯೇ ಈ ಸೂತ್ರದಲ್ಲಿ ಸಾಂಖ್ಯರ ಮತವನ್ನೊಪ್ಪಿದರೆ ಶಾಸ್ತ್ರವಶ್ಯತೆಯೂ ಭೋಕ್ತೃತ್ವವೂ ಇಲ್ಲವಾಗುತ್ತದೆ ಎಂದು ನಿರೂಪಿಸಲಾಗಿದೆ.

## ಸೂ. 33 ಸಾಂಸಾರಿಕ ಪ್ರವೃತ್ತಿಗಳಿಲ್ ಕರ್ತೃತ್ವಮ್ ಸ್ವರೂಪ ಪ್ರಯುಕ್ತಮನ್ರು.

ಕರ್ತೃತ್ವವೆಲ್ಲವೂ ಆತ್ಮನಿಗೆ ಸ್ವರೂಪಪ್ರಯುಕ್ತವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ.

ಸಾಂಸಾರಿಕವಾದ ಪ್ರವೃತ್ತಿಗಳಲ್ಲಿ ಕರ್ತೃತ್ವವು ಸ್ವರೂಪಪ್ರಯುಕ್ತವಲ್ಲ. ಸಾಂಸಾರಿಕಪ್ರವೃತ್ತಿಗಳೆಂದರೆ-ವಸ್ತ್ರ ಅನ್ನ, ಪಾನಾದಿ ಭೋಗಗಳನ್ನುದ್ದೇಶಿಸಿ ಮಾಡುವ ಸ್ವವ್ಯಾಪಾರಗಳು. ಇದರಲ್ಲಿ ಕರ್ತೃತ್ವವು ಔಪಾಧಿಕವಾದ್ದರಿಂದ (ಒಂದು ನಿಮಿತ್ತದಿಂದ ಏರ್ಪಟ್ಟದ್ದು) ಸ್ವರೂಪಪ್ರಯುಕ್ತವಲ್ಲ.

## ಸೂ. 34 ಗುಣ ಸಂಸರ್ಗಕೃತಮ್.

ಆದರೂ ಅದು ಇವನಿಗೆ ಹೇಗೆ ಬಂದಿತು ಎಂದರೆ ಗುಣಗಳಿಂದ. ಗುಣಗಳೆಂದರೆ-ಸತ್ವ, ರಜಸ್ಸು, ತಮಸ್ಸುಗಳು. ಇವುಗಳ ಸಂಗದಿಂದ ಏರ್ಪಟ್ಟಿದ್ದು.

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ।**
**ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ।** [1] ಎಂಬಂತೆ.

**'ಕರ್ತಾಶಾಸ್ತ್ರಾರ್ಥವತ್ತ್ವಾತ್'** ಎಂಬ ಸೂತ್ರದಲ್ಲಿ ಪೂರ್ವಪಕ್ಷ ಸಿದ್ಧಾಂತರೂಪೇಣ ಶ್ರೀಭಾಷ್ಯಕಾರರು (ಭಗವದ್ರಾಮಾನುಜಾಚಾರ್ಯರು) ಇದನ್ನು ವಿವರಿಸಿದ್ದಾರೆ.

## ಸೂ. 35 ಕರ್ತೃತ್ವಂ ತಾನ್ ಈಶ್ವರಾಧೀನಮ್.

ಹಿಂದಿನ ಸೂತ್ರಗಳಲ್ಲಿ ಸಾಂಖ್ಯ ಪಕ್ಷವನ್ನು ನಿರಾಕರಿಸಿ ಆತ್ಮನಿಗೇ ಕರ್ತೃತ್ವವನ್ನು ಸಾಧಿಸಲಾಯಿತು.

ಈ ಕರ್ತೃತ್ವವು ಸ್ವಾಯತ್ತವಾ? ಪರಾಯತ್ತವಾ ಎಂದು ಈ ಸೂತ್ರದಲ್ಲಿ ವಿಮರ್ಶಿಸಿ, ಈ ಆತ್ಮಾವಿನ ಕರ್ತೃತ್ವ ಸ್ವಾಧೀನವಲ್ಲ ಈಶ್ವರಾಧೀನ ಎಂದು ನಿರೂಪಿಸುತ್ತಾರೆ.

**'ಪರಾತ್ತುತಚ್ಛ್ರುತೇಃ'** [1] ಎಂಬ ವೇದಾಂತ ಸೂತ್ರವು 'ಆತ್ಮನ ಕರ್ತೃತ್ವ ಪರಾಯತ್ತ'ಎಂದು ನಿರ್ಣಯ ಮಾಡುತ್ತದೆ. ಶಾಸ್ತ್ರಾರ್ಥವತ್ತ್ವಕ್ಕಾಗಿ ಕರ್ತೃತ್ವವನ್ನು ಆತ್ಮಧರ್ಮ ಎಂದು ತಿಳಿಯಬೇಕು. ಆ ಕರ್ತಾವಿಗೆ ಧರ್ಮವಾದ ಜ್ಞಾನ , ಇಚ್ಛಾ, ಪ್ರಯತ್ನಗಳು, ಭಗವದಧೀನವಾಗಿರುವುರಿಂದಲೂ, ಆ ಜ್ಞಾನಾದಿಗಳು ಭಗವದನುಮತಿಯಿಲ್ಲದೆ ಕ್ರಿಯಾಹೇತು ವಾಗುವುದಿಲ್ಲವಾದ್ದರಿಂದಲೂ, ಆತ್ಮನ ಕರ್ತೃತ್ವವನ್ನು ಈಶ್ವರಾಧೀನ ಎನ್ನಲಾಗಿದೆ.

'ಆತ್ಮನ ಬುದ್ಧಿಮೂಲವಾದ ಪ್ರಯತ್ನವನ್ನು ಅಪೇಕ್ಷಿಸಿ ಈಶ್ವರನು ಅನುಮತಿ ಪ್ರದಾನ ಮಾಡುವುದರಿಂದ ಆ ಕ್ರಿಯಾ ನಿಬಂಧನವಾದ ಪುಣ್ಯ ಪಾಪಗಳೂ ಚೇತನನಿಗೇ ಏರ್ಪಡುತ್ತದೆ' ಎಂದು ಆಚ್ಚಾನ್‌ಪಿಳ್ಳೈಯವರು ವಿವರಿಸಿರುತ್ತಾರೆ.

ಹೀಗೆ ಕರ್ತೃತ್ವವು ಪರಮಾತ್ಮನ ಅಧೀನವಾದರೂ ವಿಧಿ ನಿಷೇಧವಾಕ್ಯಗಳಿಗೆ ವೈಯರ್ಥವು(ವಿರೋಧವು) ಏರ್ಪಡುವುದಿಲ್ಲ. '**ಕೃತಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ**'[2] ಎಂಬುದಾಗಿ ವಿರೋಧವು ಪರಿಹರಿಸಲ್ಪಡುತ್ತದೆ. ಅಂದರೆ ಶಾಸ್ತ್ರಗಳಲ್ಲಿ ಚೇತನನನ್ನು ಕುರಿತ ವಿಧಿ (ಇದನ್ನು ಮಾಡಬೇಕು) ನಿಷೇಧ (ಇದನ್ನು ಮಾಡಲೇಬಾರದು) ವಾಕ್ಯಗಳಿವೆ. ಇವುಗಳಿಗೆ ವಿರೋಧವು ಬಾರದಿರುವುದಕ್ಕಾಗಿ ಈ ಚೇತನನ ಪ್ರಥಮ ಪ್ರಯತ್ನವನ್ನು ಅಪೇಕ್ಷಿಸಿ ಈಶ್ವರನು ಪ್ರವರ್ತಿಸುತ್ತಾನೆ. ಹೇಗೆಂದರೆ ಎಲ್ಲಾ ಚೇತನರಿಗೂ ಜ್ಞಾತೃತ್ವವು ಸ್ವಭಾವವಾದ್ದರಿಂದ ಎಲ್ಲರಿಗೂ ಸಾಮಾನ್ಯವಾಗಿ ಪ್ರವೃತ್ತಿ ನಿವೃತ್ತಿಗಳಿಗೆ ಯೋಗ್ಯತೆ ಇರುತ್ತದೆ. ಹೀಗಿರುವ ಸ್ವರೂಪವನ್ನು ನಿರ್ವಹಿಸಲು ಈಶ್ವರನು ಅಂತರಾತ್ಮನಾಗಿದ್ದಾನೆ. ಅವನಿಂದ ಏರ್ಪಟ್ಟ ಸ್ವರೂಪ ಶಕ್ತಿಯನ್ನುಳ್ಳ ಚೇತನನು ಆಯಾಯ ಪದಾರ್ಥಗಳಲ್ಲಿ ಜ್ಞಾನ, ಚಿಕೀರ್ಷಾ (ಆಸೆ) ಪ್ರಯತ್ನಗಳನ್ನುಳ್ಳವನಾಗುತ್ತಾನೆ. ಅಲ್ಲಿ ಮಧ್ಯಸ್ಥನಾದ್ದರಿಂದ, ಉದಾಸೀನನಂತಿರುವ ಪರಮಾತ್ಮ ಆ ಚೇತನನ ಪೂರ್ವವಾಸನೆಗೆ ಅನುರೂಪವಾದ ವಿಧಿ. ನಿಷೇಧ ಪ್ರವೃತ್ತಿಗಳಲ್ಲಿ ಅನುಮತಿಯನ್ನೂ, ಅನಾದಾರವನ್ನೂ ತೋರಿ, ವಿಹಿತ ವಿಷಯಗಳಲ್ಲಿ ಅನುಗ್ರಹವನ್ನೂ ನಿಷಿದ್ಧ ವಿಷಯಗಳಲ್ಲಿ ನಿಗ್ರಹನ್ನೂ ಮಾಡುತ್ತಾನೆ. ಅನುಗ್ರಹರೂಪವಾದ ಪುಣ್ಯಕ್ಕೆ ಫಲವಾದ ಸುಖವನ್ನೂ, ನಿಗ್ರಹರೂಪವಾದ ಪಾಪಕ್ಕೆ ಫಲವಾದ ದುಃಖವನ್ನೂ ಆಯಾ ಚೇತನರಿಗೆ ನೀಡುತ್ತಾನೆ.

ಇದನ್ನೇ ಅಭಿಯುಕ್ತರು ಹೀಗೆ ವಿವರಿಸುತ್ತಾರೆ '**ಆದಾವೀಶ್ವರದತ್ತಯೈವ ಪುರುಷಸ್ಸ್ವಾತಂತ್ರ್ಯ ಶಕ್ತ್ಯಾ ಸ್ವಯಂತತ್ತದ್‌ಜ್ಞಾನಚಿಕೀರ್ಷಣಪ್ರಯತಾನ್ಯುತ್ಪಾದಯನ್ವರ್ತತೇ। ತತ್ರೋಪೇಕ್ಷ್ಯ ತತೋನುಮತ್ಯ ವಿದಧತ್ತನ್ನಿಗ್ರಹಾನುಗ್ರಹೌತ ತತ್ಕರ್ಮಫಲಂ ಪ್ರಯಚ್ಛತಿ ತತಸ್ಸರ್ವಸ್ಯ ಪುಂಸೋಹರಿಃ।**'[3] ಎಂದು ಸರ್ವನಿಯಂತಾವಾಗಿ, ಸರ್ವಾಂತರಾತ್ಮನಾದ ಸರ್ವೇಶ್ವರನು ತನಗೆ ನೀಡಿದ ಜ್ಞಾತೃತ್ವರೂಪವಾದ ಸ್ವಾತಂತ್ರ್ಯಶಕ್ತಿಯಿಂದ, ಈ ಪುರುಷನೇ ಆಯಾಯ ವಿಷಯಗಳಲ್ಲಿ ಜ್ಞಾನ, ಚಿಕೀರ್ಷಾ ಪ್ರಯತ್ನಗಳನ್ನು ಉಳ್ಳವನಾಗುತ್ತಾನೆ. ಅಲ್ಲಿ ಅಶಾಸ್ತ್ರೀಯಗಳನ್ನು ಉಪೇಕ್ಷಿಸಿ, ಶಾಸ್ತ್ರೀಯವಾದವುಗಳನ್ನು ಅನುಮತಿಸಿ. ಆ ವಿಷಯಗಳಲ್ಲಿ ನಿಗ್ರಹ ಅನುಗ್ರಹಗಳನ್ನು ಸರ್ವೇಶ್ವರನು ಮಾಡುತ್ತಾನೆ. ಮತ್ತು ಅವುಗಳಿಗೆ ಅನುಗುಣವಾಗಿ ಕರ್ಮಫಲವನ್ನು ಸರ್ವೇಶ್ವರನೇ ನೀಡುತ್ತಾನೆ.

ಇದೇ ಅರ್ಥವನ್ನೇ '**ದೀಪಪ್ರಕಾಶದಲ್ಲಿ**' ಜೀಯರ್‌ರವರೂ 'ಹೀಗೆ ಸರ್ವಪ್ರವೃತ್ತಿಗಳಲ್ಲೂ ಚೇತನನ ಪ್ರಥಮ ಪ್ರಯತ್ನವನ್ನು ಅಪೇಕ್ಷಿಸಿ, ಪರಮಾತ್ಮನು ಪ್ರವರ್ತಿಸುತ್ತಾನೆ' ಎಂದು ಹೇಳಿದ್ದಾರೆ.

ಈ ಮೇಲಿನ ಎಲ್ಲ ಅರ್ಥಗಳೂ ಈ ಸೂತ್ರ ವಿವರಣೆಯಲ್ಲಿ ಅನುಸಂಧೇಯವಾಗಿದೆ. '**ಏಷಹ್ಯೇವ ಸಾಧುಕರ್ಮಕಾರಯತಿ ತಂ ಯಮಧೋ ನಿನೀಷತಿ**'[4] ಎಂದು ಉನ್ನಿನೀಷೆಯಿಂದಲೂ (ಮೇಲೆಕ್ಕೊಯ್ಯುವುದು) ಅಧೋನಿನೀಷೆ (ಕೆಳಗೆ ಒಯ್ಯುವುದು) ಯಿಂದಲೂ ಸರ್ವೇಶ್ವರನೇ ಸಾಧು ಮತ್ತು ಅಸಾಧುಕರ್ಮಗಳನ್ನು ಮಾಡಿಸುತ್ತಾನೆ ಎಂಬುದನ್ನು ಹೀಗೆ ಉತ್ತರಿಸಲಾಗಿದೆ.

ಮೇಲೆ ಹೇಳಲ್ಪಟ್ಟ ಉನ್ನಿನೀಷೆ ಮತ್ತು ಅಧೋನಿನೀಷೆಗಳು ಸರ್ವಸಾಧಾರಣವಲ್ಲ. ಯಾವಾನಾದರೂ ಒಬ್ಬ ಭಗವದ್ವಿಷಯದಲ್ಲಿ ಅತಿಮಾತ್ರವಾದ ಆನುಕೂಲ್ಯಉಳ್ಳವನಾಗಿ ಪ್ರವರ್ತಿಸುತ್ತಾನೆ. ಆಗ ಅಂತಹವನನ್ನು ಅನುಗ್ರಹಿಸಿ ಭಗವಾನ್ ತಾನೇ ತನ್ನನ್ನು ಹೊಂದುವ ಉಪಾಯಗಳಿಂದ ಅತಿಮಂಗಳಕರವಾದ ಕರ್ಮಗಳಲ್ಲಿ ಅವನಿಗೆ ರುಚಿಯೇರ್ಪಡಿಸುತ್ತಾನೆ.

ಯಾವನಾದರೂ ಒಬ್ಬ ಪ್ರಾತಿಕೂಲ್ಯದಲ್ಲಿ ಪ್ರವರ್ತಿಸುತ್ತಾನೆ. ಅಂತಹವನು ತನ್ನನ್ನು ಹೊಂದಲು ವಿರೋಧಿಗಳಾದ, ಅಧೋಗತಿಗೆ ಸಾಧನವಾದ ಕರ್ಮಗಳಲ್ಲಿ ಸಂಗಹೊಂದುವಂತೆ ಮಾಡುತ್ತಾನೆ. ಎಂಬುದು ಮೇಲಿನ ಶ್ರುತಿವಾಕ್ಯಗಳ ಅರ್ಥವಾಗಿದೆ.

ಇದನ್ನೇ ಸರ್ವೇಶ್ವರನೂ

ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ।

ಇತಿ ಮತ್ವಾ ಭಜಂತೇ ಮಾಂ ಬುಧಬಾವ ಸಮನ್ವಿತಾಃ। [5] ಎಂದು ಪ್ರಾರಂಭಿಸಿ,

ತೇಷಾಂ ಸತತ ಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್।

ದದಾಮಿ ಬುದ್ಧಿಯೋಗಂ ತಂ ಯೇನಮಾಮುಪಾಯಾಂತಿ ತೇ। [6]

ತೇಷಾ ಮೇವಾನುಕಂಪಾರ್ಥಂ ಅಹಮಜ್ಞಾನಜಂ ತಮಃ।

ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ।' [7] ಎಂದೂ

ಅಸತ್ಯ ಮಪ್ರತಿಷ್ಠಂ ತೇ ಜಗದಾಹುರನೀಶ್ವರಂ; [8]ಎಂದೂ;

ಮಾಮಾತ್ಮ ಪರದೇಹೇಷು ಪ್ರದ್ವಿಷಂತೋಽಭ್ಯಸೂಯಾಕಾಃ[9] ಎನ್ನುವವರೆಗೆ ಚೇತನರ ಪ್ರಾತಿಕೂಲ್ಯಾತಿಶಯತೆಯನ್ನು ಹೇಳಿ

'ತಾನಹಂ ದ್ವಿಷತಃಕ್ರೂರಾನ್ ಸಂಸಾರೇಷು ನರಾಧಮಾನ್।

ಕ್ಷಿಪಾಮ್ಯಜಸ್ರಂ ಆಸುರಿಷ್ವೇವ ಯೋನಿಷು' [10] ಎಂದು ಹೇಳಿದ್ದಾನೆ.

ಆದ್ದರಿಂದ ಅನುಮತಿ ನೀಡುವುದೇ ಸರ್ವಸಾಧಾರಣ. ಪ್ರಯೋಜಕತ್ವವು ವಿಶೇಷ ವಿಷಯವೆಂದು ತಿಳಿದುಕೊಳ್ಳಬೇಕು. 'ಕೃತ ಪ್ರಯತ್ನಾಪೇಕ್ಷಸ್ತು' ಎಂಬ ಸೂತ್ರದಲ್ಲಿ ಇದೆಲ್ಲವನ್ನೂ ಶ್ರೀ ಭಾಷ್ಯಕಾರರು ವಿವರಿಸಿದ್ದಾರೆ. ಇವೆಲ್ಲವನ್ನೂ ಪರಾಮರ್ಶಿಸಿಯೇ ಇಲ್ಲಿ 'ಕರ್ತೃತ್ವಂ ತಾನ್ ಈಶ್ವರಾಧೀನಮ್' ಎನ್ನಲಾಗಿದೆ.

ಆದ್ದರಿಂದ 'ಜ್ಞಾನಾಶ್ರಯಮಾಕೈಯಾವತು' -'ಜ್ಞಾನಕ್ಕೆ ಆಶ್ರಯ ಸ್ಥಾನವಾಗಿರುವಿಕೆ' ಎಂದು ಪ್ರಾರಂಭದಲ್ಲಿ ಆತ್ಮಾವಿನ ಜ್ಞಾತೃತ್ವವನ್ನು ಹೇಳಿ, ಜ್ಞಾನ ಮಾತ್ರ ಎಂಬುದನ್ನು ನಿರಾಕರಿಸಿ ನಂತರ ಕರ್ತೃತ್ವ ಭೋಕ್ತೃತ್ವಗಳನ್ನು ಹೇಳಬೇಕಾದ್ದರಿಂದ ಅವೆರಡೂ ಜ್ಞಾತೃತ್ವ ಬಲದಿಂದ ತಾನಾಗಿಯೇ ಏರ್ಪಡುತ್ತದೆ. ಎಂಬುದನ್ನು ನಿರೂಪಿಸಿದರು. ಗುಣಗಳಿಗೇ ಕರ್ತೃತ್ವವೇ ವಿನಃ ಆತ್ಮನಿಗಲ್ಲ ಎಂಬ ಸಾಂಖ್ಯ ವಾದವನ್ನು ನಿರಸನ ಮಾಡಿ, ಆತ್ಮನ ಕರ್ತೃತ್ವವನ್ನು ಸ್ಥಾಪಿಸಿ, ಆ ಕರ್ತೃತ್ವವು ಸ್ವರೂಪ ಪ್ರಯುಕ್ತವಲ್ಲವೆಂಬುದನ್ನು ವಿವರಿಸಿ, ಅದು ಆತ್ಮನಿಗೆ ಉಂಟಾದ ಪ್ರಕಾರವನ್ನು ಹೇಳಲಾಯಿತು. ಹೀಗೆ ಆತ್ಮನಿಗುಂಟಾದ ಕರ್ತೃತ್ವವು ಸರ್ವಾವಸ್ಥೆಗಳಲ್ಲೂ ಈಶ್ವರಾಧೀನನವೆಂದು ನಿಗಮಿಸಲಾಯಿತು. ಇವೆಲ್ಲವೂ ಆತ್ಮನ ಜ್ಞಾನಾಶ್ರಯತ್ವ ಕಥನದಿಂದ ವಿವರಿಸಲ್ಪಟ್ಟ ವಿಷಯಗಳಾಗಿವೆ.

## ಸೂ. 36 ಜ್ಞಾನಾಶ್ರಯ ಮಾಕಿಲ್ ಶಾಸ್ತ್ರಙ್ಗಳಿಲೇ ಇವನೈ ಜ್ಞಾನಮೆನ್ರು ಶೊಲ್ಲುವಾನೆನ್ನಿಲ್.

ಆತ್ಮಾ ಜ್ಞಾನಕ್ಕೆ ಆಶ್ರಯನಾದರೆ 'ಯೋವಿಜ್ಞಾನೇ ತಿಷ್ಠನ್';[1] 'ವಿಜ್ಞಾನಮಯಃ';'ವಿಜ್ಞಾನಂ ಯಜ್ಞಂ ತನುತೇ'[2] ಎಂದೂ 'ಜ್ಞಾನಸ್ಯ ರೂಪಂ ಅತ್ಯಂತ ನಿರ್ಮಲಂ ಪರಮಾರ್ಥತಃ';[3] 'ಜ್ಞಾನಸ್ವರೂಪಮಖಿಲಂ ಜಗದೇತದಬುದ್ಧಯಃ';[4] 'ವಿಜ್ಞಾನಂ ಪರಮಾರ್ಥೋಽಹಿ ದ್ವೈತಿನೋಽತಥ್ಯದರ್ಶಿನಃ' [5] ಎಂದು ಶಾಸ್ತ್ರಗಳಲ್ಲಿ ಇವನನ್ನು ಜ್ಞಾನವೆಂದು ಹೇಳಲು ಕಾರಣವೇನು ಎಂಬುದಾಗಿ ಈ ಸೂತ್ರದಲ್ಲಿ ಜಿಜ್ಞಾಸು ಪ್ರಶ್ನೆಯನ್ನು ಅನುವದಿಸಲಾಗಿದೆ.

## ಸೂ. 37 ಜ್ಞಾನತ್ತೈ ಒಳಿಯವುಂ ತನ್ನೈ ಅರಿಕ್ಕೈಯಾಲುಂ, ಜ್ಞಾನಂ ಸಾರಭೂತ ಗುಣಮಾಯ್ ನಿರೂಪಕಧರ್ಮಮಾಕ್ಕೈಯಾಲುಮ್ ಶೊಲ್ಲಿತ್ತು.

ಶಾಸ್ತ್ರಗಳು ಆತ್ಮನನ್ನು ಜ್ಞಾನವೆನ್ನಲು ಮೂಲವಾವುದು ಎಂಬುದನ್ನು ಈ ಸೂತ್ರದಲ್ಲಿ ತಿಳಿ[illegible]

ಜ್ಞಾನವು ತನ್ನ ಆಶ್ರಯಕ್ಕೆ ಸ್ವಯಂಪ್ರಕಾಶಕವಾಗಿರುವಂತೆ, ಜ್ಞಾನವನ್ನೇ ಅಪೇಕ್ಷಿಸದೆ ತನಗೆ ತಾನೇ ಪ್ರಕಾಶಿಸುವುದರಿಂದಲೂ, ಜ್ಞಾನವು ಇವನಿಗೆ ಸಾರಭೂತವಾದ ಗುಣವಾಗಿರುವುದರಿಂದಲೂ ಸ್ವರೂಪಾನುಬಂಧಿತ್ವೇನ ಸ್ವರೂಪ ನಿರೂಪಕ ಧರ್ಮವಾದ್ದರಿಂದಲೂ ಶಾಸ್ತ್ರಗಳು ಆತ್ಮನನ್ನು ಜ್ಞಾನವೆಂದು ಹೇಳುತ್ತವೆ. 'ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್' ; 'ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್'[1] ಎಂಬ ಎರಡು ವೇದಾಂತ ಸೂತ್ರಗಳಿಂದ ಇದು ಹೇಳಲ್ಪಟ್ಟಿದೆ.

'ಜ್ಞಾನಮಾತ್ರವ್ಯಪದೇಶಸ್ತು, ಜ್ಞಾನಸ್ಯ ಪ್ರಧಾನ ಗುಣತ್ವಾತ್'; 'ಸ್ವರೂಪಾನು ಬಂಧಿತ್ವೇನ ಸ್ವರೂಪ ನಿರೂಪಕ ಗುಣತ್ವಾತ್'; 'ಆತ್ಮ ಸ್ವರೂಪಸ್ಯ ಜ್ಞಾನವತ್ ಸ್ವಪ್ರಕಾಶತ್ವಾದ್ಯೋಪಪದ್ಯತೇ'[2] ಎಂದು 'ವೇದಾಂತ ದೀಪ' ಗ್ರಂಥದಲ್ಲಿ ಶ್ರೀ ಭಾಷ್ಯಕಾರರು ಅನುಗ್ರಹಿಸಿದ್ದಾರೆ.

## ಸೂ. 38 ನಿಯಾಮ್ಯಮಾಕೈಯಾವದು: ಈಶ್ವರಬುದ್ಧ್ಯಧೀನಮಾಕ ಎಲ್ಲಾ ವ್ಯಾಪರಂಗಳುಮುಣ್ಡಾಮ್ಬಡಿ ಇರುಕ್ಕೈ.

**ಯ ಆತ್ಮನಿ ತಿಷ್ಠನ್ನಾತ್ಮನೋ ಅನ್ತರೋಯಮಾತ್ಮಾ ನ ವೇದ ।**
**ಯಸ್ಯಾತ್ಮಾ ಶರೀರಂ ಯ ಆತ್ಮಾನಮನ್ತರೋ ಯಮಯತಿ ಸತ ಆತ್ಮಾನ್ತರ್ಯಾಮ್ಯಮೃತಃ।**[1]

ಇತ್ಯಾದಿಗಳಲ್ಲಿ ಹೇಳುವಂತೆ ಅನ್ತರಾತ್ಮತಯಾ ಇದ್ದು ನಿಯಮಿಸುವಿಕೆ ಈಶ್ವರನಿಗೆ ಸಾರ್ವಕಾಲಿಕವಾಗಿದೆ. ಶರೀರದ ಸಕಲ ಪ್ರವೃತ್ತಿಗಳೂ ಶರೀರಿಯ ಬುದ್ಧಿಗೆ ಅಧೀನವಾಗಿರುವಂತೆ, ಶರೀರಭೂತವಾದ ಈ ಆತ್ಮವಸ್ತುವಿನ ಸಕಲ ವ್ಯಾಪಾರಗಳೂ ಶರೀರಿಯಾದ ಪರಮಾತ್ಮನ ಬುದ್ಧಿಗೆ ಅಧೀನವಾಗಿದೆ.

ಹೀಗೆ ಆತ್ಮಾ ಪರಮಾತ್ಮನ ಶರೀರವಾಗಿ, ಸಕಲ ಪ್ರವೃತ್ತಿಗಳೂ ಈಶ್ವರ ಬುದ್ಧ್ಯಧೀನವಾಗಿದ್ದರೂ, ಅಚೇತನವಾದ ಶರೀರಕ್ಕಿಂತ ಆತ್ಮವು ಭಿನ್ನವಾಗಿದೆ. ಅಚೇತನವಾದ ಶರೀರ ತಾನಾಗಿ ಒಂದನ್ನೂ ಪ್ರವೃತ್ತಿ ಮಾಡಲಾರದು. ಆದರೆ ಆತ್ಮಾ ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವಗಳನ್ನು ಸ್ವಾಭಾವಿಕವಾಗಿ ಉಳ್ಳವನಾದ್ದರಿಂದ ಜ್ಞಾನ, ಚಿಕೀರ್ಷಾ ಪ್ರಯತ್ನಪೂರ್ವಕ ಪ್ರವೃತ್ತಿಯುಳ್ಳವನಾಗಿದ್ದಾನೆ. ಸಕಲ ಪ್ರವೃತ್ತಿಗಳಲ್ಲೂ ಆತ್ಮನ ಪ್ರಥಮ ಪ್ರಯತ್ನವನ್ನು ಅಪೇಕ್ಷಿಸಿಯೇ ಈಶ್ವರನು ಅನುಮತಿ ಪ್ರದಾನ ಮಾಡುವುದರಿಂದಲೂ, ವಿಧಿ ನಿಷೇಧ ಶಾಸ್ತ್ರಗಳಿಗೆ ವಿರೋಧ ಬರುವುದಿಲ್ಲ. ಆದ್ದರಿಂದ ಇವನ ಪ್ರವೃತ್ತಿ ಮೂಲವಾಗಿ ಈಶ್ವರನು ಮಾಡುವ ನಿಗ್ರಹಾನುಗ್ರಹಗಳಿಗೂ, ತದನುಗುಣವಾದ ಫಲಪ್ರದಾನಕ್ಕೂ ವಿರೋಧವಿಲ್ಲವೆಂಬುದು ಹೇಳಲ್ಪಟ್ಟಿತು.

## ಸೂ. 39 ಧಾರ್ಯಮಾಕೈ ಯಾವದು- ಅವನುಡೈಯ ಸ್ವರೂಪ ಸಂಕಲ್ಪಙ್ಗಳೈ ಒಳಿನ್ದಪೋತು ತನ್ ಸತ್ತೈಯಿಲ್ಲೈಯಾಮ್ಬಡಿಯಿರುಕ್ಕೈ.

'ಏಷಸೇತುರ್ವಿಧಾರಣಃ';[1] 'ಏತತ್ ಸರ್ವಂ ಪ್ರಜ್ಞಾನೇ ಪ್ರತಿಷ್ಠಿತಂ' ;[2] 'ಏವಮೇವ ಚಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವ ಏವಾತ್ಮಾನಸ್ಸಮರ್ಪಿತಾಃ';[3] 'ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾ ಚಂದ್ರಮಸೌ ವಿಧೃತೌ ತಿಷ್ಠತಃ'[4] ಇತ್ಯಾದಿಗಳಲ್ಲಿ ಹೇಳಲ್ಪಡುವಂತೆ ಈಶ್ವರನು ಸಕಲ ಚೇತನಾಚೇತನಗಳಿಗೂ ಧಾರಕನಾಗಿದ್ದಾನೆ. ಈ 'ಆತ್ಮವಸ್ತು ಧಾರ್ಯ' ಎಂದರೆ-ಆತ್ಮನಿಗೆ ನಿಯಮೇನ ಧಾರಕವಾಗಿ, ಆತ್ಮನಿಗೆ ಸತ್ತಾಹೇತುವಾಗಿರುವ ಪರಮಾತ್ಮನ ದಿವ್ಯಾತ್ಮಸ್ವರೂಪವನ್ನು, ಈ ಸ್ವರೂಪಾಶ್ರಿತತ್ವಕ್ಕೂ, ಸತ್ತಾನುವೃತ್ತಿರೂಪೈಯಾದ ಸ್ಥಿತಿಗೂ ಹೇತುವಾಗಿರುವ ಪರಮಾತ್ಮನ ನಿತ್ಯ ಇಚ್ಛಾಕಾರ್ಯ ಸಂಕಲ್ಪವು ಇಲ್ಲವಾದಾಗ ಆತ್ಮನಿಗೆ ಸತ್ತಾಹಾನಿ (ಸ್ವರೂಪವೇ ನಾಶವಾಗುವಿಕೆ ) ಏರ್ಪಡುವಂತೆ ಇರುವಿಕೆ.

ಹೀಗೆ ಧಾರ್ಯವಸ್ತುಗಳನ್ನು ಸ್ವರೂಪ ಸಂಕಲ್ಪಗಳೆರಡರಿಂದಲೂ ಪರಮಾತ್ಮ ಧರಿಸುತ್ತಾನೆ ಎಂಬುದು ಅಭಿಯುಕ್ತರಿಂದ ಕೆಳಕಂಡಂತೆ ವಿಸ್ತರೇಣ ಪ್ರತಿಪಾದಿಸಲ್ಪಟ್ಟಿದೆ.

ಈಶ್ವರನು ತನ್ನ ಸ್ವರೂಪನಿರೂಪಕಧರ್ಮಗಳಂತೆಯೂ, ನಿರೂಪಿತಸ್ವರೂಪ ವಿಶೇಷಣಗಳಾದ ಗುಣಗಳಂತೆಯೂ, ಸ್ವವ್ಯತಿರಿಕ್ತ ಸಮಸ್ತ ದ್ರವ್ಯಗಳಿಗೂ ಅವ್ಯವಹಿತವಾಗಿ ಸ್ವರೂಪೇಣ ಆಧಾರವಾಗಿರುತ್ತಾನೆ. ಆಯಾ ದ್ರವ್ಯಗಳನ್ನು ಆಶ್ರಯಿಸಿರುವ ಗುಣಾದಿಗಳಿಗೆ ಆಯಾ ದ್ರವ್ಯದ್ವಾರಾ ಆಧಾರವಾಗಿರುತ್ತಾನೆ. ಜೀವರುಗಳಿಂದ ಧರಿಸಲ್ಪಡುವ ಶರೀರಗಳಿಗೆ ಜೀವದ್ವಾರಾ ಆಧಾರವಾಗಿರುತ್ತಾನೆಂದು ಕೆಲವರು ಹೇಳುತ್ತಾರೆ. ಜೀವನನ್ನು ದ್ವಾರವಾಗಿ ಕೊಂಡು ಸ್ವರೂಪದಿಂದಲೂ ಆಧಾರವಾಗಿದ್ದಾನೆಂದು ಕೆಲವು ಆಚಾರ್ಯರು ಹೇಳುತ್ತಾರೆ. ಹೀಗೆ ಸರ್ವವೂ ಆಶ್ರಯದೊಂದಿಗೆ ಅಪೃಥಕ್‌ಸಿದ್ಧ (ಬೇರ್ಪಡಿಸಲಾಗದ) ವಿಶೇಷಣವಾದ್ದರಿಂದ ಇವುಗಳ ಸತ್ತಾದಿಗಳು ಆಶ್ರಯಸತ್ತಾಧೀನಗಳಾಗಿವೆ. ಸರ್ವವಸ್ತುಗಳ ಸತ್ತೆಯೂ ಸಂಕಲ್ಪಾಧೀನವಾಗಿದೆಯೆಂದರೆ-ಅನಿತ್ಯಗಳು ಅನಿತ್ಯ ಇಚ್ಛೆಯಿಂದ (ಅನಿತ್ಯವಾಗಿರಬೇಕೆಂಬ ಭಗವಂತನ ಸಂಕಲ್ಪ) ಉತ್ಪನ್ನಗಳಾಗಿಯೂ, ನಿತ್ಯಗಳು ನಿತ್ಯೇಚ್ಛಾಸಿದ್ಧಗಳಾಗಿಯೂ ಇರುವಿಕೆ. ಈ ಅರ್ಥವನ್ನು **'ಇಚ್ಛಾತ ಏವ ತವ ವಿಶ್ವ ಪದಾರ್ಥಸತ್ತಾ'** [5] ಎಂಬ ಶ್ಲೋಕದಿಂದ ಅಭಿಯುಕ್ತರು ವಿವೇಚಿಸಿದ್ದಾರೆ. ಇದರಿಂದ ಸರ್ವಪದಾರ್ಥಗಳ ಸತ್ತಾನುರೂಪೆಯಾದ ಸ್ಥಿತಿಯೂ ಈಶ್ವರೇಚ್ಛಾಧೀನವಾದ್ದರಿಂದ, ಸರ್ವವೂ ಈಶ್ವರ ಸಂಕಲ್ಪಾಶ್ರಿತವೆಂದು ಹೇಳಲಾಗುತ್ತದೆ. ಗುರು ದ್ರವ್ಯಗಳು ಈಶ್ವರ ಸಂಕಲ್ಪದಿಂದ ಧೃತಗಳೆಂದು ಶಾಸ್ತ್ರಗಳು ಹೇಳುತ್ತವೆ.

**ದ್ಯೌಸ್ಸಚಂದಾರ್ಕನಕ್ಷತ್ರಾ ಖಂ ದಿಶೋ ಭೂರ್ಮಹೋದಧಿಃ|** [6]
**ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ|**

ಎಂಬಂತೆ ಒಂದೊಂದು ದೇಶವಿಶೇಷಗಳಲ್ಲೂ ಬೀಳದಂತೆ ನಿಲ್ಲಿಸುವುದನ್ನು ಕುರಿತಾಗಿದೆ. ಹೀಗೆ ಇಚ್ಛಾಧೀನ ಸತ್ತಾ ಸ್ಥಿತಿ ಪ್ರವೃತ್ತಿಗಳಾದ ವಸ್ತುಗಳಿಗೆ ಪರಮಾತ್ಮ ಸ್ವರೂಪವು ಏನು ಮಾಡುತ್ತದೆಯೆಂದರೆ ಪರಮಾತ್ಮ ನ ಇಚ್ಛೆ ಈ ವಸ್ತುಗಳನ್ನು ಪರಮಾತ್ಮನ ಸ್ವರೂಪಾಶ್ರಿತಗಳಾಗಿ ವಿಂಗಡಿಸುತ್ತದೆ. ಹೀಗೆ ಸರ್ವವಸ್ತುವು ಈಶ್ವರ ಸ್ವರೂಪಾಧೀನವಾಗಿ, ಈಶ್ವರೇಚ್ಛಾಧೀನವಾಗಿರುತ್ತದೆ. ಲೋಕದಲ್ಲಿ ಶರೀರವು ಶರೀರಿಯ ಸ್ವರೂಪಾಶ್ರಯವಾಗಿ, ಸಂಕಲ್ಪಾಶ್ರಯವಾಗಿಯೂ ಇರುವುದನ್ನು ಕಾಣುತ್ತೇವೆ. ಇವನಿರುವ ಕಾಲಪರ್ಯಂತ ಇದ್ದು ಇವನು ಬಿಟ್ಟಕೂಡಲೇ ನಾಶವಾಗುವುದರಿಂದ **'ಸ್ವರೂಪಾಶ್ರಿತವು'** ಎನ್ನುವ ಈ ಅರ್ಥವು, ಸಂಕಲ್ಪವಿಲ್ಲದ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಚೆನ್ನಾಗಿ ತಿಳಿಯುತ್ತದೆ. ಜಾಗೃತಾದಿ ದೆಸೆಗಳಲ್ಲಿ ಸಂಕಲ್ಪದಿಂದ ಬೀಳದಂತೆ ಧರಿಸುವುದನ್ನು **'ಸಂಕಲ್ಪಾಶ್ರಿತ'**ವೆನ್ನಲಾಗುತ್ತದೆ.ಎಂದು ರಹಸ್ಯತ್ರಯಸಾರದಲ್ಲಿ ಅಭಿಯುಕ್ತರು ಪ್ರತಿಪಾದಿಸಿದ್ದಾರೆ.

## ಸೂ. 40 ಶೇಷಮಾಕೈಯಾವತು –ಚಂದ ನಕುಸುಮ ತಾಂಬೂಲಾದಿಕಳ್ಳೈ ಪ್ಪೋಲೇ ಅವನುಕ್ಕಿಷ್ಟವಿನಿಯೋಗಾರ್ಹಮಾಯಿರುಕ್ಕೈ.

ಚಂದನಕುಸುಮಾದಿ ಪದಾರ್ಥಗಳು ತನಗೇ ಎಂದು ಇರದೆ, ಪೂಸಿಕೊಳ್ಳುವವರಿಗೂ, ಮುಡಿಯುವವರಿಗೂ ಮೀಸಲಾಗಿ ಇರುತ್ತವೆ.ಉಪಯೋಗಿಸುವವರಿಗೂ ಉಪಯುಕ್ತವಾಗಿ, ಅವರಿಗೆ ಇಷ್ಟಬಂದವರಿಗೆ ಕೊಡಲೂ ಅನುಕೂಲವಾಗಿರುವಿಕೆಯೇ ಇಷ್ಟವಿನಿಯೋಗಾರ್ಹತ್ವ. ಅದೇ ರೀತಿ ಚೇತನವಾಗಿದ್ದರೂ ಕೂಡ ಸ್ವ ಪ್ರಯೋಜನ ಗಂಧವೂ ಇಲ್ಲದೆ, ತನ್ನ ಸ್ವರೂಪ, ಸ್ವಭಾವ, ವೈಲಕ್ಷಣವೆಲ್ಲದರಿಂದಲೂ ಶೇಷಿಯಾದ ಪರಮಾತ್ಮನಿಗೇ ಅತಿಶಯವುಂಟುಮಾಡುವವನಾಗಿ ಇರುವುದು **'ಶೇಷತ್ವ'**. ಅಷ್ಟೇ ಅಲ್ಲದೆ ವಿನಿಯೋಗದೆಸೆಯಲ್ಲಿ ಪರಮಾತ್ಮನಿಗೆ

ವಿನಿಯೋಗವಾಗಿ, **'ಅಡಿಯಾರ್ಕು ಎನ್ನೈ ಆಳ್‌ಪಡುತ್ತ ವಿಮಲನ್'** ಎಂಬಂತೆ ತಾನಿಚ್ಛಿಸಿದವರ ವಿನಿಯೋಗಕ್ಕೂ ಅವನಿಂದ ನೀಡಲ್ಪಡಲು ಯೋಗ್ಯವಾಗಿರುವಿಕೆಯೇ' ಆತ್ಮನ ಇಷ್ಟ ವಿನಿಯೋಗಾರ್ಹತ್ವ'.

ಚಿತ್ ದ್ರವ್ಯಕ್ಕೆ (ಚೇತನವಾದ ಆತ್ಮಕ್ಕೆ) ಅಚಿತ್ ದ್ರವ್ಯಗಳನ್ನು ಚಂದನ ತಾಂಬೂಲಾದಿಗಳನ್ನು ದೃಷ್ಟಾಂತವಾಗಿ ಇಲ್ಲಿ ಹೇಳಿರುವುದು ಪಾರತಂತ್ರ್ಯಾತಿಶಯತೆಯನ್ನು ಸೂಚಿಸುವುದಕ್ಕಾಗಿ. (ಅಚಿತ್ ತತ್ವಗಳು ಹೇಗೆ ಪರಿಪೂರ್ಣ ಪರತಂತ್ರವಾಗಿ ತನಗಾಗಿ, ತಮ್ಮದು ಎಂಬುದು ಏನೂ ಇಲ್ಲದೆ ಬೇರೆಯವರಿಗಾಗಿಯೇ ಇರುವುದೋ ಅದೇ ರೀತಿ ಚೇತನವಾದರೂ ಅಷ್ಟೇ ಪರತಂತ್ರನಾಗಿರುವಿಕೆ) ಇದುವೇ ಆತ್ಮಸ್ವರೂಪಯಾಥಾತ್ಮ್ಯವಾಗಿದೆ. ಪ್ರಾಪ್ಯ (ಹೊಂದಲೇ ಬೇಕಾದುದು) ನಿಷ್ಕರ್ಷೆಮಾಡುವ ದೆಸೆಯಲ್ಲಿ 'ತನಕ್ಕೇಯಾಕ ಎನ್ನೈಕ್ಕೊಳ್ಳುಮೀದೇ' ಎಂದೇ ಆಳ್ವಾರ್ ಅನುಗ್ರಹಿಸಿದ್ದಾರೆ. **'ಪರಗತಾತಿಶಯಾಧಾನೇಚ್ಛಯೋಪಾದೇಯತ್ವೇನ ಯಸ್ಯಸ್ವರೂಪಮ್ ಸಶೇಷಃ, ಪರಶ್ಶೇಷೀ'**[1] ಎಂದು ಶೇಷ ಶೇಷೀ ಲಕ್ಷಣವು ಶ್ರೀಭಾಷ್ಯಕಾರರಿಂದ ಅನುಗ್ರಹಿಸಲ್ಪಟ್ಟಿದೆ. ಇದೇ ಲಕ್ಷಣವಾಕ್ಯವನ್ನನುಸರಿಸಿ **'ಇಚ್ಛಯಾ ಯದುಪಾದೇಯಂ ಯಸ್ಯಾತಿಶಯ ಸಿದ್ಧಯೇ ಉಭಯಾನುಭಯೈಕೈಕ ಜುಷಾ ತೌ ಶೇಷ ಶೇಷಿಣೌ।'** [2] ಎಂದು ಅಭಿಯುಕ್ತರೂ ತಿಳಿಸಿದ್ದಾರೆ.

**ಯ ಥೇಷ್ಟ ವಿನಿಯೋಗಾರ್ಹಂ ಶೇಷಶಬ್ದೇನ ಕಥ್ಯತೇ।**
**ಈಶ್ವರೇಣ ಜಗತ್ಸರ್ವಂ ಯಥೇಷ್ಟಂ ವಿನಿಯುಜ್ಯತೇ।** [3]

ಎಂದು ಹೇಳಲ್ಪಡುವುದರಿಂದ ಶೇಷತ್ವವೆಂದರೆ ಇಷ್ಟ ವಿನಿಯೋಗಾರ್ಹತ್ವವೆಂಬುದು ಶಾಸ್ತ್ರಸಿದ್ಧವಾಗಿದೆ. ಹೀಗೆ ಈಶ್ವರ ವಿಷಯದಲ್ಲಿ ಆತ್ಮಾನಿಗುಂಟಾದ ಶೇಷತ್ವವೇ **'ಯಸ್ಯಾಸ್ಮಿ ನತಮಂತರೇಮಿ'**;[4] **'ಪರವಾನಸ್ಮಿಕಾಕುತ್ಸ್ಥ ತ್ವಯಿವರ್ಷಶತಂ ಸ್ಥಿತೇ'**;[5] **'ದಾಸಭೂತಾ ಸ್ವತಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ'**; **'ನಾನ್ಯಥಾ ಲಕ್ಷಣಂ ತೇಷಾಂ ಬಂಧೇಮೋಕ್ಷೇತಥೈವಚ।'** ;[6] **'ಸ್ವೋಜ್ಜೀವನೇಚ್ಛಾ ಯದಿ ತೇ ಸ್ವಸತ್ತಾಯಾಂ ಸ್ಪೃಹಾಯದಿ।'**; **'ಆತ್ಮದಾಸ್ಯಂ ಹರೇ ಸ್ವಾಮ್ಯಂ ಸ್ವಭಾವಂ ಚ ಸದಾ ಸ್ಮರ।'**[7] ಎಂದು ಶ್ರುತಿ ಸ್ಮೃತ್ಯಾದಿಗಳಲ್ಲಿ ಹೇಳಲ್ಪಟ್ಟಿವೆ.

## ಸೂ. 41 ಇತು ತಾನ್ ಗೃಹಕ್ಷೇತ್ರ ಪುತ್ರ ಕಳತ್ರಾದಿಗಳೈಪ್ಪೋಲೇ ಪೃಥಕ್ ಸಿದ್ಧ್ಯಾದಿಗಳುಕ್ಕು ಯೋಗ್ಯಮಾಮ್ಬಡಿಯಿರುಕ್ಕೈಯನ್ರಿಕ್ಕೇ, ಶರೀರಮ್ಬೋಲೇ ಇವತ್ತುಕ್ಕು ಅಯೋಗ್ಯಮಾಯಿರುಕ್ಕಮ್.

ಒಬ್ಬನಿಗೆ ಮನೆ, ಹೊಲ, ಇತ್ಯಾದಿಗಳೂ ಶೇಷವಾಗಿ, ಅವನ ಶರೀರವೂ ಶೇಷವಾಗಿರುತ್ತದೆ. ಆದರೆ ಮನೆ, ಹೊಲ ಇತ್ಯಾದಿಗಳು ಪೃಥಕ್‌ಸಿದ್ಧಿಗೆ ಅರ್ಹವಾಗಿದೆ (ಅಂದರೆ ಇವನನ್ನು ಬಿಟ್ಟು ಅವುಗಳು ಇರಬಲ್ಲವುಗಳಾಗಿವೆ.) ಶರೀರವಾದರೋ ಆತ್ಮನನ್ನು ಬಿಟ್ಟು ಇರಲು ಅನರ್ಹವಾಗಿದೆ. ಆತ್ಮನು ಪರಮಾತ್ಮನಿಗೆ ಶೇಷಭೂತ ಎಂದರೆ ಅದು ಯಾವರೀತಿಯದು ಎಂಬುದನ್ನು ಈ ಸೂತ್ರದಲ್ಲಿ ವಿವರಿಸಲಾಗಿದೆ.

**(ಇತು ತಾನ್)** - ಈಶ್ವರ ಶೇಷಭೂತವಾಗಿ ಹೇಳಲ್ಪಟ್ಟ ಆತ್ಮ ವಸ್ತುವು **(ಗೃಹಕ್ಷೇತ್ರ ಪುತ್ರಾದಿಗಳೈಪ್ಪೋಲೇ)** - ಮನೆ, ಹೊಲ, ಪುತ್ರರು - 'ಆದಿ ಶಬ್ದದಿಂದ ಧನ, ಧಾನ್ಯ, ಆರಾಮ ದಾಸ, ದಾಸೀ ವರ್ಗಗಳು ಹೇಳಲ್ಪಟ್ಟಿವೆ.

**(ಪೃಥಕ್...ಅನ್ರಿಕ್ಕೇ)** - ಪೃಥಕ್ ಸಿದ್ಧಿ-ಎಂದರೆ ಸಹೋಪಲಂಬ ನಿಯಮ ಇಲ್ಲದೆಯೂ (ಜೊತೆಗೂಡಿರದೆಯೂ) ತಾನು ಸಿದ್ಧಿಸುವಿಕೆ. 'ಆದಿ' ಶಬ್ದದಿಂದ ಅನೇಕ ಮಾನ್ಯವಾದ ವಿಷಯಗಳು ಹೇಳಲ್ಪಟ್ಟಿವೆ. ಗೃಹಕ್ಷೇತ್ರದಾಸದಾಸೀ ಪ್ರಭೃತಿಗಳು, ತಂದೆ, ಮಗ, ದೊಡ್ಡವನು, ಚಿಕ್ಕವನು ಎಲ್ಲರಿಗೂ ಶೇಷವಾಗಿರುತ್ತದೆ. ಪುತ್ರನು

ಮಾತಾ, ಪಿತಾ, ಚಿಕ್ಕಪ್ಪ, ದೊಡ್ಡಪ್ಪ ಇತ್ಯಾದಿಗಳಿಗೆ ಸಾಧಾರಣವಾಗಿ ಶೇಷನಾಗಿರುತ್ತಾನೆ. ಪತ್ನಿಯೂ '**ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ತೃತೀಯೋಽಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯ ಜಾಃ।**'[1] ಎಂದು ಪಾಣಿಗ್ರಹಣಾನಂತರ ಸೋಮಾದಿ ದೇವತೆಗಳಿಗೆ ಶೇಷಭೂತಳಾಗಿ ಹೇಳಲ್ಪಡುತ್ತಾಳೆ. ಅದ್ದರಿಂದ ಈ ಶೇಷತ್ವವು ಅನೇಕ ಸಾಧಾರಣವಾಗಿರುತ್ತದೆ. ಹೀಗಿಲ್ಲದೆ ಶರೀರದಂತೆ ಅವುಗಳಿಗೆ ಅಯೋಗ್ಯವಾಗಿರುವಿಕೆ ಎಂದರೆ–ಅಪೃಥಕ್ ಸಿದ್ಧವಾಗಿ (ಎಂದೂ ಬೇರೆಯಾಗಿರದೆ) ಅನನ್ಯ ಸಾಧಾರಣವಾದ (ಆತ್ಮನಿಗೆ ಮಾತ್ರವೇ ಶೇಷವಾಗಿ) ಶರೀರದಂತೆ ಪೃಥಕ್ ಸಿದ್ಧ್ಯಾದಿಗಳಿಗೆ ಅನರ್ಹವಾಗಿರುವಿಕೆ. (ಪೃಥಕ್ ಸ್ಥಿತ್ಯಾದಿಗಳುಕ್ಕು) ಎಂದು ಪಾಠವಾದರೆ- ಆದಿಶಬ್ದದಿಂದ ಪೃಥಕ್ ಉಪಲಬ್ಧಿಯು ಹೇಳಲ್ಪಡುತ್ತದೆ. ಆಗ ಇದು ಗೃಹ, ಕ್ಷೇತ್ರ, ಪುತ್ರ, ಕಳತ್ರ, ಮಿತ್ರಾದಿಗಳಂತೆ ಬೇರೆಯಾಗಿರುವುದಕ್ಕೂ, ಬೇರೆಯಾಗಿ ಕಾಣುವಂತೆಯೂ ಅಲ್ಲದೆ, ಶರೀರದಂತೆ ಇವೆರಡಕ್ಕೂ ಅನರ್ಹವಾಗಿದೆ ಎಂಬ ಅರ್ಥ ಏರ್ಪಡುತ್ತದೆ. '**ಆಯುಮೇವ ಆತ್ಮ ಶರೀರಭಾವಃ' ಪೃಥಕ್ ಸಿದ್ಧ್ಯನರ್ಹಾಧಾರಾಧೇಯಭಾವಃ, ನಿಯಂತೃ ನಿಯಾಮ್ಯ ಭಾವಃ, ಶೇಷ ಶೇಷಿ ಭಾವಶ್ಚ**[1] ಎಂದೂ '**ಯಸ್ಯ ಚೇತನಸ್ಯ ಯದ್ದ್ರವ್ಯಂ ಸರ್ವಾತ್ಮನಾ ಸ್ವಾರ್ಥೇ ನಿಯನ್ತುಂ ಧಾರಯಿತುಂ ಚ ಶಕ್ಯಂ ತಚ್ಛೇಷತೈಕ ಸ್ವರೂಪಂ ಚ ತತ್ತಸ್ಯ ಶರೀರಮ್**'[3] ಎಂದು ವೇದಾರ್ಥ ಸಂಗ್ರಹದಲ್ಲೂ ಶ್ರೀ ಭಾಷ್ಯದಲ್ಲೂ ನಿರೂಪಿಸಿದ್ದಾರೆ. ಆತ್ಮ ಶರೀರಭಾವ ಲಕ್ಷಣವಾಗಿ ಶ್ರೀಭಾಷ್ಯಕಾರರು ಅನುಗ್ರಹಿಸಿದ ನಿಯಂತೃನಿಯಾಮ್ಯಭಾವ, ಆಧಾರಾಧೇಯ ಭಾವ, ಶೇಷ ಶೇಷಿಭಾವವೆಂದು ಈ ಮೂರೂ ಇಲ್ಲಿ ಹೇಳಲ್ಪಡುವುದರಿಂದ '**ಯಸ್ಯಾತ್ಮಾ ಶರೀರಂ ಯಸ್ಯಾಕ್ಷರಂ ಶರೀರಂ**'[4] ಇತ್ಯಾದಿ ಶ್ರುತಿ ಸಿದ್ಧವಾದ ಆತ್ಮನ ಪರಮಾತ್ಮ ಶರೀರತ್ವವು (ಆತ್ಮನು ಪರಮಾತ್ಮನ ಶರೀರ ಎಂಬುದು) ಅರ್ಥಾತ್ ಹೇಳಲ್ಪಟ್ಟಿತು. ಹೀಗೆ ಈವರೆಗೆ ಆತ್ಮ ಸ್ವರೂಪ ಶೋಧನೆಯು ಮಾಡಲ್ಪಟ್ಟಿತು.

## ಸೂ. 42 ಆತ್ಮ ಸ್ವರೂಪನ್ನಾದ್ ಬದ್ಧಮುಕ್ತ ನಿತ್ಯರೂಪೇಣ ಮೂನ್ರುಪಡಿಪ್ಪಟ್ಟಿರುಕ್ಕುಮ್.

ಈ ರೀತಿಯಾದ ಆತ್ಮ ಸ್ವರೂಪವು ಅನಾದಿಯಾದ ಅಚಿತ್ ಸಂಬಂಧ, ತದ್ವಿನಿಯೋಗ, ತದನನ್ವಯಗಳಿಂದ ಬದ್ಧ, ಮುಕ್ತ, ನಿತ್ಯ ರೂಪೇಣ ಮೂರು ಪ್ರಕಾರವಾಗಿರುತ್ತದೆ.

## ಸೂ. 43 ಬದ್ಧರೆನ್ಗಿರತು-ಸಂಸಾರಿಗಳ್ಳೈ.

ಎಳ್ಳಿನಲ್ಲಿರುವ ಎಣ್ಣೆಯಂತೆ , ಕಟ್ಟಿಗೆಯಲ್ಲಿರುವ ಬೆಂಕಿಯಂತೆ (ದುರ್ವಿವೇಚಗುಣ ತ್ರಯಾತ್ಮಕ ಅನಾದಿ) ಅರಿಯಲು ದುಸ್ಸಾಧ್ಯವಾದ ಅನಾದಿಯಾದ ಭಗವನ್ಮಾಯೆಯಿಂದ ತಿರೋಹಿತವಾದ ಸ್ವರೂಪವುಳ್ಳವರಾಗಿ, ಅನಾದಿಯಾದ ಅವಿದ್ಯೆಯಿಂದ ಸಂಚಿತವಾದ, ಪುಣ್ಯಪಾಪರೂಪ ಕರ್ಮದಿಂದ ಮುಸುಕಿದವರಾಗಿ, ಆ ಕರ್ಮಗಳಿಗನುಗುಣವಾಗಿ ವಿವಿಧವೂ ವಿಚಿತ್ರವೂ ಆದ ದೇವಾದಿರೂಪ (ದೇವ, ತಿರ್ಯಕ್, ಮನುಷ್ಯ, ಸ್ಥಾವರ ) ದೇಹಗಳಲ್ಲಿ ಪ್ರವೇಶಿಸಿ, ಆಯಾಯಾ ದೇಹಗಳಲ್ಲಿ 'ಅಹಂ' ಬುದ್ಧಿಯನ್ನೂ, ದೇಹ ಸಂಬಂಧಿಗಳಲ್ಲಿ ಮಮತಾ ಬುದ್ಧಿಯನ್ನೂ ಮಾಡಿ, ದುರ್ವಾಸನಾರುಚಿಯಿಂದ ವಿವಶರಾಗಿ, ತಮ್ಮ ಕರ್ಮಾನುಸಾರ ಸುಖ ದುಃಖ ಪರಂಪರೆಗಳನ್ನು ಅನುಭವಿಸುವ ಸಂಸಾರಿಗಳನ್ನು 'ಬದ್ಧರು 'ಎನ್ನಲಾಗುತ್ತದೆ.

## ಸೂ. 44 ಮುಕ್ತರೆನ್ಗಿರತು ಸಂಸಾರ ಸಂಬಂಧ ಮಟ್ರುವರ್‌ಗಳ್ಳೈ.

ಅನಾದಿ ಕರ್ಮಪ್ರವಾಹ ಪ್ರಯುಕ್ತವಾದ ಸಂಸಾರ ಸಂಬಂಧ ಸಾಗುತ್ತಿರಲು, ಮೋಕ್ಷ ರುಚಿಗೆ ಪ್ರತಿಬಂಧಕವಾದ ಕರ್ಮ ವಿಶೇಷವು ಅನುಭವಿಸುದರ ಮೂಲಕವಾಗಿಯೋ, ಪ್ರಾಯಶ್ಚಿತ್ತಗಳಿಂದಲೋ,

ಅನಭಿಸಂಹಿತ ಫಲವಾಗಿ ಅತ್ಯುತ್ಕಟವಾದ ಪ್ರಾಮಾಣಿಕ ಪುಣ್ಯಗಳಿಂದಲೋ,ಕ್ಷಯಿಸಿ, ಅದಕ್ಕೆ ಮೂಲವಾದ ಜಾಯಮಾನ ಕಾಲದಲ್ಲಿನ ಭಗವತ್ ಕಟಾಕ್ಷದಿಂದ ಸತ್ತ್ವೋದ್ರೇಕ ಉಂಟಾಗಿ ಮೋಕ್ಷದಲ್ಲಿ ರುಚಿ ಏರ್ಪಡುತ್ತದೆ. ಅನಂತರ ಸದ್ಗುರುವಿನ ಸಮಾಶ್ರಯಣವಾಗಿ, ವೇದ ವೇದಾಂತ ಪ್ರತಿಪಾದ್ಯನಾದ ಪರಬ್ರಹ್ಮನನ್ನು ಅರಿತವರಾಗಿ, ಆ ಬ್ರಹ್ಮನನ್ನು ಹೊಂದುವ ಮೋಕ್ಷ ಸಿದ್ಧಿಗಾಗಿ, ತಮ್ಮ ವರ್ಣಾಶ್ರಮೋಚಿತವಾದ ಕರ್ಮಗಳನ್ನು ಫಲ, ಸಂಗ, ಕರ್ತೃತ್ವ ತ್ಯಾಗಪೂರ್ವವಾಗಿ ಅನುಷ್ಠಿಸಿ **'ಧರ್ಮೇಣ ಪಾಪಂ ಅಪನುದತಿ'** [1] ಎಂದೂ. **'ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ'** [2] ಎಂದೂ ಹೇಳುವಂತೆ ಆ ಸತ್ಕರ್ಮಾನುಷ್ಠಾನದಿಂದ ಜ್ಞಾನೋತ್ಪತ್ತಿಗೆ ವಿರೋಧಿಯಾದ ಪ್ರಾಚೀನ ಕರ್ಮವು ಕ್ಷಯಿಸುತ್ತದೆ. ಆಗ ಅಂತಃಕರಣ ನಿರ್ಮಲವಾಗಿ, ಭಗವದೇಕ ಅವಲಂಬಿಯಾದ ಸಮ್ಯಕ್ ಜ್ಞಾನವು ಉದಿಸುತ್ತದೆ. ಅನಂತರ

**ಜನ್ಮಾಂತರ ಸಹಸ್ರೇಷು ತಪೋ ಜ್ಞಾನ ಸಮಾದಿಭಿಃ|**
**ನರಾಣಾಂ ಕ್ಷೀಣಪಾಪಾನಾಂ ಕೃಷ್ಣೇ ಭಕ್ತಿಃ ಪ್ರಜಾಯತೇ|** [3]

ಎಂಬಂತೆ ಬಹುಜನ್ಮ ಸಾಧ್ಯವಾದ ಕರ್ಮಾಚರಣೆ, ಜ್ಞಾನಗಳಿಂದ ಏರ್ಪಟ್ಟ ತೈಲ ಧಾರೆಯಂತಹ ಅವಿಚ್ಛಿನ್ನ ಸ್ಮೃತಿ ಸಂತಾನ ರೂಪ ಭಕ್ತಿಮೂಲವಾಗಿ ಬರುವ ಭಗವತ್ ಪ್ರಸಾದದಿಂದಲೋ, ಅಥವಾ ನಿರ್ಹೇತುಕವಾದ ಸೌಹಾರ್ದವಿಶೇಷದಿಂದಲೋ ಯಾದೃಚ್ಛಿಕಾದಿ ಸುಕೃತ ಪರಂಪರೆಗಳನ್ನು ಕಲ್ಪಿಸಿ, ತನ್ಮೂಲವಾಗಿ ವಿಶೇಷ ಕಟಾಕ್ಷವನ್ನು ಆ ಪರಮಾತ್ಮ ಬೀರುತ್ತಾನೆ. ನಂತರ ತನ್ನ ವಿಷಯದಲ್ಲಿ ಅದ್ವೇಷವನ್ನು (ದ್ವೇಷವಿಲ್ಲದಿರುವಿಕೆ) ಹುಟ್ಟಿಸಿ, ಆಭಿಮುಖ್ಯವನ್ನು ಉಂಟುಮಾಡಿ , ಸಾತ್ವಿಕ ಸಂಭಾಷಣೆಯನ್ನು ಬೆಳೆಸಿ (ಸಜ್ಜನರೊಡನೆ ಸಹವಾಸ ಬೆಳೆಸಿ) ತನ್ಮೂಲಕ ಸದಾಚಾರ್ಯ ಸಮಾಶ್ರಯಣದಲ್ಲಿ ತೊಡಗಿಸಿ, ಅವರ ಉಪದೇಶದಿಂದ ಅಥವಾ ತನ್ನ ಕಟಾಕ್ಷದಿಂದ ತತ್ವಜ್ಞಾನ ಏರ್ಪಡುವಂತೆ ಮಾಡುತ್ತಾನೆ. ಆಗ ಮಹಾವಿಶ್ವಾಸಪೂರ್ವಕವಾಗಿ ತನ್ನ ಪಾದಕಮಲಗಳೇ ಉಪಾಯವೆಂದು ನಿಶ್ಚಯವೇರ್ಪಡಲು, ಭಗವದಾಕಸ್ಮಿಕ ಕೃಪೆಯಿಂದ ಇತರ ಉಪಾಯಗಳೆಲ್ಲ ದುಷ್ಕರವೆಂಬ ಬುದ್ಧಿಯುಂಟಾಗಿ ಪರಮಾತ್ಮನಲ್ಲಿ ಮಾಡಿದ ಪ್ರಪತ್ತಿಮೂಲವಾದ ಭಗವತ್ ಪ್ರಸಾದದಿಂದ ಸಾಂಸಾರಿಕವಾದ ಸಕಲ ದುರಿತಗಳೂ ನಾಶವಾಗಿ, ಸ್ವರೂಪ ಅವಿರ್ಭಾವವಾಗಿ, ಭಗವದನುಭವ ಕೈಂಕರ್ಯಕ್ಕೆ ಯೋಗ್ಯರಾದವರನ್ನು **'ಮುಕ್ತರು'** ಎನ್ನಲಾಗುತ್ತದೆ. ಭಗವದನುಭವದಲ್ಲಿ ರುಚಿ ಮಾತ್ರವಲ್ಲದೆ, ಭಗವಂತನನ್ನು ಸಮಾಶ್ರಯಣ ಮಾಡಿ, ಸಂಸಾರ ನಿವೃತ್ತಿಯನ್ನು ಮಾಡಿಕೊಂಡು, ದೇಶವಿಶೇಷಕ್ಕೆ ಹೋಗಿ ತಮ್ಮ ಆತ್ಮಸ್ವರೂಪವನ್ನೇ ಅನುಭವಿಸುವ ಕೇವಲರನ್ನೂ ಮುಕ್ತರು ಎನ್ನಲಾಗುತ್ತದೆ.

## ಸೂ . 45 ನಿತ್ಯರೆನ್ಗಿರತು-ಒರುನಾಳುಂ ಸಂಸರಿಯಾದ ಶೇಷ ಶೇಷಾಶನಾದಿಗಳ್ಳೆ.

ಒಂದು ದಿನವೂ ಸಂಸರಿಸದ ಚೇತನರನ್ನು 'ನಿತ್ಯ'ರು ಎನ್ನಲಾಗುತ್ತದೆ.

'ಒಂದು ದಿನವೂ'ಎಂಬುದರಿಂದ ಮುಕ್ತರನ್ನು ವ್ಯಾವರ್ತಿಸಲಾಗಿದೆ. ಒಮ್ಮೆ ಸಂಸಾರಮಂಡಲದಲ್ಲಿದ್ದು ಅದರಿಂದ ನಿವೃತ್ತರಾದವರು ಮುಕ್ತರು. ನಿತ್ಯರಾದರೋ ಅಸ್ಪೃಷ್ಟ ಸಂಸಾರ ಗಂಧರು. (ಒಮ್ಮೆ ಕೂಡ ಸಂಸಾರ ಗಂಧದ ಸ್ಪರ್ಶವೂ ಇಲ್ಲದವರು.) **'ಅಹೃತ ಸಹಜ ದಾಸ್ಯಾ ಸೂರಯಸ್ಸರಸ್ತಪಂಥಾಃ'** [1] ಎನ್ನುತ್ತಾರೆ ಭಟ್ಟರ್. **'ನಿತ್ಯೋನಿತ್ಯಾನಾಂ'** ಎಂದೂ **'ಜ್ಞಾಜ್ಞೌದ್ವಾವಜಾವೀಶನೀಶೌ'** ಎಂದೂ ಹೇಳುವಂತೆ ಆತ್ಮಸ್ವರೂಪ ನಿತ್ಯವಾಗಿರುವಾಗ **'ಅಸನ್ನೇವ'** ಎಂಬತಿರುವವನು **'ಸಂತ ಮೇನಮ್'** ಎಂಬಂತಾಗುವುದು ಭಗವದ್ವಿಷಯರಾಹಿತ್ಯ ಮತ್ತು ಸಾಹಿತ್ಯದಿಂದ. ಆದ್ದರಿಂದ ಇವರನ್ನು ನಿತ್ಯರೆನ್ನುವುದು ಭಗವತ್ ಜ್ಞಾನಕ್ಕೆ ಒಂದು ದಿನವೂ ಸಂಕೋಚವಿಲ್ಲದವರಾದ್ದರಿಂದ. ಇದನ್ನು

ಅನುಸರಿಸಿಯೇ 'ಯತ್ರಪೂರ್ವೇ ಸಾಧ್ಯಾಸ್ಸಂತಿ ದೇವಾಃ' ಎಂದೂ 'ಯತ್ರರ್ಷಯಃ ಪ್ರಥಮಜಾಯೇ ಪುರಾಣಾಃ' ಎಂದೂ ಶ್ರುತಿ ಇವರನ್ನು ಶ್ಲಾಘಿಸುತ್ತದೆ. ಶ್ರೀಭಾಷ್ಯಕಾರರೂ ಇವರ ವೈಭವವನ್ನು 'ಸ್ವಚ್ಛಾಂದಾನುವರ್ತೀ' ಇತ್ಯಾದಿಯಾಗಿ ಶ್ರೀವೈಕುಂಠ ಗದ್ಯದಲ್ಲಿ ವಿಸ್ತಾರವಾಗಿ ಕೊಂಡಾಡಿದ್ದಾರೆ. ಆದ್ದರಿಂದ ಒಂದು ದಿನವೂ ಸಂಸರಿಸದ ಎನ್ನುವುದರಿಂದಲೇ ಇವರ ವೈಭವವನ್ನು ನಿರೂಪಿಸಿದಂತಾಯಿತು. ಅಶೇಷ ಶೇಷ ವೃತ್ತಿಗಳಲ್ಲೂ (ಒಂದೂ ಬಿಡದಂತೆ ಎಲ್ಲಾ ಸೇವೆಯಲ್ಲೂ) ಅನ್ವಿತರಾಗಿ, ಕೈಂಕರ್ಯಪರರೆಲ್ಲರಿಗೂ ಆಧಾರಭೂತವಾದ ಆದರ್ಶಪ್ರಾಯನಾಗಿರುವುದರಿಂದ 'ತಿರುವನನ್ದಾಳ್ವಾ'ನನ್ನು (ಆದಿಶೇಷ) **'ಶೇಷ'** ಎಂದು ಕರೆಯಲಾಗಿದೆ. **'ನಿವಾಸ ಶಯ್ಯಾಸನ ಪಾದುಕಾಂಶುಕೋಪಧಾನವರ್ಷಾತ ಪವಾರಣಾದಿಭಿಃ'; 'ಶರೀರಭೇದೈ ಸ್ತವಶೇಷತಾಂಗತೈರ್ಯಥೋಚಿತಂ ಶೇಷ ಇತೀರಿತೇ ಜನೈಃ'**[2] ಎಂದು ಆಳವನ್ದಾರ್ ಆದಿಶೇಷನನ್ನು ತಮ್ಮ ಸ್ತೋತ್ರರತ್ನದಲ್ಲಿ ಕೊಂಡಾಡಿದ್ದಾರೆ. ಇತರ ತದೀಯರಂತೆ ಅನಿಯಮವಾಗಿಲ್ಲದೆ ಸರ್ವೇಶ್ವರನು ಭುಜಿಸಿ ಉಳಿದದ್ದನ್ನು ಭುಜಿಸುವ ನಿಯಮವನ್ನೇ ಅವಲಂಭಿಸಿದವರಾದ್ದರಿಂದ **'ಸೇನೈಮುದಲಿಯಾರ್'** ಎಂಬ ವಿಷ್ವಕ್ಸೇನರನ್ನು **'ಶೇಷಾಶನ'** ಎನ್ನಲಾಗುತ್ತದೆ. **'ತ್ವದೀಯಭುಕ್ತೋಜ್ಛಿತ ಶೇಷಭೋಜಿನಾ'**[3] ಎಂದಿದ್ದಾರೆ ಆಳವಂದಾರರು. **'ವನಾದ್ರಿನಾಥಸ್ಯ ಸುಸುನ್ದರಸ್ಯ ವೈ ಪ್ರಭುಕ್ತಶಿಷ್ಟಾಶ್ಯಥ ಸೈನ್ಯಸತ್ಪತಿಃ'**[4] ಎಂದು ಕೂರತ್ತಾಳ್ವಾನ್‌ರವರೂ ಅನುಗ್ರಹಿಸಿದ್ದಾರೆ. ಸೂತ್ರದಲ್ಲಿ **'ಆದಿ'** ಶಬ್ದದಿಂದ **'ಶೇಷಶೇಷಾನ ಗರುಡಪ್ರಮುಖ ನಾನಾ ವಿಧಾನನ್ತ ಪರಿಜನ ಪರಿಚಾರಿಕಾ ಪರಿಚರಿತ ಚರಣಯುಗಳ'**[5] ಎಂಬಂತೆ ಭಗವತ್ಕೈಂಕರ್ಯ ಭೋಗರಾದ ವೈನತೇಯಾದಿ ಪ್ರಮುಖರಾದ ನಿತ್ಯಸಿದ್ಧರೆಲ್ಲರನ್ನೂ ಹೇಳಲಾಗಿದೆ.

## ಸೂ. 46 ಜಲತ್ತುಕ್ಕು ಅಗ್ನಿಸಂಸ್ಪೃಷ್ಟಸ್ಥಾಲೀ ಸಂಸರ್ಗತ್ತಾಲೇ ಔಷ್ಣ್ಯಶಬ್ದಾದಿಗಳುಣ್ಡಾಗಿರಾಪ್ಪೋಲೇ, ಆತ್ಮಾವುಕ್ಕುಮ್ ಅಚಿತ್ ಸಂಬಂಧತ್ತಾಲೇ ಅವಿದ್ಯಾ ಕರ್ಮವಾಸನಾ ರುಚಿಕಳುಣ್ಡಾಕಿರನ.

**(ಜಲತ್ತುಕ್ಕು ..........ಸಂಬಂಧತ್ತಾಲೇ)** ಹಿಂದಿನ ಸೂತ್ರಗಳಲ್ಲಿ ಹೇಳಲ್ಪಟ್ಟಂತಹ ವೈಲಕ್ಷಣ್ಯವುಳ್ಳ ಆತ್ಮನಿಗೆ ಅವಿದ್ಯಾದಿದೋಷ ಸಂಬಂಧಗಳು ಏರ್ಪಡುವುದು ಹೇಗೆ ಎಂಬುದನ್ನು ದೃಷ್ಟಾಂತದ ಮೂಲಕ ಈ ಸೂತ್ರದಲ್ಲಿ ನಿರೂಪಿಸಲಾಗಿದೆ.

ಸ್ವಭಾವತಃ ನಿರ್ವಿಕಾರವಾಗಿ ಶೀತಲವಾಗಿರುವ ಜಲವು, ಅಗ್ನಿಯೊಡನೆ ಕೂಡಿದ ಪಾತ್ರೆಯ ಸಂಸರ್ಗದಿಂದ ಔಷ್ಣ್ಯ, ಶಬ್ದೋದ್ರೇಕಾದಿ ವಿಕಾರಗಳನ್ನು ಹೊಂದುವಂತೆ ಸ್ವತಃ ಜ್ಞಾನಾನಂದಾಮಲ ಸ್ವರೂಪನಾದ ಆತ್ಮನಿಗೂ ಗುಣತ್ರಯಾಶ್ರಯವಾದ ಅಚಿತ್ ಸಂಬಂಧದಿಂದ ಅವಿದ್ಯಾ, ಕರ್ಮ, ವಾಸನಾ, ರುಚಿಗಳುಂಟಾಗುತ್ತವೆ. ಈ ಸೂತ್ರಕಾರರ ತಮ್ಮಂದಿರಾದ ಅಳಕಿಯಪ್ಪೆರುಮಾಳ್ ನಾಯನಾರ್‌ರವರೂ ತಮ್ಮ **'ಆಚಾರ್ಯಹೃದಯ'** ಗ್ರಂಥದಲ್ಲಿ **'ಅವಿದ್ಯಾಕಾರಣಮನಾದ್ಯಚಿತ್ಸಮ್ಬನ್ಧಮ್'** ಎಂದು ಇದನ್ನೇ ಅನುಗ್ರಹಿಸಿದ್ದಾರೆ. ಶ್ರೀ ವಿಷ್ಣುಪುರಾಣದಲ್ಲಿ

**ನಿರ್ವಾಣಮಯ ಏವಾಯಮಾತ್ಮಾಜ್ಞಾನಮಯೋಽಮಲಃ।**
**ದುಃಖಾಜ್ಞಾನಮಲಾಧರ್ಮಾಃ ಪ್ರಕೃತೇ ಸ್ತೇ ನಚಾತ್ಮನಃ ।**
**ಜಲಸ್ಯಚಾಗ್ನಿ ಸಂಸೃಷ್ಟಸ್ಥಾಲೀ ಸಂಗಾತ್ತದಾಪಿ ಹಿ।**
**ಶಬ್ದೋದ್ರೇಕಾದಿಕಾನ್ ಧರ್ಮಾನ್ ತತ್ಕರೋತಿ ಯಥಾ ಮುನೇ।**
**ತಥಾತ್ಮಾ ಪ್ರಕೃತೌ ಸಂಗಾದಹಂ ಮಾನಾದಿ ದೂಷಿತಃ।**

ಭಜತೇ ಪ್ರಾಕೃತಾನ್ ಧರ್ಮಾನ್ ಅನ್ಯಸ್ತೇಭ್ಯೋಹಿಸೋ ವ್ಯಯಃ। [1]ಎಂದು ಹೇಳಲಾಗಿದೆ.

**(ಅವಿದ್ಯಾ............ಉಣ್ಡಾಕಿರನ)** ಅವಿದ್ಯೆಯೆಂದರೆ-ಅಜ್ಞಾನ. ಅದು ಜ್ಞಾನ ಅನುದಯ, ಅನ್ಯಥಾಜ್ಞಾನ, ವಿಪರೀತ ಜ್ಞಾನರೂಪೇಣ ಅನೇಕ ವಿಧವಾಗಿರುತ್ತದೆ.

ಕರ್ಮವೆಂದರೆ-ಕರಣತ್ರಯಗಳಿಂದ ಮಾಡಲ್ಪಟ್ಟ ಪುಣ್ಯಪಾಪಾತ್ಮಕವಾದ ಕ್ರಿಯಾವಿಶೇಷವು . ಅದರಲ್ಲಿ ಪುಣ್ಯವು ಐಹಿಕ,ಆಮುಷ್ಮಿಕ ನಾನಾವಿಧ ಭೋಗಸಾಧನತಯಾ ಬಹು ವಿಧವಾಗಿರುತ್ತದೆ. ಪಾಪವು ಅಕೃತ್ಯಕರಣ, ಕೃತ್ಯಕರಣ, ಭಗವದಪಚಾರ, ಭಾಗವತಾಪಚಾರ, ಅಸಹ್ಯಾಪಚಾರರೂಪೇಣ ಅನಂತವಾಗಿರುತ್ತದೆ.

ವಾಸನೆಯೆಂದರೆ- ಹಿಂದೆ ಮಾಡಿದಂತಹವುಗಳು ಮತ್ತೆ ಮರುಕಳಿಸುವುದಕ್ಕೆ ಕಾರಣವಾದ ಸಂಸ್ಕಾರ. ಇದೂ ಹೇತುಭೇದದಿಂದ ಬಹು ವಿಧವಾಗಿರುತ್ತದೆ.

ರುಚಿಯೆಂದರೆ-ಬೇರೆ ರಸಾನುಭವಗಳಿಂದಲೂ ಬೇರ್ಪಡಿಸಲಾಗದಂತೆ ಒಂದು ವಿಷಯದಲ್ಲಿರುವ ತೀವ್ರವಾದ ಇಚ್ಛೆ. ಇದೂ ವಿಷಯಭೇದದಿಂದ ಬಹು ವಿಧವಾಗಿರುತ್ತದೆ.

## ಸೂ. 47 ಅಚಿತ್ತುಕ್ಕಳ್ಳನ್ದವಾರೇ ಅವಿದ್ಯಾದಿಗಳ್ ಕಳ್ಳೆಯುಮೆನ್ಬರ್‌ಕಳ್.

ಆತ್ಮನಿಗೆ ಆಗಾಮಿಯಾದ ಈ ಅವಿದ್ಯಾದಿಗಳು ಯಾವ ಅವಸ್ಥೆಯಲ್ಲಿ ಕಳೆಯುತ್ತವೆ ಎಂಬುದನ್ನು ಈ ಸೂತ್ರದಲ್ಲಿ ವಿವರಿಸಲಾಗಿದೆ.

ಕಾರಣನಿವೃತ್ತ್ಯಾ ಕಾರ್ಯನಿವೃತ್ತಿಯಾದ್ದರಿಂದ, ಅಚಿತ್ ಸಂಬಂಧದಿಂದ ಏರ್ಪಟ್ಟ ಇವುಗಳು ಆ ಅಚಿತ್ ಸಂಬಂಧ ಕಳೆದಕೂಡಲೇ ತಾವೂ ಇಲ್ಲವಾಗುತ್ತವೆ ಎಂದು ತತ್ವವಿತ್ತುಗಳು ಹೇಳುತ್ತಾರೆ ಎಂಬುದಾಗಿದೆ. 'ಹೇಳುತ್ತಾರೆ ಎಂಬುದಾಗಿದೆ' ಎಂಬುದರಿಂದ ಆ ಅಭಿಪ್ರಾಯವನ್ನು ಪರಮತವಾಗಿಸಿ **'ಮಯರ್ವರ ಮದಿನಲಮರುಳಪೆತ್ತ'** ಎಂಬಂತೆ ಭಗವತ್ಪ್ರಸಾದ ವಿಶೇಷದಿಂದ ಅಚಿತ್ತು ಕಳೆಯುವುದಕ್ಕೆ ಮುನ್ನವೇ ಅವಿದ್ಯೆಕಳೆಯುವುದು ಕಂಡುಬರುವುದರಿಂದ, ಆ ನಿಯಮವಿಲ್ಲವೆಂಬುದು ಈ ಸೂತ್ರಾಕಾರರ ಅಭಿಪ್ರಾಯ ಎಂದು ಹೇಳುವವರೂ ಇದ್ದಾರೆ. ಆದರೆ ಅದು ಮುಖ್ಯವಲ್ಲ. ಭಗವತ್ಪ್ರಸಾದ ವಿಶೇಷಕ್ಕೆ ಪಾತ್ರರಾದರೂ ಅವರೂ ತಮ್ಮ ಶರೀರದೊಡನೆ ಇರುವಾಗ ಪರಮಭಕ್ತಿ ಪರ್ಯನ್ತ ಏರ್ಪಟ್ಟರೂ **'ವಿನ್ನೈಪ್ಪಡಲಮ್ ವಿಳವಿಳಿತ್ತುನ್ನೈ ಮೆಯ್ಯುತ್ತಾಲುಳ್ಳವುಲಕಳವುಂ ಯಾನುಮುಳ ನಾವನೆನ್‌ಕೊಲೋ'** ಎಂಬುದರಿಂದ **'ಸರ್ವಂ ಹ ಪಶ್ಯಃ ಪಶ್ಯತಿ'**[1] ಎಂಬಂತೆ ಮುಕ್ತಾವಸ್ಥೆಯಲ್ಲಿ ಅಚಿತ್ತು ಕಳೆಯುವುದಕ್ಕೆ ಮುನ್ನ ವೈಶ್ಯದ್ಯವು ಉಂಟಾಗದೇ ಇರುವುದರಿಂದ ಮೇಲಿನ ಅಭಿಪ್ರಾಯವು ಅಂಗೀಕರಿಸಲ್ಪಡುವುದಿಲ್ಲ. ಆದ್ದರಿಂದ ಆತ್ಮ ಸ್ವರೂಪವು ಬದ್ಧ, ಮುಕ್ತ, ನಿತ್ಯರೂಪೇಣ ಮೂರುವಿಧವಾಗಿರುತ್ತದೆ. ಅದರಲ್ಲಿ ಬದ್ಧಚೇತನರಿಗೆ ಅವಿದ್ಯಾದಿ ಉತ್ಪತ್ತಿ ಮೂಲವೂ, ಅದರ ನಿವೃತ್ತಿ ಕ್ರಮವೂ ಹೇಳಲ್ಪಟ್ಟಿತು.

## ಸೂ. 48 ಇಮ್ಮೂನ್ರುಮ್ ತನಿತ್ತನಿಯೇ ಅನನ್ತಮಾಯಿರುಕ್ಕುಮ್.

ಈ ರೀತಿಯಾದ ತ್ರಿವಿಧ ಆತ್ಮವರ್ಗವೂ ಅನಂತವಾಗಿದೆ. ಆದರೆ ಇಷ್ಟೇ ಚೇತನರೆಂಬುದಾಗಿ ಸಂಖ್ಯೇಯರಾಗಿರುತ್ತಾರೆಯೇ? ಎಂಬ ಪ್ರಶ್ನೆಯನ್ನು ಮೂರು ಸೇರಿ ಅನಂತವಲ್ಲ. ಅವು ಒಂದೊಂದು ವರ್ಗವೂ ಬಿಡಿಬಿಡಿಯಾಗಿ ಅನಂತವಾಗಿವೆ ಎನ್ನುತ್ತಾರೆ.

## ಸೂ. 49 ಶಿಲರ್ ಆತ್ಮ ಭೇಧಮಿಲ್ಲೈ ಏಕಾತ್ಮಾವೇ ಉಳ್ಳತೆನ್ಬಾರ್‌ಗಳ್.

ಮೇಲಿನ ಸೂತ್ರದಲ್ಲಿ ಹೇಳಲ್ಪಟ್ಟ ಆತ್ಮಗಳ ಆನಂತ್ಯವನ್ನು ವಿರೋಧಿಸುವ ಏಕಾತ್ಮವಾದವನ್ನು ಈ ಸೂತ್ರದಲ್ಲಿ ನಿರಾಕರಿಸಲಾಗಿದೆ.

ಜೀವಾದ್ವೈತ ಪ್ರತಿಪಾದಕ ಶಾಸ್ತ್ರದ ಬಗ್ಗೆ ಕುದೃಷ್ಟಿಗಳನ್ನುಳ್ಳವರನ್ನು 'ಶಿಲರ್'- 'ಕೆಲವರು' ಎನ್ನಲಾಗಿದೆ. ಬ್ರಹ್ಮಾದ್ವೈತವೆಂದೂ, ಜೀವಾದ್ವೈತವೆಂದೂ, ಶಾಸ್ತ್ರಪ್ರತಿಪಾದ್ಯವಾದ ಅದ್ವೈತ ಎರಡು ವಿಧವಾಗಿದೆ. ಬ್ರಹ್ಮಾದ್ವೈತವೆಂದರೆ -ಪ್ರಕಾರ್ಯದ್ವೈತವು. (ವಿಶೇಷ್ಯ) ಜೀವಾದ್ವೈತವೆಂದರೆ-ಪ್ರಕಾರಾದ್ವೈತವು(ವಿಶೇಷಣ)

ಬ್ರಹ್ಮಪ್ರಕರಣಗಳಲ್ಲಿ **'ಸರ್ವಂಖಲ್ವಿದಂಬ್ರಹ್ಮ'**;[1] **'ಐತದಾತ್ಮ್ಯಮಿದಂ ಸರ್ವಂ'**;[2] **'ಪುರುಷ ಏ ವೇದಂ ಸರ್ವಮ್'** [3] ಎಂಬ ಸಾಮಾನಾಧಿಕರಣ್ಯದಿಂದ ಬ್ರಹ್ಮಾದ್ವೈತವನ್ನು ಪ್ರತಿಪಾದಿಸುವುದರಿಂದಲೂ; ಸಾಮಾನ್ಯಾಧಿಕರಣವು ಪ್ರಕಾರ ಭೇದ ವಿಶಿಷ್ಟಪ್ರಕಾರ್ಯೈಕತ್ವ (ಒಬ್ಬನೇ ಪರಮಾತ್ಮನೆಂಬ) ಪರವಾದುದರಿಂದಲೂ **'ಏಕಸ್ಸನ್ ಬಹುಧಾ ವಿಚಾರ'**[4] ಎಂದು ಪ್ರಕಾರ (ಜೀವರುಗಳು) ಬಹುತ್ವ ಕಂಠೋಕ್ತವಾದದ್ದರಿಂದಲೂ, ಹೀಗೆ ಹೇಳುತ್ತಾರೆ. ಅಲ್ಲಿಗೆ ವಿಧಿಗೆ ಶೇಷವಾದ **'ನೇಹನಾನಾಸ್ತಿ'**[5] ಇತ್ಯಾದಿಯಾಗಿ ಭೇದ ನಿಷೇಧವು ವಿಹಿತೈಕ್ಯ ವಿರೋಧಿ ಭೇದ ವಿಷಯವಾದ್ದರಿಂದಲೂ, ಸಾಮಾನ್ಯ ನಿಷೇಧವು ವಿಹಿತ ವ್ಯತಿರಿಕ್ತ ವಿಷಯವಾದ್ದರಿಂದ ಪ್ರಕಾರಿ (ಪರಮಾತ್ಮ) ಬಹುತ್ವ ನಿಷೇಧ ಪರವಾದ್ದರಿಂದಲೂ, ಮತ್ತು **'ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ'**[6] ಎಂದು ಬ್ರಹ್ಮ ತುಲ್ಯ ಪ್ರಕಾರ್ಯನ್ತರ (ಬೇರೆ ಪ್ರಕಾರಿಯ) ನಿಷೇಧವು ಕಂಠೋಕ್ತವಾದ್ದರಿಂದಲೂ ಪ್ರಕಾರ್ಯದ್ವೈತವೇ ಬ್ರಹ್ಮಾದ್ವೈತವು.

ಜೀವಬಹುತ್ವ ಶ್ರುತಿ ಸಿದ್ಧವಾದದ್ದರಿಂದಲೂ, ಬದ್ಧ ಮುಕ್ತ ವ್ಯವಸ್ಥಾನು ಪತ್ತಿಯಿಂದಲೂ, ಉಪದೇಶಾನು ಪತ್ತಿಯಿಂದಲೂ, ಸುಖಾದಿ ವ್ಯವಸ್ಥಾನುಪತ್ತಿಯಿಂದಲೂ

**ಪುಮಾನ್ನದೇವೋ ನ ಪಶುರ್ನಚಪಾದಪಃ।**
**ಚತುರ್ವಿಧೋ ವಿಭೇಧೋಽಯಂ ಮಿಥ್ಯಾ ಜ್ಞಾನ ನಿಬಂಧನಃ ದೇವಾದಿ ಭೇದೇಽಪಧ್ವಸ್ತೇ।** [7]

ಇತ್ಯಾದಿಗಳಿಂದ ದೇವ ಶರೀರ ಭೇದ ವಿಶೇಷ ನಿಷೇಧವು ಕಂಠೋಕ್ತವಾದದ್ದರಿಂದಲೂ, ಮುಕ್ತಾತ್ಮರಿಗೆ ಸಾಮ್ಯವನ್ನು ಶ್ರುತಿ ಹೇಳುವುದರಿಂದಲೂ ಜೀವಾದ್ವೈತವು ಪ್ರಕಾರಾದ್ವೈತವೇ.

ಇದನ್ನೇ ಶ್ರುತ ಪ್ರಕಾಶಿಕೆಯಲ್ಲಿ ಆದಿಭರತಚತುಶ್ಲೋಕೀ ವ್ಯಾಖ್ಯಾನ ಉಪಕ್ರಮದಲ್ಲಿ **'ಬ್ರಹ್ಮಾದ್ವೈತಂ ಜೀವಾದ್ವೈತಂ ಚೇತ್ಯದ್ವೈತಂ ದ್ವಿವಿಧಂ ಶಾಸ್ತ್ರಪ್ರತಿಪಾದ್ಯಂ'**[8] ಎಂದು ಪ್ರಾರಂಭಿಸಿ ಶ್ರೀವೇದವ್ಯಾಸ ಭಟ್ಟರಿಂದ ವಿಸ್ತರೇಣ ಪ್ರತಿಪಾದಿಸಲ್ಪಟ್ಟಿದೆ.

ಈ ರೀತಿ ಶಾಸ್ತ್ರದಲ್ಲಿ ಹೇಳಲ್ಪಡುವ ಜೀವಾದ್ವೈತದ ಹೃದಯವನ್ನರಿಯದೆ, ಆತ್ಮ ಭೇಧವಿಲ್ಲ. ಏಕಾತ್ಮವೇ ಇರುವುದು ಎಂದು ಕೆಲವು ಕುದೃಷ್ಟಿಗಳು ಹೇಳುತ್ತಾರೆ ಎಂದು ನಿರೂಪಿಸಲಾಯಿತು.

## ಸೂ. 50 ಆನ್ದ ಪಕ್ಷತ್ತಿಲ್ ಒರುವನ್ ಸುಖಿಕ್ಕಿರ ಕಾಲತ್ತಿಲೇ ವೇರೇ ಒರುವನ್ ದುಃಖಿಕ್ಕಕ್ಕೂಡಾದು.

ಆತ್ಮ ಭೇದವಿಲ್ಲದಪಕ್ಷ ದಲ್ಲಿ **'ಅಹಂ ಸುಖೀ'** ಎಂದು ಒಬ್ಬನು ಸುಖಿಸುವ ಕಾಲದಲ್ಲಿ ಮತ್ತೊಬ್ಬ **'ಅಹಂ ದುಃಖೀ'** ಎಂದು ದುಃಖಿಸುವಂತಹ ಈ ಸುಖ ದುಃಖ ವ್ಯವಸ್ಥೆ ಸರಿಹೊಂದುವುದಿಲ್ಲ. ಸುಖ ದುಃಖಗೆಳೆರಡೂ ಒಂದೇ ವ್ಯಕ್ತಿಯಲ್ಲಿ ಇದ್ದರೆ, ಇವೆರಡೂ ಒಬ್ಬನಿಗೇ ಏಕಕಾಲದಲ್ಲಿ ಉಂಟಾಗುವುದು. ಆದರೆ ಸುಖ ದುಃಖಗಳು ನಿಯತವಾಗಿ ಬೇರೆ ಬೇರೆಯವರಲ್ಲಿ ಕಂಡು ಬರುವುದರಿಂದ ಆತ್ಮ ಭೇದವು ಸಿದ್ಧವಾಗಿದೆ.

## ಸೂ. 51 ಅತು ದೇಹ ಭೇದತ್ತಾಲೇ ಎನ್ನಿಲ್.

ಈರೀತಿಯಾದ ಸುಖ ದುಃಖ ವ್ಯವಸ್ಥೆಗೆ ಕಾರಣ ದೇಹ ಭೇಧ ಎಂಬುವವರ ಅಭಿಪ್ರಾಯವನ್ನು ಇಲ್ಲಿ ತಿಳಿಸುತ್ತಾರೆ.

## ಸೂ. 52 ಸೌಭರಿಶರೀರತ್ತಿಲುಮ್ ಅತು ಕಾಣವೇಣುಮ್.

ಮೇಲಿನ ವಾದವು ಉಪಪನ್ನ ಅಲ್ಲ ಎಂದು ನಿರೂಪಿಸುತ್ತಾರೆ. ದೇಹಭೇದವು ಸುಖ ದುಃಖ ನಿಯಮಕ್ಕೆ ಕಾರಣವಾಗಿದ್ದರೆ ಅನೇಕ ದೇಹ ಪರಿಗ್ರಹಮಾಡಿದ ಸೌಭರಿ ಶರೀರದಲ್ಲೂ ಆ ನಿಯಮವನ್ನು ಕಾಣಬೇಕು. ದೇಹ ಭೇದವು ಸುಖ ದುಃಖಕ್ಕೆ ಕಾರಣವಲ್ಲ ಎನ್ನುವುದಾದರೆ, ಜನ್ಮಾಂತರದ ಅನುಭವವನ್ನು ಈ ಜನ್ಮದಲ್ಲಿ ಸ್ಮರಿಸಬೇಕಲ್ಲ ಎಂದರೆ, ಸ್ಮರಿಸದೇ ಇರಲು ಕಾರಣ ಸಂಸ್ಕಾರದ ಉದಯವಾಗದೇ ಇರುವುದು, ಅಥವಾ ಸಂಸ್ಕಾರವು ನಾಶವಾಗುವುದೇ ಆಗಿದೆ. ಬೇರೆ ಶರೀರದಲ್ಲಿ ಸುಖ ದುಃಖ ಸ್ಮೃತ್ಯಾದಿಗಳಿಲ್ಲದೇ ಇರುವುದು, ಅನುದಯ ಅಥವಾ ನಾಶ ಇವೆರಡರಲ್ಲಿ ಒಂದು ಎಂದರೆ, ಯಾವ ಶರೀರದಲ್ಲೂ ಸ್ಮೃತಿ ಇಲ್ಲವಾಗಬೇಕು. ಆದ್ದರಿಂದ ಸುಖ ದುಃಖ ನಿಯಮಕ್ಕೆ ಕಾರಣ ಶರೀರ ಭೇದ ಎನ್ನುವಂತಿಲ್ಲ.

## ಸೂ. 53 ಒರುವನ್ ಸಂಸರಿಕ್ಕೈಯುಮ್, ಒರುವನ್ ಮುಕ್ತನಾಕ್ಕೈಯುಮ್ ಒರುವನ್ ಶಿಷ್ಯನಾಕ್ಕೈಯುಮ್, ಒರುವನ್ ಆಚಾರ್ಯ ನಾಕ್ಕೈಯುಂ ಕೂಡಾದು.

ಸುಖಾ ದುಃಖಾನುಪತ್ತಿ ಮಾತ್ರವಲ್ಲದೆ ಏಕಾತ್ಮವಾದ ನಿರಸನಕ್ಕೆ ಕಾರಣವಾದ ಇತರ ವಿಷಯಗಳನ್ನು ಇಲ್ಲಿಂದ ಪ್ರಾರಂಭಿಸಿ ಮುಂದಿನ 6 ಸೂತ್ರಗಳಲ್ಲಿ ಪ್ರತಿಪಾದಿಸುತ್ತಾರೆ.

ಇರುವುದು ಒಂದೇ ಆತ್ಮವಾದರೆ

**ಅನೇಕ ಜನ್ಮ ಸಾಹಸ್ರೀಂ ಸಂಸಾರ ಪದವೀಂ ವ್ರಜನ್।**
**ಮೋಹಾಶ್ರಮಂ ಪ್ರಯಾತೋಽಸೌ ವಾಸನಾರೇಣು ಕುಂಠಿತಃ।** [1]

ಎಂಬಂತೆ ಒಬ್ಬ ಸಂಸಾರದಲ್ಲಿರುವಾಗ ಇನ್ನೊಬ್ಬ ಮುಕ್ತನಾಗುವುದೂ

**ತದ್ವಿಜ್ಞಾನಾರ್ಥಂ ಸ ಗುರುಮೇವಾ ಭಿಗಚ್ಛೇತ್ ಸಮಿತ್ಪಾಣಿಃ।**
**ಶ್ರೋತ್ರಿಯಂ ಬ್ರಹ್ಮನಿಷ್ಠಮ್। ತಸ್ಮೈ ಸವಿದ್ವಾನುಪಸನ್ನಾಯ।**
**ಸಮ್ಯಕ್ ಪ್ರಶಾಂತ ಚಿತ್ತಾಯ ಶಮಾನ್ವಿತಾಯ। ಯೇನಾಕ್ಷರಂ ಪುರುಷಂ ವೇದ।**
**ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್।** [2]

ಎಂಬಂತೆ ಒಬ್ಬನು ಶಿಷ್ಯನಾಗಿದ್ದು ಉಪಸತ್ತಿ ಮಾಡಲು, ಒಬ್ಬನು ಆಚಾರ್ಯನಾಗಿದ್ದು ಅವನಿಗೆ ಉಪದೇಶಿಸುವುದು ಉಪಪನ್ನವಾಗುವುದಿಲ್ಲ.

## ಸೂ. 54 ವಿಷಮಸೃಷ್ಟಿಯುಂ ಕೂಡಾದು.

ಏಕಾತ್ಮವಾದರೆ ದೇವತಿರ್ಯಗಾದಿರೂಪದಿಂದ ಕೆಲವು ಸುಖೋತ್ತರವಾಗಿಯೂ, ಕೆಲವು ದುಃಖೋತ್ತರವಾಗಿಯೂ, ಕೆಲವು ಸುಖದುಃಖ ಮಿಶ್ರಿತವಾಗಿಯೂ ಹೀಗೆ ಲೋಕದಲ್ಲಿ ಪದಾರ್ಥಗಳನ್ನು ಪರಮಾತ್ಮನು ವಿಷಮವಾಗಿ ಸೃಷ್ಟಿಸುವಂತಿಲ್ಲ. ಆದರೆ ಜೀವಭೇದವೂ, ಕರ್ಮತಾರತಮ್ಯವೂ ವಿಷಮ ಸೃಷ್ಟಿಗೆ

ಕಾರಣ ವಾಗಿದೆ. ಆತ್ಮರುಗಳು ಬೇರೆ ಬೇರೆಯಾಗಿ ಬಹುವಾಗಿರುವುದಿಂದಲೂ ಅವರವರ ಕರ್ಮ ಬೇರಾಗಿರುವುದರಿಂದಲೂ ಹೀಗೆ ವಿಷಮ ಸೃಷ್ಟಿ ಆಗುತ್ತದೆ ಎಂದರ್ಥವಾಗಿದೆ.

## ಸೂ. 55 ಆತ್ಮ ಭೇದಮ್ ಶೊಲ್ಲುಕಿರ ಶ್ರುತಿಯೋಡುಮ್ ವಿರೋಧಿಕ್ಕುಮ್.

ಏಕಾತ್ಮ ವಾದವು ಯುಕ್ತಿಗಳಿಂದ ಮಾತ್ರವಲ್ಲದೆ, ಶ್ರುತಿಗಳಿಂದಲೂ ವಿರೋಧಿಸಲ್ಪಡುತ್ತದೆ.

'ನಿತ್ಯೋ ನಿತ್ಯಾನಾಂ ಚೇತನ ಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್'[1] ಎಂದು ಆತ್ಮ ಭೇದವನ್ನು ಹೇಳುವ ಶ್ರುತಿ ವಾಕ್ಯದಿಂದ ಏಕಾತ್ಮವಾದ ಪಕ್ಷಕ್ಕೆ ವಿರೋಧ ಏರ್ಪಡುತ್ತದೆ.

## ಸೂ. 56 ಶ್ರುತಿ ಔಪಾಧಿಕ ಭೇದತ್ತೈ ಚೊಲ್ಲುಗಿರದು, ಎನ್ನವೊಣ್ಣಾತು.

'ಭೋಕ್ತಾ ಭೋಗ್ಯಮ್ ' ಎಂದೂ 'ಪೃಥಗಾತ್ಮಾನಮ್' ಎಂದೂ 'ಜ್ಞಾ ಜ್ಞೌದ್ವಾವಜಾನೀಶನೀಶೌ' ಎಂದೂ 'ಅನ್ಯೋಂತರ ಆತ್ಮಾ ವಿಜ್ಞಾನಮಯಃ'[1] ಎಂದೂ ಜೀವೇಕತ್ವವನ್ನು ಪ್ರತಿಪಾದಿಸುವ ಶ್ರುತಿಗಳಿಗೂ ಈ ಮೇಲಿನ 'ನಿತ್ಯೋನಿತ್ಯಾನಾಂ' ಎಂಬ ಶ್ರುತಿಗೂ ವಿರೋಧ ಬರುತ್ತದೆ. ಆದ್ದರಿಂದ 'ನಿತ್ಯೋನಿತ್ಯಾನಾಂ' ಎಂಬಲ್ಲಿ ಹೇಳುವ ಭೇಧ ಔಪಾಧಿಕವಾದದ್ದು ಎಂದು ಹೇಳಬಾರದು.

ಔಪಾಧಿಕವೆಂದರೆ -ದೇವ ಮನಾಷ್ಯಾದಿ ಭೇದ, ಕಾಮಕ್ರೋಧಾದಿ ಭೇದಗಳು.

(ಯಾವುದಾದರೂ ಒಂದು ಕಾರಣದಿಂದ ಉಂಟಾಗುವುದನ್ನು ಔಪಾಧಿಕ ಎನ್ನಲಾಗುತ್ತದೆ.)

## ಸೂ. 57 ಮೋಕ್ಷದಶೈಯಿಲುಮ್ ಭೇದಮುಣ್ಡಾ ಕೈಯಾಲೇ.

ಭೇದವು ಔಪಾಧಿಕವಲ್ಲವೆನ್ನಲು ಕಾರಣವನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ.

'ಸದಾ ಪಶ್ಯಂತಿ';[1] 'ಮಮಸಾಧರ್ಮ್ಯಮಾಗತಾಃ';[2] 'ಮುಕ್ತಾನಾಂ ಪರಮಾಗತಿಃ';[3] 'ಸಾಯುಜ್ಯ ಪ್ರತಿಪನ್ನಾಯೇ';[4] 'ಯಸ್ಮಿನ್ ಪದೇ ಪದೇ ವಿರಾಜಂತೇ ಮುಕ್ತಾಸ್ಸಂಸಾರ ಬಂಧನೈಃ'[5] ಎಂದು ಮೋಕ್ಷ ದೆಸೆಯಲ್ಲಿ ಆತ್ಮಭೇದವನ್ನು ಶ್ರುತಿ ಸ್ಮೃತಿಗಳು ಹೇಳುವುದರಿಂದ ಭೇದಔಪಾಧಿಕವಲ್ಲ. ಮೋಕ್ಷದೆಸೆಯೆಂದರೆ- ಸಕಲ ಉಪಾಧಿಗಳಿಂದ ವಿನಿರ್ಮುಕ್ತನಾಗುವುದು. ಆ ದೆಸೆಯಲ್ಲೂ ಆತ್ಮಭೇದ ಶ್ರುತಿಸಿದ್ಧವಾದ್ದರಿಂದ 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯೂ ಆತ್ಮಭೇದವನ್ನೇ ಹೇಳುತ್ತಿದೆ ಎಂಬುದನ್ನು ನಿರೂಪಿಸಲಾಯಿತು.

## ಸೂ. 58-59 ಅಪ್ಪೋದು ದೇವ ಮನುಷ್ಯಾದಿ ಭೇದಮುಮ್, ಕಾಮಕ್ರೋಧಾದಿ ಭೇದಮುಮ್ ಕಳಿನ್ದು, ಆತ್ಮಾಕ್ಕಳ್ ಸ್ವರೂಪಮತ್ಯನ್ತಂ ಸಮಮಾಯ್ ಒರುಪಡಿಯಾಲುಮ್ ಭೇದಮ್ ಶೊಲ್ಲವೊಣ್ಣಾತಪಡಿಯಿರುನ್ದದೇಯಾಕಿಲುಮ್; ಪರಿಮಾಣಮುಮ್, ಎಡೈಯುಮ್, ಆಕಾರಮುಮ್ ಒತ್ತಿರುಕ್ಕಿರ ಪೊರ್ಕುಂಡಂಗಳ್, ರತ್ನಂಗಳ್, ವ್ರೀಹಿಕಳ್ ತೊಡಕ್ಕಮಾನವತ್ತುಕ್ಕು ಭೇದಮುಣ್ಡಾಕಿರಾಪ್ಪೋಲೆ ಸ್ವರೂಪಭೇದಮುಮ್ ಸಿದ್ಧಮ್.

## ಸೂ. 65 ಅತಿಲ್ ಶಿಲರುಡ್ಯೈಯ ಜ್ಞಾನಮ್ ಎಪ್ಪೋತುಮ್ ವಿಭುವಾಯಿರುಕ್ಕುಮ್, ಶಿಲರುಡ್ಯೈಯ ಜ್ಞಾನಮ್ ಎಪ್ಪೋತುಂ ಅವಿಭುವಾಯಿರುಕ್ಕುಮ್, ಶಿಲರುಡ್ಯೈಯ ಜ್ಞಾನಮ್ ಒರುಕಾಲ್ ವಿಭುವಾಯ್ ಒರುಕಾಲ್ ಅವಿಭುವಾಯಿರುಕ್ಕುಮ್.

ಸಕಲ ಚೇತನರ ಜ್ಞಾನವೂ ಒಂದೇ ವಿಧವಾಗಿಲ್ಲದಿರುವುದನ್ನೂ, ಸಂಕೋಚ ಅಸಂಕೋಚ ನಿಬಂಧನವಾದ ತಾರತಮ್ಯವನ್ನೂ ಇಲ್ಲಿ ತಿಳಿಸುತ್ತಾರೆ.

'ಅಯರ್ವ್ವರುಂ ಅಮರರ್‌ಗಳ್' ಎಂಬಂತೆ ಭಗವತ್ ಜ್ಞಾನಕ್ಕೆ ಒಂದು ದಿನವೂ ಸಂಕೋಚವಿಲ್ಲದೇ ಪರಮಾತ್ಮನ ಸ್ವರೂಪ, ರೂಪ ಗುಣ, ವಿಭೂತಿಗಳನ್ನು ಸದಾ ಅನುಭವಿಸುವ ನಿತ್ಯಸೂರಿಗಳಜ್ಞಾನ ಯಾವಾಗಲೂ ವಿಭುವಾಗಿರುತ್ತದೆ. 'ಪೊಯ್ ನಿನ್ನ ಜ್ಞಾಲಮುಮ್ ಪೊಲ್ಲಾವೊಳುಕ್ಕುಂ ಅಳುಕ್ಕುಡಮ್ಬುಂ' ಎಂಬಂತಿರುವ ಬದ್ಧರ ಜ್ಞಾನವು ಕರ್ಮಾನುಗುಣವಾಗಿ ಸಂಕೋಚ ವಿಕಾಸಗಳಿಂದ ಕೂಡಿ ಯಾವಾಗಲೂ ಅವಿಭುವಾಗಿರುತ್ತದೆ.

'ಕರೈಕ್ಕಂಡೋರ್' ಎಂಬಂತೆ ಭಗವತ್ ಪ್ರಸಾದದಿಂದ ಸಂಸಾರ ಸಾಗರವನ್ನು ದಾಟಿ ಆಚೆ ದಡವನ್ನು ಸೇರಿದವರ ಜ್ಞಾನವು ಪೂರ್ವಾವಸ್ಥೆಯಲ್ಲಿ (ಸಂಸಾರದಲ್ಲಿರುವಾಗ) ಅವಿಭುವಾಗಿಯೂ, ಉತ್ತಾರಾವಸ್ಥೆಯಲ್ಲಿ (ಮುಕ್ತರಾದಾಗ) 'ಸರ್ವಂ ಹ ಪಶ್ಯಃ ಪಶ್ಯತಿ' ಎಂಬಂತೆ ವಿಭುವಾಗಿಯೂ ಇರುತ್ತದೆ.

## ಸೂ. 66 ಜ್ಞಾನಮ್ ನಿತ್ಯಮಾಕಿಲ್ 'ಎನಕ್ಕು ಜ್ಞಾನಮ್ ಪಿರನ್ದದು, ನಶಿತ್ತತು' ಎನ್ಗಿರಪಡಿ ಎನ್ನೆನ್ನಿಲ್.

'ನನಗೀಗ ಜ್ಞಾನ ಉತ್ಪತ್ತಿಯಾಯಿತು. ನನಗೀಗ ಜ್ಞಾನ ನಾಶವಾಯಿತು' ಎಂಬುದಾಗಿ ಹೇಳುವಾಗ ಜ್ಞಾನವು ಉತ್ಪತ್ತಿ ವಿನಾಶಕ್ಕೊಳಪಟ್ಟಂತೆ ಕಾಣುವಾಗ ಜ್ಞಾನಕ್ಕೆ ನಿತ್ಯತ್ವವು ಹೇಗೆ ಸಿದ್ಧಿಸುತ್ತದೆ ಎಂಬ ಜಿಜ್ಞಾಸು ಪ್ರಶ್ನೆಯನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ.

## ಸೂ. 67 ಇನ್ದ್ರಿಯದ್ವಾರಾ ಪ್ರಸರಿತ್ತು ,ವಿಷಯಂಗಳೈ ಗ್ರಹಿಪ್ಪತು ಮಾಳುವತಾಕೈಯಾಲೇ ಅಪ್ಪಡಿಶೊಲ್ಲಕ್ಕುರೈಯಿಲ್ಲೈ.

ಮೇಲಿನ ಸೂತ್ರದಲ್ಲಿನ ಪ್ರಶ್ನೆಗೆ ಇಲ್ಲಿ ಉತ್ತರಿಸಲಾಗಿದೆ.

'ಸರ್ವಂ ಹ ಪಶ್ಯಃ ಪಶ್ಯತಿಃ'; 'ಸಚಾನನ್ತ್ಯಾಯ ಕಲ್ಪತೇ'[1] ಎಂಬಂತೆ ಮುಕ್ತದಶೆಯಲ್ಲಿ ಸರ್ವವಿಷಯಿಕವಾಗಿ ಹೇಳುವುದರಿಂದ ಸರ್ವವನ್ನೂ ಸಾಕ್ಷಾತ್ಕರಿಸಲು ಅರ್ಹವಾಗಿದ್ದರೂ. 'ಯಯಾಕ್ಷೇತ್ರಜ್ಞ ಶಕ್ತಿಸ್ಸಾವೇಷ್ಟಿತಾ ನೃಪ ಸರ್ವಗಾ'[2] ಎಂಬಂತೆ ಕರ್ಮದಿಂದ ಸಂಕುಚಿತವಾಗಿ

'ತಯಾ ತಿರೋಹಿತತ್ವಾಚ್ಚ ಶಕ್ತಿಃ ಕ್ಷೇತ್ರಜ್ಞಸಂಜ್ಞಿತಾ।[3]
ಸರ್ವಭೂತೇಷು ಭೂಪಾಲ ತಾರತಮ್ಯೇ ನವರ್ತತೇ।
ಅಪ್ರಾಣಿಮತುಸ್ಸ್ವಲ್ಪಾಸಾ ಸ್ಥಾವರೇಷು ತತೋಧಿಕಾ[3]

ಎಂಬಂತೆ ಕರ್ಮಾನುಗುಣವಾಗಿ ತಾರತಮ್ಯವನ್ನು ಹೊಂದಿ

ಇಂದ್ರಿಯಾಣಾಂ ಹಿ ಸರ್ವೇಷಾಂ ಯದ್ಯೇಕಂ ಕ್ಷರತೀಂದ್ರಿಯಮ್।
ತೇನಾಸ್ಯಕ್ಷರತಿ ಪ್ರಜ್ಞಾ ದೃತೇಃ ಪಾದಾದಿವೋದಕಮ್।[4]

ಎಂಬಂತೆ ಇಂದ್ರಿಯ ದ್ವಾರಾ ಹೊರಟು ವಿಷಯಗಳನ್ನು ಗ್ರಹಿಸುವುದು, ಹಿಂತಿರುಗುವುದರಿಂದ ಅಂತಹ ವಿಕಾಸದಿಂದಲೂ, ಸಂಕೋಚದಿಂದಲೂ ಏರ್ಪಟ್ಟ ಪ್ರಕಾಶ ಅಪ್ರಕಾಶಗಳಿಂದ 'ಉತ್ಪತ್ತಿಯಾಯಿತು', 'ನಾಶವಾಯಿತು' ಎನ್ನಲಾಗುತ್ತದೆ.

## ಸೂ. 68 ಇತುತಾನ್ ಏಕವಮಾಯಿರುಕ್ಕಚ್ಚೈತೇ ನಾನಾವಾಯ್ ತೋತ್ತುಕಿರತು ಪ್ರಸರಣಭೇದತ್ತಾಲೇ.

ಇಂದ್ರಿಯಾದ್ವಾರಾ ಪ್ರಸರಿಸುವ ಜ್ಞಾನವು ಒಂದೇ ಪ್ರಕಾರವಾಗಿರುವಾಗ, ವಿಷಯ ಗ್ರಹಣ ವೇಳೆಯಲ್ಲಿ ಪ್ರಕಾಶಿಸುವಾಗ ದರ್ಶನ, ಶ್ರವಣಾದಿ ಸಂಜ್ಞಾ ಭೇದಗಳನ್ನು ಹೊಂದಿ ಅನೇಕತ್ವೇವ ಪ್ರಕಾಶಿಸುವುದು ಹೇಗೆ ಎಂಬುದನ್ನು ಈ ಸೂತ್ರದಲ್ಲಿ ವಿವರಿಸುತ್ತಾರೆ.

ಏಕಪ್ರಕಾರವಾಗಿ ಪ್ರಸರಿಸದೆ, ಕಣ್ಣು ಕಿವಿ ಮುಂತಾದ ಅನೇಕ ಇಂದ್ರಿಯದ್ವಾರಾ ಪ್ರಸರಿಸಿ, ರೂಪಶಬ್ದಾದಿ ಅನೇಕ ವಿಷಯಗಳನ್ನು ಗ್ರಹಿಸುವ ಇದಕ್ಕೆ ದರ್ಶನ, ಶ್ರವಣಾದಿ ಸಂಜ್ಞಾ ಭೇದದಿಂದ ತೋರುವ ನಾನಾತ್ವವು ಪ್ರಸರಣ ಭೇದದಿಂದ ಏರ್ಪಟ್ಟಿದ್ದಾಗಿದೆ.

ಇದರಿಂದ ನಿತ್ಯವಾದ ಜ್ಞಾನಕ್ಕೆ ಉತ್ಪತ್ತಿ ವಿನಾಶ ಹೇತುವನ್ನು ನಿರೂಪಿಸಿದ ನಂತರ ಪ್ರಾಸಂಗಿಕವಾಗಿ ಅದರ ನಾನಾತ್ವೇನ ಪ್ರಕಾಶನ ಹೇತುವೂ ಹೇಳಲ್ಪಟ್ಟಿತು, ಆತ್ಮನ ಧರ್ಮ ಭೂತ ಜ್ಞಾನ ನಿತ್ಯತ್ವವು

ನ ಹಿ ವಿಜ್ಞಾತುರ್ ವಿಜ್ಞಾತೇರ್ವಿಪರಿಲೋಪೋ ವಿದ್ಯತೇ।
ನ ಹಿ ದೃಷ್ಟೇರ್ ವಿಪರಿಲೋಪೋ ವಿದ್ಯತೇ [1]
ಜ್ಞಾನಂ ವೈರಾಗ್ಯ ಮೈಶ್ವರ್ಯಂ ಧರ್ಮಶ್ಚ ಮನುಜೇಶ್ವರ।
ಆತ್ಮನೋ ಬ್ರಹ್ಮ ಭೂತಸ್ಯ ನಿತ್ಯಮೇತಚ್ಚತುಷ್ಟಯಂ। [1]
ಯಥೋದಪಾನಕರಣಾತ್ಕ್ರಿಯತೇನಜಲಾಮ್ಬರಮ್।
ಸದೇವ ನೀಯತೇ ವ್ಯಕ್ತಿಮು ಸತಸ್ಸಂಭವಃ ಕುತಃ।
ತಥಾ ಹೇಯ ಗುಣಧ್ವಂ ಸಾದವಭೋಧಾದಯೋಗುಣಾಃ।
ಪ್ರಕಾಶ್ಯನ್ತೇನ ಜನ್ಯನ್ತೇ ನಿತ್ಯಾ ಏವಾತ್ಮನೋಹಿತೇ। [2] ಎಂದು ಶ್ರುತಿ ಸ್ಮೃತ್ಯಾದಿಗಳಲ್ಲಿ ಹೇಳಲ್ಪಟ್ಟಿವೆ.

## ಸೂ. 69 ದ್ರವ್ಯಮಾನಪಡಿ ಎನ್ನೆನ್ನಿಲ್.

ಜ್ಞಾನ, ನಿತ್ಯತ್ವಗಳನ್ನು ತಿಳಿಸಿದ ನಂತರ ಆತ್ಮನ ದ್ರವ್ಯತ್ವವನ್ನು ಕುರಿತ ಜಿಜ್ಞಾಸು ಪ್ರಶ್ನೆಯನ್ನು ಅನುವಾದಿಸುತ್ತಾರೆ.

## ಸೂ. 70 ಕ್ರಿಯಾಗುಣಜಳುಕ್ಕಾಶ್ರಯಮಾಯ್, ಅಜಡಮಾಯಿರುಕ್ಕೈಯಾಲೇ ದ್ರವ್ಯಮಾಕಕ್ಕಡವೆದು.

ಕಾರಣಗಳನ್ನು ನಿರೂಪಿಸಿ ಆತ್ಮನ ದ್ರವ್ಯತ್ವವನ್ನು ಈ ಸೂತ್ರದಲ್ಲಿ ಪ್ರತಿಪಾದಿಸುತ್ತಾರೆ.
(ಕ್ರಿಯಾ) - ಎಂದರೆ ಸಂಕೋಚ ವಿಕಾಸಗಳು.

(ಗುಣ) ವೆಂದರೆ ಸಂಯೋಗ, ವಿಯೋಗಗಳು.
(ಅಜಡತ್ವ) ವೆಂದರೆ ಸ್ವಯಂ ಪ್ರಕಾಶತ್ವವು.

**'ಕ್ರಿಯಾಶ್ರಯೋ ದ್ರವ್ಯಮ್, ಗುಣಾಶ್ರಯೋ ದ್ರವ್ಯಮ್'**[1] ಎಂದು ದ್ರವ್ಯ ಲಕ್ಷಣವು ಹೇಳಲ್ಪಡುತ್ತದೆ. ಕ್ರಿಯಾಶ್ರಯತ್ವ ಹಾಗೂ ಗುಣಾಶ್ರಯತ್ವ ಇವು ಒಂದೊಂದೇ ದ್ರವ್ಯತ್ವ ಸಾಧಕವಾಗಿದೆ. ಇವುಗಳೊಡನೆ ಅಜಡತ್ವವನ್ನೂ ಹೇಳುವುದರಿಂದ ಅದೂ ದ್ರವ್ಯತ್ವ ಸಾಧಕವೆಂಬುದು ಸೂತ್ರಕಾರರ ಅಭಿಪ್ರಾಯವಾಗಿದೆ.

ಇದು ಹೇಗೆಂದರೆ ಜಡವಸ್ತುಗಳಲ್ಲಿ ದ್ರವ್ಯ, ಅದ್ರವ್ಯಗಳೆರಡೂ ಇವೆ. ಅಜಡವಸ್ತುಗಳಲ್ಲಿ ಅದ್ರವ್ಯವಾಗಿರುವುದು ಯಾವುದೂ ಇಲ್ಲ. ಆದ್ದರಿಂದ **'ಜ್ಞಾನಮ್ ದ್ರವ್ಯಂ, ಅಜಡತ್ವಾತ್'**. **'ಯದಜಡಮ್ ತದ್ದ್ರವ್ಯಮ್'** **'ಯಥಾ ಆತ್ಮಾದಿ'** ಎಂದು, ಅಜಡತ್ವದಿಂದಲೇ ಎಂದು ದ್ರವ್ಯತ್ವವನ್ನುಸಾಧಿಸಬಹುದು. ಆದ್ದರಿಂದ ಆತ್ಮವು ಅಜಡವಾಗಿ, ಸಂಕೋಚ ವಿಕಾಸಗಳಿಗೂ,ಸಂಯೋಗ ವಿಯೋಗಾದಿಗಳಿಗೂ ಆಶ್ರಯವಾಗಿರುವುದರಿಂದ ಇದು ದ್ರವ್ಯ ಎಂದು 'ತತ್ವಶೇಖರ' ದಲ್ಲಿ ಇವರೇ ತಿಳಿಸಿದ್ದಾರೆ.

ಹೀಗೆ ದ್ರವ್ಯ ಎನ್ನುವುದಾದರೆ ಇದಕ್ಕೆ ಆತ್ಮ ಗುಣತ್ವವು ಹೇಗೆ ಹೊಂದುತ್ತದೆ ಎಂದರೆ ನಿತ್ಯವೂ ಗುಣಗಳಿಗೆ ಆಶ್ರಯವಾಗಿರುವುದರಿಂದ ಎನ್ನಲಾಗಿದೆ.

**ಆಶ್ರಯಾದನ್ಯತೋಽವೃತ್ತೇರಾಶ್ರಯೇಣ ಸಮನ್ವಯಾತ್।**
**ದ್ರವ್ಯತ್ವಂ ಚ ಗುಣತ್ವಂ ಚ ಜ್ಞಾನ ಸ್ಯೈವೋಪಪದ್ಯತೇ।**[2]

ಎಂದು ಆಳವಂದಾರರೂ ಅನುಗ್ರಹಿಸಿದ್ದಾರೆ. **'ಆಶ್ರಯಾದನ್ಯತೋಽವೃತ್ತಿತ್ವಮ್'** ಎಂಬುದು ಕ್ರಿಯಾಶಯತ್ವವನ್ನು ಹೇಳಿದಾಗಲೇ ಹೇಳಿದಂತಾಯಿತು. ಇದು ಜ್ಞಾನಕ್ಕೆ ಮಾತ್ರವಲ್ಲದೆ ದೀಪಾದಿ ತೇಜಃ ಪದಾರ್ಥಗಳಿಗೂ ಒಪ್ಪುತ್ತದೆ. ಆದ್ದರಿಂದ ದ್ರವ್ಯತ್ವ ಗುಣತ್ವಗಳೆರಡೂ ಜ್ಞಾನಕ್ಕೆ ಉಪಪನ್ನವಾಗುತ್ತದೆ.

## ಸೂ. 71 ಅಜಡಮಾಕಿಲ್ ಸುಷುಪ್ತಿ ಮೂರ್ಛಾದಿಕಳಿಲ್ ತೋತ್ತವೇಣ್ಡಾವೋವೆನ್ನಿಲ್.

ಹೀಗೆ ಜ್ಞಾನಕ್ಕೆ ತಾವು ತಿಳಿಸಿದ ಅಜಡತ್ವ ವಿಷಯವಾದ ಜಿಜ್ಞಾಸು ಪ್ರಶ್ನೆಯನ್ನು ಅನುವದಿಸುತ್ತಾರೆ. ಈ ಸೂತ್ರದಲ್ಲಿ ಜ್ಞಾನವು ಸ್ವಯಂಪ್ರಕಾಶವಾಗಿರುವುದಾದರೆ, ಯಾವಾಗಲೂ ಪ್ರಕಾಶಿಸುತ್ತಿರಬೇಕಲ್ಲವೇ? ಆದರೆ ಅದು ನಿದ್ರೆ, ಮೂರ್ಛೆ ಇತ್ಯಾದಿ ಅವಸ್ಥೆಗಳಲ್ಲಿ ಪ್ರಕಾಶಿಸದೆ ಇದೆಯಲ್ಲ ಎಂಬುದೇ ಜಿಜ್ಞಾಸು ಪ್ರಶ್ನೆ.

## ಸೂ. 72 ಪ್ರಸರಣ ಮಿಲ್ಲಾ ಮೈಯಾಲೇ ತೋನ್ರಾತು.

ಜ್ಞಾನವು ತನಗೆ ಆಶ್ರಯವಾದ ಆತ್ಮಕ್ಕೆ ಸ್ವಯಂಮೇವ ಪ್ರಕಾಶಿಸುವುದು, ವಿಷಯಗ್ರಹಣವೇಳೆಯಲ್ಲಿ. ನಿದ್ರಾ, ಮೂರ್ಛಾದಿ ಅವಸ್ಥೆಗಳಲ್ಲಿ; ತಮೋಗುಣಾದಿಗಳ ಅಭಿಭವದಿಂದ ಸಂಕುಚಿತವಾಗಿ, ತಿರೋಹಿತವಾದ ಮಣಿ ಪ್ರಕಾಶದಂತೆ ಪ್ರಸರಣವಿಲ್ಲದ್ದರಿಂದ ಪ್ರಕಾಶಿಸುವುದಿಲ್ಲ.

## ಸೂ. 73 ಆನಂದರೂಪಮಾಯಿರುಕ್ಕೈಯಾವತು-ಜ್ಞಾನಮ್ ಪ್ರಕಾಶಿಕ್ಕುಂ ಪೋದು ಅನುಕೂಲಮಾಯಿರುಕ್ಕೈ.

ಇನ್ನು ಮುಂದೆ ಇದರ ಆನಂದ ಸ್ವರೂಪತ್ವವನ್ನು ಉಪಪಾದಿಸುತ್ತಾರೆ. ಜ್ಞಾನವು ಪ್ರಕಾಶಿಸುವ ವೇಳೆ ಎಂದರೆ- ಸ್ವಾಶ್ರಯಕ್ಕೆ (ಆತ್ಮನಿಗೆ) ವಿಷಯಗಳನ್ನು ದರ್ಶಿಸುವಾಗ ಎಂದರ್ಥ. ಆಗಲೇ ಇದು ಪ್ರಕಾಶಿಸುವುದು.

ಆ ಅವಸ್ಥೆಯಲ್ಲಿ ಆಗ ಅನುಕೂಲವಾಗಿರುವುದೆಂದರೆ-ಆ ಎಲ್ಲ ವಿಷಯಗಳೂ ಅನುಕೂಲವಾಗಿಯೇ ತೋರುವುದು. ಅವುಗಳನ್ನು ವಿಷಯಾಕರಿಸಿದ ಈ ಜ್ಞಾನವು ಸ್ವಾಶ್ರಯಕ್ಕೆ (ಆತ್ಮನಿಗೆ) ಸುಖರೂಪವಾಗಿರುವಿಕೆ. ಅದೇ ಇದರ ಆನಂದಸ್ವರೂಪ. ಆತ್ಮನ ಸ್ವರೂಪಕ್ಕೆ ಧರ್ಮಭೂತಜ್ಞಾನವು ತೋರಿಸುವ ಎಲ್ಲಾ ವಿಷಯಗಳೂ ಅನುಕೂಲವಾಗಿರುವಿಕೆಯೇ ಆತ್ಮನ ಆನಂದ ಸ್ವರೂಪ ಎಂದರ್ಥ.

## ಸೂ. 74 ವಿಷಶಸ್ತ್ರಾದಿಕಳ್ಳೆ ಕಾಟ್ಟುಂಪೋದು ಪ್ರತಿಕೂಲಮಾಯಿರುಕ್ಕೈಕ್ಕಡಿ ದೇಹಾತ್ಮ ಭ್ರಮಾದಿಗಳ್.

ಆದರೆ ವಿಷಶಸ್ತ್ರಾದಿಗಳನ್ನು ತೋರಿಸುವಾಗ, ಅವುಗಳನ್ನು ವಿಷಯಾಕರಿಸಿದ ಜ್ಞಾನವು ಪ್ರತಿಕೂಲವಾಗಿರುತ್ತದೆಯಲ್ಲ ಎಂದರೆ ಆ ಜ್ಞಾನವು ದುಃಖ ರೂಪವಾಗಿರುವುದಕ್ಕೆ ಕಾರಣ ಅವುಗಳಲ್ಲಿ ಬಾಧಕತ್ವ ಬುದ್ಧಿಗೆ (ವಿಷ, ಶಸ್ತ್ರಗಳು ನನ್ನನ್ನು ಬಾಧಿಸುತ್ತವೆ ಎಂಬುದು) ಮೂಲವಾದ ದೇಹಾತ್ಮ ಭ್ರಮವೂ, ಕರ್ಮವೂ, ಈಶ್ವರಾತ್ಮಕ ಜ್ಞಾನರಾಹಿತ್ಯವೂ ಆಗಿದೆ.

## ಸೂ. 75 ಈಶ್ವರಾತ್ಮಕಮಾಕೈಯಾಲೇ ಎಲ್ಲಾ ಪದಾರ್ಥಂಗಳುಕ್ಕುಂ ಆನುಕೂಲ್ಯಮೇ ಸ್ವಭಾವಂ, ಪ್ರಾತಿಕೂಲ್ಯಮ್ ವನ್ದೇರಿ.

'ಜಗತ್ಸರ್ವಂ ಶರೀರಂ ತೇ';[1] 'ತಾನಿ ಸರ್ವಾಣಿ ತದ್ವಪುಃ';[2] 'ತತ್ಸರ್ವಂ ವೈ ಹರೇಃ ತನುಃ' [3] ಎಂದು ಸಕಲ ಪದಾರ್ಥಗಳೂ ಭಗವಚ್ಛರೀರವೆಂದು ಶಾಸ್ತ್ರಗಳು ಹೇಳುತ್ತವೆ. ಹೀಗೆ ಭಗವದಾತ್ಮಕವಾಗಿ ಕಾಣುವಾಗ ಎಲ್ಲಾ ಪದಾರ್ಥಗಳಿಗೂ ಅನುಕೂಲ್ಯವೇ ಸ್ವಭಾವವು. ಇವುಗಳಲ್ಲಿ ತೋರುವ ಪ್ರಾತಿಕೂಲ್ಯವು ದೇಹಾತ್ಮಭ್ರಮಾದಿಗಳಿಂದ ಆಗಾಮಿಯಾಗಿರುವುದು. (ಬಂದಿರುವುದು)

## ಸೂ. 76 ಮತ್ತೈಯಾನುಕೂಲ್ಯಮ್ ಸ್ವಾಭಾವಿಕಮಾಕಿಲ್, ಒರುವನುಕ್ಕೊರುಕ್ಕಾಲ್ ಓರಿಡತ್ತಿಲೇ ಅನುಕೂಲಂಗಳಾನ ಚಂದನ ಕುಸುಮಾದಿಕಳ್, ದೇಶಾಂತರೇ ಕಾಲಾಂತರೇ ಇವನ್ ತನಕ್ಕುಂ ಅದ್ದೇಶತ್ತಿಲೇ ಅಕ್ಕಾಲತ್ತಿಲೇ ವೇರೇ ಒರುವನುಕ್ಕುಮ್‌ಪ್ರತಿಕೂಲಂಗಳಾಕ ಕ್ಕೂಡಾತು.

ಹೀಗೆ ಈಶ್ವರಾತ್ಮಕವಾದ್ದರಿಂದ ಸಕಲ ಪದಾರ್ಥಗಳಿಗೂ ಅನುಕೂಲ್ಯವೇ ಸ್ವಭಾವವೆಂದು ಏಕೆ ತಿಳಿಯಬೇಕು. ಚಂದನ ಕುಸುಮಾದಿಗಳಲ್ಲಿನ ಆನುಕೂಲ್ಯವು ಸ್ವಾಭಾವಿಕವಲ್ಲವೇ? ಎಂಬ ಶಂಕೆಗೆ ಈ ಸೂತ್ರದಲ್ಲಿ ಉತ್ತರಿಸುತ್ತಾರೆ.

**(ಮತ್ತೈ ಆನುಕೂಲ್ಯಮ್ ಸ್ವಾಭಾವಿಕ ಮಾಕಿಲ್)** - ಮತ್ತೆ ಆನುಕೂಲ್ಯಂ-ಎಂದರೆ ಭಗವದಾತ್ಮಕವಾಗಿ ತಿಳಿದಾಗ ಬರುವ ಆನುಕೂಲ್ಯದ ಹೊರತಾಗಿ ಎಂದರ್ಥ. ಅಂದರೆ ಚಂದನ ಕುಸುಮಾದಿ ಪದಾರ್ಥಗಳಲ್ಲಿ ತೋರುವ ಆನುಕೂಲ್ಯವು. ಇದು ಆ ಪದಾರ್ಥಗಳಿಗೆ ಸ್ವಾಭವಿಕವಾದರೆ, ಅನುಭವಿಸುವ ಒಬ್ಬ ಭೋಕ್ತಾವಿಗೆ ಒಂದು ಕಾಲದಲ್ಲಿ ಒಂದು ದೇಶದಲ್ಲಿ ಅನುಕೂಲವಾಗಿರುವುದು. ಕಾಲಾಂತರದಲ್ಲಿ ದೇಶಾಂತರದಲ್ಲಿ ಅದೇ ಭೋಕ್ತಾವಿಗೆ ಪ್ರತಿಕೂಲವಾಗಿರುವುದು ಹೇಗೆ? ಅಥವಾ ಅದೇ ದೇಶ, ಅದೇ ಕಾಲದಲ್ಲಿ ಬೇರೆ ಭೋಕ್ತಾವಿಗೆ

ಪ್ರತಿಕೂಲವಾಗಿರುವುದು ಏಕೆ? (ಉದಾ. ಶೀತಲ ಕಾಲದಲ್ಲಿ ಚಂದನ ಪ್ರತಿಕೂಲವಾಗಿರುತ್ತದೆ) ಸ್ವಾಭಾವಿಕ ಆನುಕೂಲ್ಯವಿದ್ದರೆ ಎಲ್ಲ ಕಾಲ ಎಲ್ಲದೇಶದಲ್ಲಿ ಎಲ್ಲರಿಗೂ ಈ ಪದಾರ್ಥಗಳು ಅನುಕೂಲವಾಗಿರಬೇಕು. ಆದರೆ ಈ ರೀತಿ ಲೋಕದಲ್ಲಿ ಕಂಡುಬರುವುದಿಲ್ಲ. ಆದ್ದರಿಂದ ಭಗವದಾತ್ಮಕ ನಿಬಂಧನವಾದ ಆನುಕೂಲ್ಯವೇ ಸ್ವಾಭಾವಿಕವಾದದ್ದು.

**ವಸ್ತ್ವೇಕಮೇವ ದುಃಖಾಯ ಸುಖಾಯೇರ್ಷ್ಯಾಗ ಮಾಯ ಚ।**
**ಕೋಪಾಯಚಯತಸ್ತಸ್ಮಾತ್ ವಸ್ತುವಸ್ತ್ವಾತ್ಮಕಂ ಕುತಃ।**
**ತದೇವ ಪ್ರೀತಯೇ ಭೂತ್ವಾ ಪುನರ್ದುಃಖಾಯ ಜಾಯತೇ।**
**ತದೇವ ಕೋಪಾಯಯತಃ ಪ್ರಸಾದಾಯ ಚ ಜಾಯತೇ।**
**ತಸ್ಮಾದ್ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಮ್।** [1]

ಎಂದು ಈ ಅರ್ಥವು ಶ್ರೀ ಪರಾಶರಭಗವಾನರಿಂದ ವಿಶದೀಕರಿಸಲ್ಪಟ್ಟಿದೆ. ಆದ್ದರಿಂದ ವಿಷಶಸ್ತ್ರಾದಿಗಳು ಪ್ರತಿಕೂಲಗಳಾಗಿಯೂ, ಚಂದನ ಕುಸುಮಾದಿಗಳು ಅನುಕೂಲಗಳಾಗಿಯೂ ತೋರಿಬರುವುದು ದೇಹಾತ್ಮಭ್ರಮಾದಿಗಳಿಂದ. ಸರ್ವವೂ ಈಶ್ವರಾತ್ಮಕವಾದ್ದರಿಂದ ಎಲ್ಲಕ್ಕೂ ಆನುಕೂಲ್ಯವೇ ಸ್ವಭಾವವು.ಹೀಗೆ ಈಶ್ವರಾತ್ಮಕ ಆಕಾರದಿಂದ ಕಾಣುವಾಗ ಸರ್ವವಿಷಯ ಪ್ರಕಾಶನ ದೆಸೆಯಲ್ಲೂ ಜ್ಞಾನವು ಆನಂದರೂಪ ವಾಗಿರುತ್ತದೆ.

(ಸೂ:3. ಚಿತ್ತೆನ್ನಿರದು ಆತ್ಮಾವೈ) ಎಂದು ಮೊದಲಿಗೆ 'ಚಿತ್' ಶಬ್ದವಾದ ಆತ್ಮ ವಸ್ತುವನ್ನು ಉದ್ದೇಶಿಸಿ; ಅನಂತರ (ಸೂ: 4-ದೀಪಾದಿಲಕ್ಷಣಮಾಯ್) ಎಂದು ಪ್ರಾರಂಭಿಸಿ (ಶೇಷಮಾಯಿರುಕ್ಕುಮ್)ಎಂಬವರೆಗೆ ಆತ್ಮ ಸ್ವರೂಪ ಲಕ್ಷಣವನ್ನು ವಿವರಿಸಿದರು.

(ಸೂ:- 5 ದೇಹಾದಿವಿಲಕ್ಷಣಮಾನಪಡಿ ಎನ್ನೆನ್ನಿಲ್) ಪ್ರಾರಂಭಿಸಿ(ಸೂ:-4. ಶೇಷಮಾಕೈಯಾವತು) ಎಂದು ಹೇಳಲ್ಪಟ್ಟ ಲಕ್ಷಣವನ್ನು ಪರಿಶೀಲಿಸಿ ಅನಂತರ ಈ ರೀತಿಯಿರುವ ಆತ್ಮ ಸ್ವರೂಪವು ಬದ್ಧ, ಮುಕ್ತ, ನಿತ್ಯ ರೂಪೇಣ ಮೂರು ಪ್ರಕಾರಗಳಾಗಿರುವುದನ್ನೂ, ಬದ್ಧಾತ್ಮರಿಗೆ ಅವಿದ್ಯಾದಿಗಳು ಉಂಟಾಗಲು ಕಾರಣವನ್ನೂ, ಅದರ ನಿವೃತ್ತಿಕ್ರಮವನ್ನೂ ಮೂರು ವಿಧವಾದ ಆತ್ಮಗಳಲ್ಲಿ ಒಂದೊಂದೂ ಅನಂತವಾಗಿರುವುದನ್ನೂ, ಜೀವ ಅನಂತ್ಯವಾದವನ್ನು ಪ್ರತಿಭಟಿಸುವ ಏಕಾತ್ಮವಾದವನ್ನು ಯುಕ್ತಿಗಳಿಂದ ನಿರಸನ ಮಾಡಿ ಆತ್ಮ ಭೇದವನ್ನು ಸಾಧಿಸಿ, ಹಿಂದೆ ವಿಸ್ತರೇಣ ಹೇಳಿದಂತಲ್ಲದೆ ಸುಗ್ರಹವಾಗಿ ತ್ರಿವಿಧ ಆತ್ಮಗಳಿಗೂ ಇರುವ ಲಕ್ಷಣವನ್ನು ನಿರೂಪಿಸಿ, ಅನಂತರ ಜ್ಞಾನಕ್ಕೂ (ಧರ್ಮಭೂತ ಜ್ಞಾನ) ಸ್ವರೂಪಕ್ಕೂ (ಆತ್ಮಸ್ವರೂಪ ಜ್ಞಾನ) ಇರುವ ಸಾಧರ್ಮ್ಯ ವೈಧರ್ಮ್ಯಗಳನ್ನು ಪ್ರತಿಪಾದಿಸಿ, ಜ್ಞಾನವಿಭುತ್ವ ಪ್ರಸಂಗದಲ್ಲಿ ತ್ರಿವಿಧ ಚೇತನರ ಜ್ಞಾನಕ್ಕೂ ಉಂಟಾದ ವಿಶೇಷವನ್ನು ತಿಳಿಸಿ, ಹಿಂದೆ ಜ್ಞಾನಕ್ಕೆ ತಿಳಿಸಿದ ನಿತ್ಯತ್ವ, ದ್ರವ್ಯತ್ವ, ಅಜಡತ್ವ, ಆನಂದರೂಪತ್ವಗಳನ್ನು ಪೂರ್ಣವಾಗಿ ಉಪಪಾದಿಸಿ '**ಚಿತ್ ತತ್ತ್ವ**' ವನ್ನು ವಿವರಿಸಿ ನಿಗಮಿಸುತ್ತಾರೆ.

**। ಚಿತ್ ಪ್ರಕರಣಂ ಸಂಪೂರ್ಣಂ ।**

**॥ ಪಿಳ್ಳೈಲೋಕಾಚಾರ್ಯರ್ ತಿರುವಡಿಗಳೇ ಶರಣಮ್॥**

**॥ ಜೀಯರ್ ತಿರುವಡಿಗಳೇ ಶರಣಮ್॥**

# ಅಚಿತ್ಪ್ರಕರಣಮ್

## ಸೂ. 1. ಅಚಿತ್ತು ಜ್ಞಾನಶೂನ್ಯಮಾಯ್ ವಿಕಾರಾಸ್ಪದಮಾಯಿರುಕ್ಕುಮ್

''ತತ್ತ್ವತ್ರಯವೆಂದರೆ ಚಿತ್ ಮತ್ತು ಅಚಿತ್ ಮತ್ತು ಈಶ್ವರನೂ'' (1ಪ್ರ 2ಸೂ) ಎಂದು ಉದ್ದೇಶಿತ ಕ್ರಮದಲ್ಲಿ ಮೊದಲು 'ಚಿತ್' ಶಬ್ದಕ್ಕೆ ಅರ್ಥವಾದ ವಾಚ್ಯನಾದ ಆತ್ಮವಸ್ತುವಿನ ಸ್ವರೂಪ, ಸ್ವಭಾವ ವಿಶೇಷಗಳನ್ನು ಸ್ಫುಟವಾಗಿ ಹಿಂದಿನ ಪ್ರಕರಣದಲ್ಲಿ ನಿರೂಪಿಸಿದರು.ಅನಂತರ ಅಚಿದ್ವಸ್ತುವಿನ ಸ್ವರೂಪ ಸ್ವಭಾವ ವಿಶೇಷಗಳನ್ನು ಈ ಪ್ರಕರಣದಲ್ಲಿ ತಿಳಿಸುತ್ತಾರೆ. ಅದರಲ್ಲಿ ಮೊದಲಿಗೆ ಅಚಿತ್ತಿನ ಲಕ್ಷಣವನ್ನು ತಿಳಿಸುತ್ತಾರೆ.

**(ಅಚಿತ್ತು......ಇರುಕ್ಕುಂ)** ಎಂದು, ಅಚಿತ್ ಚೈತನ್ಯಕ್ಕೆ ಆಧಾರವಾದ ವಸ್ತು ಎಂಬುದು ಪ್ರಸಿದ್ಧ. ಅದನ್ನೇ 'ಜ್ಞಾನ ಶೂನ್ಯ ಮಾಯ್'ಎನ್ನುತ್ತಾರೆ. ಆದುದರಿಂದಲೇ ಶ್ರುತಿ ಭೋಗ್ಯ ಶಬ್ದದಿಂದ ಅಚಿತ್ತನ್ನು ಹೇಳಿತು.

(ವಿಕಾರಾಸ್ಪದ ಮಾಯಿರುಕ್ಕುಂ)- ವಿಕಾರಾಸ್ಪದ ಎಂದರೆ ವಿಕಾರಕ್ಕೆ ಆಶ್ರಯವಾಗಿರುವಿಕೆ. ವಿಕಾರವೆಂದರೆ-ಅವಸ್ಥಾಂತರಾಪತ್ತಿ. (ಒಂದು ಅವಸ್ಥೆಯಿಂದ ಇನ್ನೊಂದಕ್ಕೆ ಬದಲಾವಣೆ ಹೊಂದುತ್ತಲೇ ಇರುವುದು.) ಅಂದರೆ ಚಿತ್ ಸ್ವರೂಪದಂತೆ ಸದಾ ಏಕರೂಪವಾಗಿಲ್ಲದಿರುವಿಕೆ.

## ಸೂ. 2 ಇದು ಶುದ್ಧ ಸತ್ವಮೆನ್ನುಂ ಮಿಶ್ರಸತ್ವಮೆನ್ನುಂ ಸತ್ವಶೂನ್ಯಮೆನ್ನುಂ ತ್ರಿವಿಧಮ್.

ಈ ಅಚಿತ್ತು ಸತ್ತ್ವಗುಣ ಒಂದಕ್ಕೇ ಆಧಾರವಾಗಿ 'ಶುದ್ಧ ಸತ್ವ'ವೆಂದೂ; ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಗೂ ಆಧಾರವಾಗಿ 'ಮಿಶ್ರಸತ್ವ'ವೆಂದೂ; ಸತ್ವಾದಿಗುಣಗಳು ಎಳ್ಳಷ್ಟೂ ಇಲ್ಲದೆ 'ಸತ್ವಶೂನ್ಯ'ವೆಂದೂ ಮೂರು ವಿಧವಾಗಿರುತ್ತದೆ.

## ಸೂ. 3 ಇದಿಲ್ ಶುದ್ಧಸತ್ವಮಾವತು - ರಜಸ್, ತಮಸ್ಸುಕ್ಕಳ್ ಕಲಶಾತೇ ಕೇವಲ ಸತ್ವಮಾಯ್. ನಿತ್ಯಮಾಯ್, ಜ್ಞಾನಾನಂದಜನಕಮಾಯ್, ಕರ್ಮತ್ತಾಲನ್ನಿಕ್ಕೇ, ಕೇವಲ ಭಗವದಿಚ್ಛೆಯಾಲೇ ವಿಮಾನ ಗೋಪುರ ಮಣ್ಡಪ ಪ್ರಾಸಾದಾದಿ ರೂಪೇಣ ಪರಿಣಮಿಕ್ಕಕ್ಕಡವದಾಯ್, ನಿರವಧಿಕ ತೇಜೋರೂಪಮಾಯ್, ನಿತ್ಯಮುಕ್ತರಾಲುಂ ಈಶ್ವರನಾಲುಂ ಪರಿಚ್ಛೇದಿಕ್ಕವರಿದಾಯ್, ಅತ್ಯದ್ಭುತ ಮಾಯಿರುಪ್ಪದೊನ್ರು.

ಮೂರು ಬಗೆ ಅಚಿತ್ ವಸ್ತುಗಳ ಸ್ವರೂಪ ಸ್ವಭಾವ-ವಿಶೇಷಗಳನ್ನು ಹೇಳಲು ಉಪಕ್ರಮಿಸಿ ಮೊದಲಿಗೆ ಈ ಸೂತ್ರದಲ್ಲಿ 'ಶುದ್ಧಸತ್ವ'ದ ಬಗ್ಗೆ ನಿರೂಪಿಸುತ್ತಾರೆ.

**(ಶುದ್ಧ ಸತ್ವಮಾವತು)**- ಶುದ್ಧ ಸತ್ವ ವೆಂಬುದು.

(ರಜಸ್ತಮಸ್ಸುಕ್ಕಳ್ ಕಲಶಾದೇ ಕೇವಲ ಸತ್ವಮಾಯ್) - 'ಕ್ಷಯಂತಮಸ್ಯ ರಜಸಃ ಪರಾಕೇ'[1] ಎಂದೂ 'ತಮಸಸ್ತು ಪಾರೇ'[2] ಎಂದೂ 'ತಮಸಃ ಪರಸ್ತಾತ್' [3] ಎಂದೂ, 'ಪಂಚಶಕ್ತಿಮಯೇ ದಿವ್ಯೇ ಶುದ್ಧ ಸತ್ವೇ ಸುಖಾಕರೇ'[4] ಎಂದೂ ಶ್ರುತಿ ಸ್ಮೃತಿಗಳು ರಜಸ್, ತಮಸ್ಸುಗಳು ಸೇರಿರದೇ ಇರುವುದನ್ನು 'ಶುದ್ಧ ಸತ್ವ'ಎನ್ನುತ್ತವೆ.

(ನಿತ್ಯಮಾಯ್) ನಿತ್ಯ - ಎಂದರೆ ಎಂದೂ ಅಳಿಯದೇ ಇರುವಿಕೆ. 'ತದಕ್ಷರೇ ಪರಮೇ ವ್ಯೋಮನ್'[5] ಎಂದೂ 'ಕಾಲಾತೀತಮನಾದ್ಯನ್ತಮಪ್ರಾಕೃತಂ ಅಚಂಚಲಂ ಪ್ರಾಪ್ಯ ಮರ್ಚಿಃ ಪಥಾತ್ಸದ್ಭಿರ್ಮಯಸನ್ನಸ್ತಮಾನಸೈಃ'[6] ಎಂದೂ

ಯತ್ತತ್ಪುರಾಣಮಾಕಾಶಂ ಸರ್ವಸ್ಮಾತ್ಪರಮಂ ಧ್ರುವಮ್।
ಯತ್ಪದಂ ಪ್ರಾಪ್ಯ ತತ್ವಜ್ಞಾ ಮುಚ್ಯಂತೇ ಸರ್ವಃ ಕಿಲ್ಬಿಷೈಃ। [7]

ಎಂದೂ ಇದರ ನಿತ್ಯತ್ವವು ಶ್ರುತಿ ಸ್ಮೃತಿಗಳಲ್ಲಿ ಹೇಳಲಾಗಿದೆ.

(ಜ್ಞಾನಾನಂದಜನಕಮಾಯ್) -ಶುದ್ಧ ಸತ್ವವಾದ್ದರಿಂದ ಜ್ಞಾನವನ್ನೂ, ಆನಂದವನ್ನೂ, ಉಂಟು ಮಾಡುವಂತಹುದಾಗಿರುತ್ತದೆ. ಸತ್ವವು, ಜ್ಞಾನ ಸುಖಾವಹವಾದದ್ದು. ಆದ್ದರಿಂದಲೇ 'ಶುದ್ಧಸತ್ವೇ' ಎಂದ ಕೂಡಲೇ 'ಸುಖಾಕರೇ' ಎನ್ನಲಾಗಿದೆ.

(ಕರ್ಮತ್ತಾಲನ್ನಿಕ್ಕೇ.......ಪರಿಣಮಿಕ್ಕಕ್ಕಡವದಾಯ್) -ಚೇತನನು ಕರ್ಮಾನುಗುಣವಾಗಿ ಇಚ್ಛಿಸಲು, ಆ ಇಚ್ಛಾನುಗುಣವಾಗಿ ಭಗವತ್ಸಂಕಲ್ಪದಿಂದ ಇಪ್ಪತ್ತುನಾಲ್ಕು ತತ್ವಗಳಾಗಿ ಪರಿಣಮಿಸಿ ಚೇತನರಿಗೆ ಭೋಗ್ಯ ಭೋಗೋಪಕರಣ ಭೋಗಸ್ಥಾನಗಳಾಗಿರುವ (ಮಿಶ್ರಸತ್ವ) ಪ್ರಕೃತಿ ತತ್ವದಂತಲ್ಲ ಇದು. ಅದಕ್ಕೆ ಬದಲಾಗಿ ಈ ಶುದ್ಧ ಸತ್ವವು ಸ್ವಭೋಗಾರ್ಥವಾಗಿ ಭಗವದಿಚ್ಛೆಯಿಂದ ವಿಮಾನ ಗೋಪುರಾದಿ ಆಕಾರವಾಗಿ ಪರಿಣಮಿಸುತ್ತದೆ.

ದೇವಾನಾಂ ಪೂರಸ ಯೋಧ್ಯಾ।
ತಸ್ಯಾಂ ಹಿರಣ್ಮಯಃ ಕೋಶಃ।
ಯೋವೈತಾ ಬ್ರಹ್ಮಣೋವೇದ।
ಅಮೃತೇನಾವೃತಾಂ ಪುರೀಂ। [8]
ಅಪರಾಜಿತಾಪೂರ್ಬ್ರಹ್ಮಣಃ। [9]
ಪ್ರಜಾಪತೇಸ್ಸಭಾಂ ವೇಶ್ಮಪ್ರಪದ್ಯೇ। [10]

ಎಂದು ಶ್ರುತಿಯಲ್ಲೂ, ಸಂಗ್ರಹೇಣ ನಿತ್ಯ ವಿಭೂತಿಯಲ್ಲಿರುವ (ಶ್ರೀ ವೈಕುಂಠದಲ್ಲಿರುವ ) ದಿವ್ಯನಗರ. ದಿವ್ಯಾಯತನಾದಿಗಳು ಹೇಳಲ್ಪಟ್ಟಿವೆ. ಇದನ್ನೇ ಶ್ರೀ ಭಾಷ್ಯಕಾರರು ತಮ್ಮ ಶ್ರೀ ವೈಕುಂಠಗದ್ಯದಲ್ಲಿ 'ದಿವ್ಯಾವರಣ ಶತಸಹಸ್ರಾವೃತೇ ದಿವ್ಯಕಲ್ಪಕ ತರೂಪ ಶೋಭಿತೇ ದಿವ್ಯೋದ್ಯಾನಶತಸಹಸ್ರಕೋಟಿಭಿರಾವೃತೇ ಅತಿ ಪ್ರಮಾಣೇ ದಿವ್ಯಾಯತನೇ ಕಸ್ಮಿಂಶ್ಚಿದ್ವಿಚಿತ್ರತರ ದಿವ್ಯರತ್ನಮಯ ದಿವ್ಯಾಸ್ಥಾನ ಮಂಡಪೇ।[11] ಎಂದು ವಿಸ್ತಾರವಾಗಿ ಅನುಗ್ರಹಿಸಿದ್ದಾರೆ.

(ನಿರವಧಿಕತೇಜೋರೂಪಮಾಯ್) - ಅಗ್ನ್ಯಾದಿತೇಜಃ ಪದಾರ್ಥಗಳನ್ನೂ ಮಿಂಚುಹುಳುವಿನಂತಾಗಿಸುವ ಅಪರಿಮಿತವಾದ ತೇಜಸ್ಸೇ ಮೂರ್ತಿವೆತ್ತಂತಿರುವಿಕೆ. ''ನತತ್ರಸೂರ್ಯೋ ಭಾತಿ, ನ ಚಂದ್ರ ತಾರಕಂ ನೇಮಾ ವಿದ್ಯುತೋಭಾಂತಿಕುತೋಯಮಾಗ್ನಿಃ''[12] ಎಂಬಂತೆಯೂ

'ಅತ್ಯರ್ಕಾನಲದೀಪ್ತಂತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ।
ಸ್ವಯೈವಪ್ರಭಯಾರಾಜನ್ ದುಷ್ಪ್ರೇಕ್ಷಂ ದೇವದಾನವೈಃ। [13]

ಎಂದೂ ಪ್ರಸಿದ್ಧವಾಗಿದೆ. 'ಶುಡರೊಳಿಯಾಯ್ ನಿನ್ರ ತನ್ನುಡೈಚ್ಚೋತ್ತಿ'; 'ಶುಳಿ ಪಟ್ಟೋಡುಂ ಶುಡರ್‌ಚ್ಚೋದಿ ವೆಳ್ಳಂ'; 'ವಿಳಂಗು ಶುಡರ್ ಶೋತಿ' ಎಂದು ಆಳ್ವಾರರೂ ಇದರ ಎಲ್ಲೆಯಿಲ್ಲದ ತೇಜೋಮಯವಾದ ಆಕಾರವನ್ನು ಹಲವು ಕಡೆಗಳಲ್ಲಿ ಹಾಡಿದ್ದಾರೆ.

(ನಿತ್ಯ.........ಪರಿಚ್ಛೇದಿಕ್ಕವರಿದಾಯ್)-ಇದರ ಪರಿಮಾಣಾದಿಗಳು ಯಾರಿಂದಲೂ ಅಳೆಯಲಾಗದಂತೆ ಇದೆ, **'ತೇಷಾಮಪಿ ಇಯತ್ಪರಿಮಾಣಂ ಇಯದೈಶ್ವರ್ಯಂ ಈದೃಶ ಸ್ವಭಾವಂ ಇತಿ ಪರಿಚ್ಛೇತ್ತುಂ ಅಯೋಗ್ಯೇ'**[14] ಎಂದು ನಿತ್ಯರಿಂದಲೂ ಪರಿಚ್ಛೇದಿಸಲು ಸಾಧ್ಯವಿಲ್ಲವೆಂದು ಶ್ರೀ ವೈಕುಂಠ ಗದ್ಯದಲ್ಲಿ ಶ್ರೀ ಭಾಷ್ಯಕಾರರು ಅನುಗ್ರಹಿಸಿರುವುದು ಮುಕ್ತರಿಗೂ ಅನ್ವಯಿಸುತ್ತದೆ. ಈಶ್ವರನ ಜ್ಞಾನದಂತೆ ಇವರ ಜ್ಞಾನಕ್ಕೂ ಸರ್ವದರ್ಶಿತ್ವವುಂಟಾದ್ದರಿಂದ ಈಶ್ವರನಿಗೆ ಪರಿಚ್ಛೇದಿಸಲು ಸಾಧ್ಯವಾದರೆ ಇವರಿಗೂ ಸಾಧ್ಯವೆನ್ನಬಹುದು. ಆದ್ದರಿಂದ ಈಶ್ವರನಿಗೂ ಸಾಧ್ಯವಿಲ್ಲ ಎಂಬುದಾಗಿದೆ. ಆದರೆ ಇದರಿಂದ ನಿತ್ಯಮುಕ್ತ, ಈಶ್ವರನ ಸರ್ವಜ್ಞತ್ವಕ್ಕೆ ದೋಷ ಏರ್ಪಡುವುದಿಲ್ಲವೇ ಎಂದರೆ, ಇಲ್ಲ.

ಸರ್ವಜ್ಞತ್ವವೆಂದರೆ ಸರ್ವವನ್ನೂ ಅದಿರುವಂತೆಯೇ ಅರಿಯುವುದು.

ಪರಿಚ್ಛೇದಿಸಲು ಸಾಧ್ಯವಾಗುವುದಾದರೆ ಪರಿಚ್ಛೇದಿಸಿ ಅರಿಯುವುದೂ, ಅಪರಿಚ್ಛೇದ್ಯವಾದರೆ ಹಾಗೆಯೇ ಅರಿಯುವುದೂ, ಎಲ್ಲೆಯಿಲ್ಲದ ಒಂದಕ್ಕೆ ಎಲ್ಲೆಯನ್ನರಿಯದೇ ಇರುವುದೇ ಸರ್ವಜ್ಞತ್ವಕ್ಕೆ ಅನುಗುಣ ಎಂಬುದನ್ನು **'ದೇವಿತ್ವನ್ಮಹಿಮಾಮವಧಿಃ ನ ಹರಿಣಾ ನಾಪಿತ್ವಯಾ ಜ್ಞಾಯತೇ ಯದ್ಯಪ್ಯೇವಂ ಅಥಾಪಿನೈವ ಯುವಯೋಃ ಸರ್ವಜ್ಞತಾಹೀಯತೇ। ಯನ್ನಾಸ್ತ್ಯೇವ ತದಜ್ಞತಾಂ ಅನುಗುಣಾಂ ಸರ್ವಜ್ಞತಾ ಯಃ ವಿದುಃ ವ್ಯೋಮಾಂಭೋಜಂ ಇದನ್ತಯಾಕಿಲ ವಿದನ್ ಭ್ರಾಂತೋಯಂ ಇತ್ಯುಚ್ಯತೇ।**[15] ಎಂದೂ ಶ್ರೀಸ್ತವದಲ್ಲಿ ಕೂರತ್ತಾಳ್ವಾನ್‌ರವರು ಅನುಗ್ರಹಿಸಿದ್ದಾರೆ. ಹೀಗಿಲ್ಲದಿದ್ದರೆ **'ತನಕ್ಕುಂ ತನ್ ತನ್ಮೈಯರಿವರಿಯಾನ್'** ಎಂಬ ಆಳ್ವಾರರ ಶ್ರೀ ಸೂಕ್ತಿಯೂ ಸರ್ವಜ್ಞತೆಯನ್ನು ವಿರೋಧಿಸುತ್ತದೆ ಎನ್ನಬೇಕಾಗುತ್ತದೆ.

ಆದ್ದರಿಂದ ನಿತ್ಯ ಮುಕ್ತ ಈಶ್ವರರುಗಳಿಂದ ಅಪರಿಚ್ಛೇದ್ಯ ಎನ್ನಲು ಯಾವ ಬಾಧಕವೂ ಇಲ್ಲ. ಇದರಿಂದ ಶುದ್ಧಸತ್ವದ ವೈಭವವು ಹೇಳಲ್ಪಟ್ಟಿತು.

(ಅತ್ಯದ್ಭುತಮಾಯಿರುಪ್ಪದೊನ್ರು) - ಅತ್ಯದ್ಭುತತ್ವವೆಂದರೆ - ಅನುಕ್ಷಣವೂ ಅಪೂರ್ವ ಆಶ್ಚರ್ಯಾವಹವಾಗಿರುವುದು. **'ಅನಂತಾಶ್ಚರ್ಯ ಅನಂತಮಹಾವಿಭವ'** ಎಂದಿದ್ದಾರೆ ಶ್ರೀ ಭಾಷ್ಯಕಾರರು.

ಹೀಗೆ ಮೇಲೆ ಹೇಳಲ್ಪಟ್ಟ ಎಲ್ಲ ಲಕ್ಷಣಗಳಿಂದ ಕೂಡಿರುವಂತಹು ಈ ಶುದ್ಧ ಸತ್ವ.

## ಸೂ. 4 ಇತ್ತೈಶಿಲರ್ ಜಡಮೆನ್ಱಾರ್ಕಳ್, ಶಿಲರ್ ಅಜಡಮೆನ್ಱಾರ್ಕಳ್.

ಈ ಶುದ್ಧಸತ್ವವನ್ನು ಈ ದರ್ಶನಸ್ಥರಲ್ಲೇ ಕೆಲವರು ಜಡವೆಂದೂ, ಕೆಲವರು ಅಜಡವೆಂದೂ ಹೇಳುತ್ತಾರೆ. **'ಇಹಾ ಜಡಾಮಾದಿಮಾಂ' ಕೇಚಿದಾಹುಃ'**[1] ಎಂದು ಅಭಿಯುಕ್ತರೂ ತಿಳಿಸಿದ್ದಾರೆ.

## ಸೂ. 5 ಅಜಡಮಾನಪೋದು ನಿತ್ಯರ್ಕ್ಕುಂ ಮುಕ್ತರ್ಕ್ಕುಂ ಈಶ್ವರನುಕ್ಕುಮ್ ಜ್ಞಾನತ್ತೈಯೊಳಿಯವುಮ್ ತೋತ್ತುಮ್.

ಜಡವೆಂದರೆ- ಸ್ವಯಂ ಪ್ರಕಾಶವಿಲ್ಲದೇ ಇರುವಿಕೆ - (ಯಾವುದರ ಸಹಾಯವೂ ಇಲ್ಲದೆ ತಾನೇ ತೋರದೇ ಇರುವುದು)

ಅಜಡವೆಂದರೆ- ಸ್ವಯಂ ಪ್ರಕಾಶವಾಗಿರುವಿಕೆ. (ಯಾವುದರ ಸಹಾಯವೂ ಇಲ್ಲದೆ ತಾನೇ ತೋರುವುದು)

'ಅಜಡವಾದಾಗ' ಎಂದು - ಜಡವೆಂಬ ಪಕ್ಷವನ್ನು ಬಿಟ್ಟು ಅಜಡಪಕ್ಷವನ್ನೇ ಪ್ರತಿಪಾದಿಸುವುದರಿಂದ ಇದೇ ಸೂತ್ರಕಾರರಿಗೆ ಅಭಿಪ್ರಾಯವೆಂಬುದು ಸೂಚಿತವಾಗುತ್ತದೆ.

ಜ್ಞಾನದ ಸಹಾಯವೂ ಇಲ್ಲದೆ ಇದು ಪ್ರಕಾಶಿಸುತ್ತದೆ ಎಂಬುದರಿಂದ ಇದು ಸ್ವಯಂಪ್ರಕಾಶ ಎಂಬುದು ಸುವ್ಯಕ್ತವಾಗಿದೆ.

## ಸೂ. 6 ಸಂಸಾರಿಗಳುಕ್ಕು ತೋತ್ತಾದು.

ಹೀಗೆ ಈ ಶುದ್ಧ ಸತ್ವವು ಸ್ವಯಂ ಪ್ರಕಾಶವಾದರೆ, ಸಂಸಾರಿಗಳ ಜ್ಞಾನಕ್ಕೆ ವಿಷಯವಾಗಿ ತಾನೇ ಪ್ರಕಾಶಿಸಿಬೇಕಲ್ಲವೇ ಎಂದರೆ ಹಾಗೆ ಸಂಸಾರಿಗಳಿಗೆ ತೋರುವುದಿಲ್ಲ ಎಂಬುದನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ.

ಈ ವಿಷಯವು ಅಭಿಯುಕ್ತರಿಂದ ಹೀಗೆ ವಿಸ್ತರೇಣ ಪ್ರತಿಪಾದಿಸಲ್ಪಟ್ಟಿದೆ.

**'ತ್ರಿವಿಧಾಚೇತನಂಗಳ್'**- ಎಂದು ಪ್ರಾರಂಭಿಸಿ ಅವುಗಳಲ್ಲಿ ಪ್ರಕೃತಿಯೂ ಕಾಲವೂ ಜಡಗಳು. ಶುದ್ಧಸತ್ವವಾದ ದ್ರವ್ಯವೂ ಜಡವೆಂದು ಕೆಲವರು ಹೇಳುವರು. ಜಡವೆಂದರೆ-ಸ್ವಯಂ ಪ್ರಕಾಶವಿಲ್ಲದೇ ಇರುವಿಕೆ. ಭಗವತ್‌ಶಾಸ್ತ್ರಾದಿಗಳನ್ನು ಪರಾಮರ್ಶಿಸಿದವರು- ಜ್ಞಾನಾತ್ಮಕವಾಗಿ ಶಾಸ್ತ್ರ ಸಿದ್ಧವಾದ್ದರಿಂದ ಶುದ್ಧಸತ್ವ ದ್ರವ್ಯವನ್ನು ಸ್ವಯಂ ಪ್ರಕಾಶವೆನ್ನುತ್ತಾರೆ. ಹೀಗೆ ಸ್ವಯಂ ಪ್ರಕಾಶವಾದರೆ ಸಂಸಾರಿಗಳಿಗೆ ಶಾಸ್ತ್ರಗಳ ಮೂಲಕ ತಿಳಿಯಬೇಕಿಲ್ಲದೆ ತಾನೇ ತೋರಬೇಡವೇ ಎಂದರೆ- ಎಲ್ಲ ಆತ್ಮಗಳ ಸ್ವರೂಪವೂ, ಧರ್ಮಭೂತಜ್ಞಾನವೂ, ಸ್ವಯಂ ಪ್ರಕಾಶವಾಗಿರುವಾಗ, ಆತ್ಮ ಸ್ವರೂಪಕ್ಕೆ ಮಾತ್ರ ಸ್ವಯಂಪ್ರಕಾಶವಾಗಿ ಬೇರೆ ಎಲ್ಲರಿಗೂ ಜ್ಞಾನಾಂತರವೇದ್ಯವಾದಂತೆ, ಧರ್ಮಭೂತಜ್ಞಾನವೂ ತನ್ನ ಆಶ್ರಯವಾದ ಆತ್ಮರೂಪಕ್ಕೆ ಮಾತ್ರ ಸ್ವಯಂಪ್ರಕಾಶವಾಗಿ ಇತರರಿಗೆ ಸ್ವಯಂ ಪ್ರಕಾಶವಾಗಿಲ್ಲದೆ ಇರುವಂತೆಯೇ, ಈ ಶುದ್ಧಸತ್ವವೂ ನಿಯತವಿಷಯವಾಗಿ (ಕೆಲವರಿಗೆ ಮಾತ್ರ) ಸ್ವಯಂ ಪ್ರಕಾಶವಾದರೆ ವಿರೋಧವಿಲ್ಲವು. **'ಯೋವೇತ್ತಿ ಯುಗಪತ್‌ಸರ್ವಂ ಪ್ರತ್ಯಕ್ಷೇಣ ಸದಾಸ್ವತಃ। ತಂ ಪ್ರಣಮ್ಯ ಹರಿಂ ಶಾಸ್ತ್ರಂ ನ್ಯಾಯತತ್ವಂ ಪ್ರಚಕ್ಷ್ಮಹೇ'**[1] ಎಂಬಂತೆ ಧರ್ಮಭೂತಜ್ಞಾನದಿಂದ ಸರ್ವವನ್ನೂ ಸಾಕ್ಷಾತ್ಕರಿಸಿಕೊಳ್ಳುವ ಈಶ್ವರನಿಗೆ ಶುದ್ಧಸತ್ವವೂ ಸ್ವಯಂ ಪ್ರಾಕಾಶಕವಾಗಿರುವುದು ಹೇಗೆಂದರೆ- ಈಶ್ವರನ ಧರ್ಮಭೂತಜ್ಞಾನವು ದಿವ್ಯಾತ್ಮಸ್ವರೂಪ ಮೊದಲಾದ ಎಲ್ಲವನ್ನೂ ವಿಷಯೀಕರಿಸುತ್ತದೆ. ದಿವ್ಯಾತ್ಮಸ್ವರೂಪವು ಸ್ವಯಂ ಪ್ರಕಾಶವಾಗಿರುವಂತೆ ಈ ಶುದ್ಧಸತ್ವವೂ ಸ್ವಯಂಪ್ರಕಾಶವಾಗಿರಬಹುದು. ಇದು ನಿತ್ಯರಿಗೂ ತುಲ್ಯ. ವಿಷಯಪ್ರಕಾಶನ ಕಾಲದಲ್ಲಿ ಧರ್ಮಭೂತಜ್ಞಾನವು ಸ್ವಾಶ್ರಯಕ್ಕೆ ಮಾತ್ರವೇ ಸ್ವಯಂಪ್ರಕಾಶವಾದಂತೆ, ಮುಕ್ತರಿಗೂ ಮುಕ್ತಾವಸ್ಥೆಯಲ್ಲಿ ಈ ಶುದ್ಧಸತ್ವವು ಸ್ವಯಂ ಪ್ರಕಾಶವಾದರೆ ವಿರೋಧವಿಲ್ಲವು. ಧರ್ಮಭೂತಜ್ಞಾನದ ಸ್ವಾತ್ಮಪ್ರಕಾಶನ ಶಕ್ತಿಯು ವಿಷಯ ಪ್ರಕಾಶನವಿಲ್ಲದ ಕಾಲದಲ್ಲಿ ಕರ್ಮ ವಿಶೇಷಗಳಿಂದ ಪ್ರತಿಬದ್ಧವಾದಂತೆ, ಶುದ್ಧ ಸತ್ವದ ಸ್ವಾತ್ಮ ಪ್ರಕಾಶನಶಕ್ತಿಯೂ ಬದ್ಧದೆಸೆಯಲ್ಲಿ ಪ್ರತಿಬದ್ಧವಾಗುವುದರಿಂದ ಶುದ್ಧ ಸತ್ವವು ಬದ್ಧದೆಸೆಯಲ್ಲಿ ಪ್ರಕಾಶಿಸುವುದಿಲ್ಲ.

**ಧಿಯಃ ಸ್ವಯಂಪ್ರಕಾಶತ್ವಂ ಮುಕ್ತೌ ಸ್ವಾಭಾವಿಕಂ ಯಥಾ ।**
**ಬದ್ಧೇ ಕದಾಚಿತ್ ಸಂರುದ್ಧಂ ತಥಾಽತ್ರಾ ನಿಯಮ್ಯತೇ।**[2]

ಇಂತಹ ಅವಸ್ಥಾಂತರಾಪತ್ತಿ ವಿಕಾರಿ ದ್ರವ್ಯಕ್ಕೆ ವಿರುದ್ಧವಲ್ಲವು. ಆದ್ದರಿಂದ 'ಪ್ರಮಾಣ ಪ್ರತಿಪನ್ನಾರ್ಥಕ್ಕೆ ಯುಕ್ತಿ ವಿರೋಧ ಹೇಳಲು ಮಾರ್ಗವಿಲ್ಲ' ಎಂದು ರಹಸ್ಯತ್ರಯ ಸಾರದಲ್ಲಿ ಪ್ರತಿಪಾದಿಸಲಾಗಿದೆ.

## ಸೂ. 7 ಆತ್ಮಾವಿಲುಮ್ ಜ್ಞಾನತ್ತಿಲುಂ ಭಿನ್ನಮಾನಪಡಿ ಎನ್ನೆನ್ನಿಲ್.

ಆತ್ಮವೂ ಅಜಡವಾಗಿ ಜ್ಞಾನವೂ ಅಜಡವಾಗಿದ್ದರೂ ಅವೆರಡೂ ಪರಸ್ಪರ ಭಿನ್ನವಾದದ್ದು ಎಂಬುದನ್ನು ನಿರೂಪಿಸಿದಂತೆ, ಶುದ್ಧಸತ್ವವು ಅಜಡವಾಗಿದ್ದರೂ ಆತ್ಮ ಮತ್ತು ಜ್ಞಾನಕ್ಕಿಂತ ಭಿನ್ನ ಎಂಬುದನ್ನು ನಿರೂಪಿಸಲು ಜಿಜ್ಞಾಸು ಪ್ರಶ್ನೆಯನ್ನು ಹೀಗೆ ಅನುವದಿಸುತ್ತಾರೆ.

**ಸೂ. 8 ನಾನೆನ್ನು ತೋತ್ತಾಮೈಯಾಲುಂ, ಶರೀರಂಗಳಾಯ್ ಪರಿಣಮಿಕ್ಕೈಯಾಲುಂ ವಿಷಯಂಗಳೈಒಳಿಯ ತಾನೇ ತೋತ್ತುಕೈಯಾಲುಂ ಶಬ್ದ ಸ್ಪರ್ಶಾದಿಕಳುಂಡಾ ಕೈಯಾಲುಂ ಭಿನ್ನಮಾಕಕ್ಕಡವತು.**

ಈ ಶುದ್ಧ ಸತ್ವದ ಭಿನ್ನತೆಯನ್ನು ಅನೇಕ ಕಾರಣಗಳ ಮೂಲಕ ನಿರೂಪಿಸುತ್ತಾರೆ. ಆತ್ಮವಸ್ತುವು 'ಪ್ರತ್ಯಕ್' ಆದ್ದರಿಂದ 'ಅಹಂ' ಎಂದು ಪ್ರಕಾಶಿಸುತ್ತದೆ. ಶುದ್ಧ ಸತ್ವವು 'ಪರಾಕ್'ಆದ್ದರಿಂದ 'ಇದು' ಎಂದು ಪ್ರಕಾಶಿಸುತ್ತದೆ. ಆದ್ದರಿಂದ ಆತ್ಮಕ್ಕಿಂತ ಭಿನ್ನ. ಶ'ರೀರಾದಿಗಳಾಗಿ ಪರಿಣಮಿಸುವುದರಿಂದ ಆತ್ಮಕ್ಕಿಂತಲೂ, ಜ್ಞಾನಕ್ಕಿಂತಲೂ ಭಿನ್ನ. ಏಕರೂಪನಾದ್ದರಿಂದ ಆತ್ಮನಿಗೆ ಪರಿಣಾಮವಿಲ್ಲ. ಆತ್ಮನ ಧರ್ಮಭೂತ ಜ್ಞಾನಕ್ಕೆ ಪರಿಣಾಮವಿದ್ದರೂ ಶರೀರಾದಿಗಳಾಗಿ ಅದು ಪರಿಣಮಿಸುವುದಿಲ್ಲ. ವಿಷಯ ನಿರಪೇಕ್ಷವಾಗಿ ಪ್ರಕಾಶಿಸುವ, ಶಬ್ದಸ್ಪರ್ಶಾದಿಗಳಿಗೆ ಆಶ್ರಯವಾದ ಈ ಶುದ್ಧಸತ್ವವು ವಿಷಯ ಸನ್ನಿಧಿಯಿಲ್ಲದಿದ್ದರೆ ಪ್ರಕಾಶಿಸದೆ ಶಬ್ದಾದಿಗಳಿಗೆ ಆಶ್ರಯವಲ್ಲದೆ. ಅವುಗಳ ಗ್ರಾಹಕ ಮಾತ್ರವಾಗಿರುವಾಗ ಜ್ಞಾನಕ್ಕಿಂತಲೂ ಭಿನ್ನವಾಗಿದೆ.

**ಸೂ. 9 ಮಿಶ್ರ ಸತ್ವಮಾವತು– ಸತ್ವರಜಸ್ತಮಸ್ಸುಕ್ಕಳ್ ಮೂನ್ನುಂ ಕೂಡಿ ಬದ್ಧಚೇತನರುಡೈಯ ಜ್ಞಾನ ಆನಂದಂಗಳುಕ್ಕು ತಿರೋಧಾಯಕಮಾಯ್. ವಿಪರೀತ ಜ್ಞಾನಜನಕಮಾಯ್, ನಿತ್ಯಮಾಯ್, ಈಶ್ವರನುಕ್ಕು ಕ್ರೀಡಾಪರಿಕರಮಾಯ್, ಪ್ರದೇಶ ಭೇದತ್ತಾಲುಂ ಕಾಲಭೇದತ್ತಾಲುಮ್ ಸದೃಶಮಾಯುಂ ವಿಸದೃಶಮಾಯುಂ ಇರುಕ್ಕುಂ ವಿಕಾರಂಗಳೈ ಉಣ್ಡಾಕ್ಕಕ್ಕಡವದಾಯ್ ಪ್ರಕೃತಿ, ಅವಿದ್ಯೈ, ಮಾಯೈ, ಎನ್ನಿರ ಪೇರ್‌ಗಳೈಯುಡೈತ್ತಾಯಿರುಕ್ಕುಮ್ ಅಚಿದ್ವಿಶೇಷಮ್.**

(ಮಿಶ್ರ ಸತ್ವ ಮಾನತು ........ ಕೂಡಿ) ಮಿಶ್ರಸತ್ವದ ಲಕ್ಷಣಗಳನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ.

(ಮಿಶ್ರಸತ್ವಮಾನತು ಕೂಡಿ) ರಜಸ್ ತಮಸ್ಸುಗಳಿಂದ ಕೂಡಿದ ಸತ್ವವನ್ನುಳ್ಳದ್ದು ಮಿಶ್ರಸತ್ವವಾಗಿದೆ. 'ತ್ರಿಗುಣಂ ತಜ್ಜಗದ್ಯೋನಿರನಾದಿ ಪ್ರಭವಾಪ್ಯಯಮ್';[1] 'ತ್ರಿಗುಣಂ ಕರ್ಮಿಣಾಂ ಕ್ಷೇತ್ರಂ ಪ್ರಕೃತೇ ರೂಪಮುಚ್ಯತೇ';[2] 'ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ'[3] ಎನ್ನಲಾಗಿದೆ.

(ಬದ್ಧ........ತಿರೋಧಾಯಕಮಾಯ್) - ಗುಣತ್ರಯಾತ್ಮಕವಾಗಿರುವುದರಿಂದ ರಜಸ್ತಮಾಂಶದಿಂದ ಜ್ಞಾನ ಆನಂದಗಳಿಗೆ ತಿರೋಧಾನವನ್ನುಂಟುಮಾಡುತ್ತದೆ. ಚೇತನರ ಜ್ಞಾನಾನಂದವೆನ್ನದೆ, 'ಬದ್ಧಚೇತನರ' ಎಂದು ವಿಶೇಷಿಸಿರುವುದರಿಂದ, ಕರ್ಮಸಂಸ್ಪೃಷ್ಟರಾದ ಚೇತನರ ಜ್ಞಾನಾನಂದಕ್ಕೆ ಮಾತ್ರವೇ ಅದು ತಿರೋಧಾಯಕ ಎಂಬುದಾಗಿದೆ. ಹಾಗಲ್ಲದಿದ್ದರೆ ತಮ್ಮ ಸ್ವ ಇಚ್ಛೆಯಿಂದ ಪ್ರಾಕೃತಶರೀರ ಪರಿಗ್ರಹ ಮಾಡುವ ನಿತ್ಯಮುಕ್ತರ ಜ್ಞಾನಾದಿಗಳಿಗೂ (ಮಿಶ್ರಸತ್ವದಿಂದ) ಇದರಿಂದ ಸಂಕೋಚ ಏರ್ಪಡಬೇಕಾಗುತ್ತದೆ. ಆದ್ದರಿಂದ

**ಅಹೃತಸಹಜದಾಸ್ಯಾಸ್ಸೂರಯಸ್ರಸ್ತಬಂಧಾವಿಮಲಚರಮದೇಹಾ ಇತ್ಯಮೀ ರಂಗಧಾಮ।**
**ಮಹಿತ ಮನುಜತಿರ್ಯಕ್ ಸ್ಥಾವರ ತ್ವಾಶ್ರಯಂತೇ।'**[4]

ಎಂಬಂತೆ ನಿತ್ಯಮುಕ್ತರು ಇಲ್ಲಿ ಬಂದು ಪ್ರಾಕೃತ ದೇಹಗಳನ್ನು ಪರಿಗ್ರಹಿಸಿ ಶೇಷಿಯಾದ ಪರಮಾತ್ಮನಿಗೆ ಅತಿಶಯವನ್ನುಂಟುಮಾಡುವಾಗ, ಅಂತಹವರಿಗೆ ಈ ಮಿಶ್ರಸತ್ವವು ಜ್ಞಾನಾದಿಗಳ ಸಂಕೋಚವನ್ನುಂಟು ಮಾಡದೇ

ಇರುವುದರಿಂದ ಕೇವಲ ಬದ್ಧಚೇತನರ ಜ್ಞಾನಾದಿಗಳಿಗೆ ಮಾತ್ರವೇ ಇದು ತಿರೋಧಾಯಕ ಎಂಬುದು ಸಿದ್ಧವಾಗುತ್ತದೆ. 'ಅನೀಶಯಾಶೋಚತಿ ಮುಹ್ಯಮಾನಃ';[5] 'ಅನಾದಿಮಾಯಯಾಸುಪ್ತಃ';[6] ಭಗವನ್ಮಾಯಾತಿರೋಹಿತ ಸ್ವಪ್ರಕಾಶಃ'[7] ಎನ್ನಲಾಗಿದೆ.

(ವಿಪರೀತ ಜ್ಞಾನ ಜನಕಮಾಯ್) – ವಿಪರೀತ ಜ್ಞಾನವೆಂದರೆ- 'ಅತಸ್ಮಿಂಸ್ತದ್ಬುದ್ಧಿಃ'-ಎಂದರೆ ಅನಾತ್ಮವಾದ ದೇಹದಲ್ಲಿ ಆತ್ಮ ಬುದ್ಧಿ. ಅಸ್ವತಂತ್ರವಾದ ಆತ್ಮವಸ್ತುವಿನಲ್ಲಿ ಸ್ವತಂತ್ರ ಬುದ್ಧಿ, ಅನನ್ಯಶೇಷವಾದ ಅದರಲ್ಲಿ ಅನ್ಯಶೇಷತ್ವಬುದ್ಧಿ, ಅನೀಶ್ವರರಾದವರನ್ನು ಕುರಿತು ಈಶ್ವರತ್ವ ಬುದ್ಧಿ, ಅಪುರುಷಾರ್ಥವಾದ ಐಶ್ವರ್ಯಾದಿಗಳಲ್ಲಿ ಪುರುಷಾರ್ಥಬುದ್ಧಿ, ಅನುಪಾಯಗಳಾದವುಗಳಲ್ಲಿ ಉಪಾಯತ್ವಬುದ್ಧಿ, ಇತ್ಯಾದಿಗಳು. ಯಥಾರ್ಥಜ್ಞಾನವನ್ನು ಮರೆಸುವುದು ಮಾತ್ರವಲ್ಲದೆ ಇಂತಹ ವಿಪರೀತ ಜ್ಞಾನವನ್ನೂ ಬದ್ಧಚೇತನರಿಗೆ ಉಂಟುಮಾಡುತ್ತದೆ.'ಭಗವತ್ಸ್ವರೂಪ ತಿರೋಧಾನಕರೀಂ ವಿಪರೀತಜ್ಞಾನಜನನೀಂ'[8] ಎಂದು ಇದನ್ನೇ ಶ್ರೀಭಾಷ್ಯಕಾರರು ತಮ್ಮ ಗದ್ಯದಲ್ಲಿ ನಿರೂಪಿಸಿದ್ದಾರೆ.

(ನಿತ್ಯಮಾಯ್)- ನಿತ್ಯವಾಗಿರುವುದು -ಅಂದರೆ ಉತ್ಪತ್ತಿವಿನಾಶರಹಿತವಾಗಿರುವುದು. 'ಅಜಾಮೇಕಾಂ' 'ಗೌರನಾದ್ಯನ್ತವತೀ ಸಾಜನಿತ್ರೀ ಭೂತಭಾವಿನೀ';[9] 'ಅಚೇತನಾಪರಾರ್ಥಾಚ ನಿತ್ಯಾ ಸತತ ವಿಕ್ರಿಯಾ';[10] 'ವಿಕಾರಜನನೀ ಅಜ್ಞಾಂ ಅಷ್ಟರೂಪಾಂ ಅಜಾಂ ಧ್ರುವಾಮ್'[11] ಎನ್ನಲಾಗಿದೆ.

(ಈಶ್ವರನುಕ್ಕು ಕ್ರೀಡಾಪರಿಕರಮಾಯ್)- ಈಶ್ವರನ ಜಗತ್ ಸೃಷ್ಟ್ಯಾದಿಲೀಲೆಗಳಿಗೆ ಉಪಕರಣವಾಗಿರುವಿಕೆ. 'ಕ್ರೀಡತೋ ಬಾಲಕಸ್ಯೇವ ಚೇಷ್ಟಾಂ ತಸ್ಯ ನಿಶಾಮಯ';[12] 'ಅಪ್ರಮೇಯೋಽನಿಯೋಜ್ಯಶ್ಚ ಯತ್ರ ಕಾಮಗಮೋವಶೀ। ಮೋದತೇ ಭಗವಾನ್ ಭೂತೈಃ ಬಾಲಃ ಕ್ರೀಡನಕೈರಿವ';[13] 'ತ್ವಂನ್ಯಙ್ಬುದ್ಧಿರುದಙ್ಬುದ್ಧಿಃ ಕರ್ಮಸೂತ್ರೋಪಪಾದಿತೈಃ, ಹರೇವಿಹರಸಿ ಕ್ರೀಡಾಕಂದುಕೈರಿವ ಜಂತುಭಿಃ'[14] ಎಂದು ಹೇಳಲ್ಪಡುವ ಸರ್ವೇಶ್ವರನ ಲೀಲೆಗೆ ಗುಣತ್ರಯಾತ್ಮಿಕೆಯಾದ ಪ್ರಕೃತಿಯೇ ಪ್ರಧಾನ ಉಪಕರಣವಾಗಿದೆ. 'ಸಿತಾಽಸಿತಾ ಚ ರಕ್ತಾ ಚ ಸರ್ವಕಾಮದುಘಾವಿಭೋಃ'[15] ಎನ್ನಲ್ಪಟ್ಟಿದೆ. 'ದೈವೀಹ್ಯೇಷಾ ಗುಣಮಯೀ'[16] ಎಂದು ಭಗವಾನ್ ತಾನೇ ಶ್ರೀಗೀತೆಯಲ್ಲಿ ಅರುಹಿದ್ದಾನೆ.

(ಪ್ರದೇಶ........ವಿಕಾರಂಗಳೈ ಉಣ್ಡಾಕ್ಕಕ್ಕಡವತಾಯ್) – ಪ್ರದೇಶಭೇದವೆಂದರೆ – ಗುಣವೈಷಮ್ಯವಿಲ್ಲದ ಪ್ರದೇಶವೂ, ಗುಣವೈಷಮ್ಯವುಳ್ಳ ಪ್ರದೇಶವೂ ಎಂದು ಅರ್ಥ. ಗುಣವೈಷಮ್ಯವು ಕಾರ್ಯೋನ್ಮುಖವಾದ ಸ್ಥೂಲಾವಸ್ಥೆಯಲ್ಲಿ ಮಾತ್ರ .ಅದಿಲ್ಲದ ಸ್ಥಳದಲ್ಲೆಲ್ಲಾ ಗುಣಸಾಮ್ಯಾಪನ್ನವಾಗಿರುತ್ತದೆ. ಅದರಲ್ಲಿ ಗುಣವೈಷಮ್ಯವಿಲ್ಲದ ಸ್ಥಳದಲ್ಲಿ ಸದೃಶವಿಕಾರವಾಗಿರುತ್ತದೆ. ವೈಷಮ್ಯವುಳ್ಳ ಸ್ಥಳದಲ್ಲಿ ವಿಸದೃಶ ವಿಕಾರವಾಗಿರುತ್ತದೆ. ಸದೃಶ ವಿಕಾರವೆಂದರೆ-ನಾಮ ರೂಪ ವಿಭಾಗ ನಿರ್ದೇಶ ಅನರ್ಹವಾದ ಸೂಕ್ಷ್ಮವಿಕಾರ. ವಿಸದೃಶವಿಕಾರವೆಂದರೆ-ನಾಮ ರೂಪ ವಿಭಾಗ ನಿರ್ದೇಶಯೋಗ್ಯವಾದ ಸ್ಥೂಲ ವಿಕಾರ. 'ಗುಣಸಾಮ್ಯವನುದ್ರಿಕ್ತಮನ್ಯೂನಮ್'[17] ಎಂಬುದರಿಂದ ಅವ್ಯಕ್ತಾವಸ್ಥೆಯಲ್ಲುಳ್ಳ ವಿಕಾರವೆಲ್ಲವೂ ಸದೃಶವಾಗಿರುತ್ತದೆ. ಮಹದಾದಿಗಳಾಗಿ ಎಲ್ಲವೂ ವಿಸದೃಶವಿಕಾರವಾಗಿರುತ್ತದೆ.

ಕಾಲಭೇದವೆಂದರೆ- ಸಂಹಾರಕಾಲವೂ ಮತ್ತು ಸೃಷ್ಟಿಕಾಲವು. ಸಂಹಾರಕಾಲದಲ್ಲಿ ಈ ಮಿಶ್ರಸತ್ವವು ಅವಿಭಕ್ತವಾಗಿರುವುದರಿಂದ ಎಲ್ಲೂ ಗುಣ ವೈಷಮ್ಯವಿಲ್ಲದ್ದರಿಂದ ಎಲ್ಲೆಡೆ ಸದೃಶವಾಗಿರುತ್ತದೆ.

ಸೃಷ್ಟಿಕಾಲದಲ್ಲಿ ಭಗವದಧಿಷ್ಠಾನ ವಿಶೇಷದಿಂದ ವಿಭಕ್ತವಾಗಿ, ಕಾರ್ಯೋನ್ಮುಖವಾಗಿ ಗುಣವೈಷಮ್ಯ ವೇರ್ಪಟ್ಟಾಗ ವಿಸದೃಶವಿಕಾರಕ್ಕೊಳಗಾಗುತ್ತದೆ. ಸತತ ವಿಕಾರಸ್ಪದವಾದ್ದರಿಂದ ವಿಕಾರವು ಇದಕ್ಕೆ ಸತ್ತಾಪ್ರಯುಕ್ತವಾಗಿದೆ. ಇದರ ಸೌಕ್ಷ್ಮ್ಯ ಸ್ಥೌಲ್ಯ ನಿಬಂಧನವಾದ ವಿಭಾಗ ನಿರ್ದೇಶನ ಮಾತ್ರ ಇದಕ್ಕಿರುವುದೇ ವಿನಃ ನಿರ್ವಿಕಾರವಾದ ಒಂದು ಅವಸ್ಥೆಯೇ ಇದಕ್ಕಿಲ್ಲ.

(ಪ್ರಕೃತಿ, ಅವಿದ್ಯೆ, ಮಾಯ್ಯೆಯೆನ್ನಿರ ಪೇರ್‌ಕಳ್ಳೆಯುಡೈತ್ತಾಯಿರುಕ್ಕುಮಚಿದ್ವಿಶೇಷಮ್) ಪ್ರಕೃತಿ, ಅವಿದ್ಯೆ,ಮಾಯೆ ಎಂಬ ನಾಮಾಂತರಗಳನ್ನುಳ್ಳ ಮಿಶ್ರಸತ್ವವೆಂಬುದು ಒಂದು ಅಚಿದ್ವಿಶೇಷ ಎಂದು ವಾಕ್ಯಾನ್ವಯ ಮಾಡುತ್ತಾರೆ.

## ಸೂ. 10 ಪ್ರಕೃತಿ ಎನ್ನಿಗ್ರದು-ವಿಕಾರಂಗಳ್ಳೆ ಪಿರಪ್ಪಿಕ್ಕೆಯಾಲೇ. ಅವಿದ್ಯೆ ಎನ್ನಿಗ್ರದು- ಜ್ಞಾನವಿರೋಧಿಯಾಗ್ಗೆಯಾಲೇ. ಮಾಯ್ಯೆ ಎನ್ನಿಗ್ರದು-ವಿಚಿತ್ರ ಸೃಷ್ಟಿಯ್ಯೆ ಪ್ಪಣ್ಣು ಗ್ಗೆಯಾಲೇ.

'ಮಿಶ್ರಸತ್ವ' ದ ನಾಮಭೇದಗಳ ಸ್ವಭಾವಗಳನ್ನು ಈ ಸೂತ್ರದಲ್ಲಿ ವಿವರಿಸುತ್ತಾರೆ.

**'ಮೂಲಪ್ರಕೃತಿರವಿಕೃತಿಃ'**[1] ಇತ್ಯಾದಿಗಳಲ್ಲಿ ಪ್ರಕೃತಿ ಶಬ್ದವು ಕಾರಣವಾಚಿಯಾಗಿ ಹೇಳಲ್ಪಟ್ಟಿದೆ. ಇದು ಉಪಾದಾನಕಾರಣಕ್ಕೆ ವಾಚಕವಾಗಿದೆ. ಆದ್ದರಿಂದಲೇ ಬ್ರಹ್ಮವು ಜಗತ್ತಿನ ಉಪಾದಾನಕಾರಣವೆಂದು ಹೇಳುವ ಸೂತ್ರಕಾರರು (ಬ್ರಹ್ಮಸೂತ್ರಕಾರರಾದ ವ್ಯಾಸಮಹರ್ಷಿ) **'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್'**[2] ಎಂದು ಪ್ರಕೃತಿ ಶಬ್ದದಿಂದ ತಿಳಿಸಿದ್ದಾರೆ. ಮಹದಾದಿ ವಿಕಾರಗಳನ್ನು ತನ್ನಿಂದ ಉಂಟುಮಾಡುವುದರಿಂದ ಮಿಶ್ರಸತ್ವವನ್ನು **'ಪ್ರಕೃತಿ'** ಎನ್ನಲಾಗುತ್ತಿದೆ.

ಅವಿದ್ಯಾ ಶಬ್ದವು ವಿದ್ಯಾಭಾವಕ್ಕೂ, ವಿದ್ಯೇತರಕ್ಕೂ, ವಿದ್ಯಾವಿರೋಧಿಗೂ ವಾಚಕವಾಗಿದ್ದರೂ ವಿಷಯಾನುಗುಣವಾಗಿ ಈ ಪ್ರಯೋಗವಿರುವುದರಿಂದ **'ಅವಿದ್ಯೆ'** ಎನ್ನುವುದು ಜ್ಞಾನವಿರೋಧಿಯಾದ್ದರಿಂದ. **'ಜ್ಞಾನಾನಂದಂಗಳುಕ್ಕು ತಿರೋಧಾಯಕಮಾಯ್'**ಎಂದು ಇದರ ಜ್ಞಾನವಿರೋಧಿತ್ವವು ಹಿಂದೆಯೇ ಹೇಳಲ್ಪಟ್ಟಿದೆ. ಅಸುರ, ರಾಕ್ಷಸಾದಿಕ್ರಿಯೆಗಳನ್ನು, ಆಶ್ಚರ್ಯಕರತ್ವವನ್ನು ಮಾಯಾ ಶಬ್ದದಿಂದ ಹೇಳುವಂತೆ ಇದನ್ನೂ 'ಮಾಯೆ' ಎನ್ನುವುದು ವಿಚಿತ್ರ ಸೃಷ್ಟಿಯನ್ನು ಮಾಡುವುದರಿಂದ. ಒಂದರಂತೆ ಮತ್ತೊಂದಿಲ್ಲದೆ ವಿಸ್ಮಯನೀಯವಾದ ಕಾರ್ಯಗಳನ್ನು ಉಂಟುಮಾಡುವುದರಿಂದ **'ಮಾಯೆ'** ಎನ್ನಲಾಗುತ್ತದೆ.

## ಸೂ. 11 ಇದುತಾನ್ 'ಪೊಂಗೈಮ್ಬುಲನುಂ ಪೊರಿಯ್ಯೇನ್ದುಮ್ ಕರುಮೇನ್ದಿರಿಯಮ್ ಐಮ್ಬೂತ್ತಮ್ ಇಂಗಿವ್ವುಯಿರೇಯ್ ಪಿರಕಿರುದಿ ಮಾನಾಂಗಾರ ಮನಂಗಳೇ' ಎನ್ನಿಗ್ರಪಡಿಯೇ ಇರುಪತ್ತುನ್ನಾಲು ತತ್ವಮಾಯಿರುಕ್ಕುಮ್.

ಅಚಿತ್ತು ಕಾರ್ಯಕಾರಣ ರೂಪೇಣ ಅನೇಕ ತತ್ವವಾಗಿರುತ್ತದೆ. ಎಂಬುದನ್ನು ಈ ಸೂತ್ರದಲ್ಲಿ ನಿರೂಪಿಸಲಾಗಿದೆ.

**(ಇತುತಾನ್‌ಪೊಂಗು ಐಮ್ಬುಲನ್)**- ಶಬ್ದಾದಿಗಳು ಉಕ್ಕಿ ಚೇತನರನ್ನು ವಿಕೃತರನ್ನಾಗಿಸುವ ಇವುಗಳ ಉದ್ರೇಕವನ್ನು ತಿಳಿಸಲು **'ಪೊಂಗೈಮ್ಬುಲನ್'** ಎನ್ನಲಾಗಿದೆ. ಆದರೆ ಇಲ್ಲಿ 'ಐಮ್ಬುಲನ್‌ಗಳು' ಎಂಬುದಷ್ಟೇ ವಿವಕ್ಷಿತವಾದದ್ದು. ಎಂದರೆ 5 ವಿಷಯಗಳು -ಶಬ್ದ, ರೂಪ, ರಸ,ಗಂಧ, ಸ್ಪರ್ಶ

**(ಪೊರಿಯ್ಯೆನ್ದುಮ್)**- ಶ್ರೋತ್ರ,ಚಕ್ಷು, ಘ್ರಾಣ, ರಸನಾ, ತ್ವಕ್ ಎಂಬುವುಗಳು-ಐದು ಜ್ಞಾನೇಂದ್ರಿಯಗಳು.

**(ಕರುಮೇನ್ದಿರಿಯಮ್)**- ವಾಕ್, ಪಾಣಿ, ಪಾದ, ಗುದ, ಉಪಸ್ಥ ಎಂಬವುಗಳು-ಐದು ಕರ್ಮೇಂದ್ರಿಯಗಳು.

**(ಐಮ್ಬೂತಮ್)**:- ಪಂಚಭೂತಗಳು- ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ.

(ಇಜ್ಜುಗ್ವುಯಿರೇಯ್ ಪಿರಕಿರುದಿ) - ಸಂಸಾರದೆಸೆಯಲ್ಲಿ ಆತ್ಮನೊಡನೆ ಅತ್ಯಂತ ಸಂಸ್ಪೃಷ್ಟವಾದ ಪ್ರಕೃತಿ.

(ಮಾನಾಂಗಾರಮನಂಗಳ್) - ಮಹತ್, ಅಹಂಕಾರ್ ಮತ್ತೆ ಮನುಸ್ಸು.

ಹೀಗೆ ಇಪ್ಪತ್ತುನಾಲ್ಕು ತತ್ವಗಳನ್ನು ಹೇಳುವ ಆಳ್ವಾರ್ 'ತನ್ಮಾತ್ರೆ' ಗಳನ್ನು ಹೇಳದೆ ಶಬ್ದಾದಿಗಳನ್ನು ಹೇಳಿದ್ದು ತನ್ಮಾತ್ರೆಗಳಿಗೆ ಭೂತಗಳೊಡನೆ ಸ್ವರೂಪ ಭೇದವಿಲ್ಲದೆ ಅವಸ್ಥಾಭೇದ ಮಾತ್ರ ಇರುವುದರಿಂದ. ತನ್ಮಾತ್ರೆಗಳಾದ ಭೂತಗಳು ಹತ್ತನ್ನೂ ಐದುತತ್ವಗಳಾಗಿಸಿ ಇವುಗಳನ್ನೂ, ಏಕಾದಶ ಇಂದ್ರಿಯಗಳೂ, ಪ್ರಕೃತಿ, ಮಹತ್ತು, ಅಹಂಕಾರವೆಂದೂ ಇಪ್ಪತ್ತು ನಾಲ್ಕು ತತ್ವಗಳಾಗಿ ಹೇಳುವ ಒಂದು ಪಕ್ಷವೂ ಇರುವುದರಿಂದ ಹೀಗೆ ಹೇಳಲಾಗಿದೆ. ಆದರೆ ಎರಡು ಪಕ್ಷದಲ್ಲೂ ಸಂಖ್ಯಾಭೇದವಿಲ್ಲ.

## ಸೂ. 12 ಇದಿಲ್ ಪ್ರಥಮತತ್ವಮ್ ಪ್ರಕೃತಿ.

ಈ ತತ್ವಗಳ ಕ್ರಮಗಳನ್ನು ಹೇಳುವಲ್ಲಿ ಪ್ರಕೃತಿಯು ಪ್ರಥಮ ಸ್ಥಾನದಲ್ಲಿದೆ. ಪ್ರಕೃತಿ ಎಂದೂ, ಪ್ರಧಾನವೆಂದೂ,ಅವ್ಯಕ್ತವೆಂದೂ ಇದನ್ನುಹೇಳಲಾಗುತ್ತದೆ. 'ಪ್ರಕೃತಿ' ಎಂಬುದರ ಕಾರಣವನ್ನುಹಿಂದೆ ಹೇಳಲಾಗಿದೆ. ಭಗವಂತನ ಲೀಲೆಗೆ ಪ್ರಧಾನವಾದ ಉಪಕರಣವಾದ್ದರಿಂದ 'ಪ್ರಧಾನ' ಎನ್ನಲಾಗುತ್ತದೆ. ಅಭಿವ್ಯಕ್ತವಾಗದ ಗುಣ ವಿಭಾಗವಾಗಿರುವುದರಿಂದ-'ಅವ್ಯಕ್ತ 'ಎನ್ನಲಾಗುತ್ತದೆ.

## ಸೂ. 13 ಇದು ಅವಿಭಕ್ತತಮಸ್ಸೆನ್ನುಮ್, ವಿಭಕ್ತತಮಸ್ಸೆನ್ನುಮ್, ಅಕ್ಷರಮೆನ್ನುಮ್ ಶಿಲ ಅವಸ್ಥೈಹಳೈ ಉಡೈತ್ತಾಯಿರುಕ್ಕುಮ್.

ಈ 24ರಲ್ಲಿ ಪ್ರಥಮ ತತ್ವವಾದ ಪ್ರಕೃತಿಯ ಅವಸ್ಥಾ ವಿಶೇಷಗಳನ್ನು ಇಲ್ಲಿ ಹೇಳಲಾಗಿದೆ.

**(ಇದು ಅವಿಭಕ್ತ ತಮಸ್ಸೆನ್ನುಮ್)**-**'ಅವ್ಯಕ್ತಮಕ್ಷರೇಲೀಯತೆ'**; **'ಅಕ್ಷರಂತಮಸಿಲೀಯತೇ'**; **'ತಮಃ ಪರೇದೇವ ಏಕೀಭವತಿ'**[1] ಎಂಬಂತೆ ಲಯವಾಗುವ ಕಾಲದಲ್ಲಿ ಅವ್ಯಕ್ತಾವಸ್ಥೆ ಕಳೆದು ಅಕ್ಷರಾವಸ್ಥೆಗೆ ಬಂದು, ಅದೂ ಕಳೆದು ಅತಿಸೂಕ್ಷ್ಮವಾದ ತಮಸ್ ಶಬ್ದವಾಚ್ಯವಾಗಿ ಅದೂ ಕೂಡ ನಾಮರೂಪವಿಭಾಗಕ್ಕೆ ಅನರ್ಹವಾಗಿ ಸರ್ವೇಶ್ವರನೊಡನೆ ಏಕೀಭವಿಸುವುದರಿಂದ **'ಅವಿಭಕ್ತ ತಮಸ್'** ಎನ್ನಲಾಗುತ್ತದೆ. ಸೃಷ್ಟಿಕಾಲ ಬಂದಾಗ **'ಪ್ರಾದುರಾಸೀತ್ತಮೋನುದಃ'**[2] ಎಂಬಂತೆ ಪರಮಾತ್ಮನಿಂದ ಪ್ರೇರಿತವಾಗಿ ನಾಮರೂಪ ವಿಭಾಗ ಯೋಗ್ಯವಾಗುವಂತೆ, ಅವನಿಂದ ವಿಭಜಿಸಲ್ಪಟ್ಟು ಕಾರ್ಯೋನ್ಮುಖವಾಗುವುದರಿಂದ **'ವಿಭಕತಮಸ್ಸೆಂ'**ದೂ ಅನಂತರ ಅವನ ಸಂಕಲ್ಪ ವಿಶೇಷದಿಂದಲೇ ತಮೋವಸ್ಥೆ (ಪುರುಷ ಸಮಷ್ಟಿಗರ್ಭವೆಂದು ವಿವೇಕಿಸಲು ಸಾಧ್ಯವಿಲ್ಲದ) ಕಳೆದು ಪುರುಷ ಸಮಷ್ಟಿಗರ್ಭವೆಂದು ತೋರುವಂತಹ ಸ್ಥಿತಿಯನ್ನು ಹೊಂದುವುದರಿಂದ **'ಅಕ್ಷರ'**ವೆಂದೂ ಹೀಗೆ ಪ್ರಕೃತಿಯು ಕೆಲವು ಅವಸ್ಥಾ ವಿಶೇಷಗಳನ್ನುಳ್ಳದ್ದಾಗಿರುತ್ತದೆ.

ಆದ್ದರಿಂದ ಇದು 'ಅವಿಭಕ್ತತಮಸ್ಸಾ'ಗುವುದೆಂದರೆ ಅವ್ಯಕ್ತ, ಅಕ್ಷರಾವಸ್ಥೆಗಳು ಕಳೆದು ತಮಶ್ಶಬ್ದವಾಚ್ಯವಾಗಿ ನಾಮರೂಪ ವಿಭಾಗಕ್ಕೆ ಅನರ್ಹವಾಗವಂತೆ ಪರಮಾತ್ಮನೊಡನೆ ಏಕೀಭವಿಸಿ ನಿಲ್ಲುವ ಸ್ಥಿತಿಯಾಗಿದೆ.

ವಿಭಕ್ತ ತಮಸ್ಸಾಗುವುದೆಂದರೆ - ನಾಮರೂಪ ವಿಭಾಗಕ್ಕೆ ಅರ್ಹವಾಗಿ ವಿಭಜಿಸಲ್ಪಟ್ಟು ಕಾರ್ಯೋನ್ಮುಖವಾಗುವ ಸ್ಥಿತಿಯಾಗಿದೆ.

ಅಕ್ಷರವೆಂದರೆ- ಇದು ಅಚಿತ್ತೆಂದೂ, ಇದರಲ್ಲಿ ಪುರುಷ ಸಮಷ್ಟಿಯಿದೆಯೆಂದೂ, ವಿವೇಕಿಸಲಾಗದ ಅತಿಸೂಕ್ಷ್ಮವಾದ ತಮೋವಸ್ಥೆ ಕಳೆದು ಪುರುಷ ಸಮಷ್ಟಿಗರ್ಭತ್ವವು ತೋರುವಂತಹ ಸ್ಥಿತಿಯಾಗಿದೆ.

'ಗುಣವೈಷಮ್ಯಸ್ಯಾನಂತರ ಪೂರ್ವಾವಸ್ಥಾ ಗುಣಸಾಮ್ಯಮ್ ಗುಣಸಾಮ್ಯಲಕ್ಷಣಮವ್ಯಕ್ತಮ್' (ಅವ್ಯಕ್ತಮಕ್ಷರೇಲೀಯತೇ' ಎಂಬಂತೆ) 'ಯಸ್ಯಾಮವಸ್ಥಾಯಾಂ ಗುಣಸಾಮ್ಯಮಸ್ಫುಟಂ, ತದವಸ್ಥಂ ಚೇತನಸಮಷ್ಟಿಗರ್ಭಮ್ ತತ್ ಅಕ್ಷರ ಶಬ್ದೇನ ಉಚ್ಯತೇ, ನತು ಚೇತನ ಮಾತ್ರಂ ತಸ್ಯಾವ್ಯಕ್ತ ಪ್ರಕೃತಿ ತತ್ವತಮೋವಿಕೃತಿತ್ವಯೋಗಾತ್ ಅತಸ್ಸರ್ವಂ ತತ್ವಜಾತಂ; ಚಿದಚಿದಾತ್ಮಕಂ ಮನ್ತವ್ಯಮ್.'ಪ್ರಧಾನಾದಿ ವಿಶೇಷಾನ್ತಂ ಚೇತನಾ ಚೇತನಾತ್ಮಕಂ' ಇತಿ ಪರಾಶರ ವಚನಾತ್. ಅತ್ರತು ಚಿತ್ ಗರ್ಭೇ ವಸ್ತುನ್ಯ ಕ್ಷರ ಶಬ್ದ ಉಪಚರಿತಃ ಪ್ರಯೋಗೇಽ ನ್ಯಥಾ ಸಿದ್ಧೇ ಶಕ್ಯನ್ತರ ಕಲ್ಪನಾಽ ಯೋಗಾತ್ (ಅಕ್ಷರಂ ತಮಸಿ ಲೀಯತೇ ಇತಿ) ಚಿತ್ ಗರ್ಭತ್ವಂ ಅಚಿತ್ವಮಪಿ ಯತ್ರಾವಿವೇಕ್ತುಮಶಕ್ಯಂ ತದವಸ್ಥಮತಿ ಸೂಕ್ಷ್ಮಂ ಪ್ರಧಾನಂ ತಮಶ್ಶಬ್ದಂ ನಾಡಿಲಭ್ಯಮ್. ಅಕ್ಷರಾದ್ಯವಸ್ಥಾ ಪ್ರಾಪ್ತೌನ್ಮುಖ್ಯವಿಶಿಷ್ಟಂ ತದೇವ ವಿಭಕ್ತಂ ತಮಃ ತದೌನ್ಮುಖ್ಯರಹಿತಂ ಅವಿಭಕ್ತಂ ತಮಃ, ಪರಮಾತ್ಮ ಶರೀರತಯಾಽಪಿ ಚಿಂತಯಿತು ಮಶಕ್ಯಮ್. ಸಲಿಲವಿಲೀನ ಲವಣ ಚಂದ್ರಕಾಂತಸ್ಥಸಲಿಲ ಸೂರ್ಯಕಾಂತಸ್ಥ ವಹ್ನಿ ಕಲ್ಪಂ. ಸರ್ವಜ್ಞ ಪರಮಾತ್ಮೈಕ ವೇದ್ಯಮವತಿಷ್ಠತೇ. ಭೂತಲವಿನಿಹಿತ ಬೀಜ ಸ್ಥಾನೀಯಮವಿಭಕ್ತಂ ತಮಃ, ಮೃನ್ನಿಸ್ಸೃತಬೀಜವತ್ ವಿಭಕ್ತಂತಮಃ, ಸಲಿಲಸಂಸ್ಪರ್ಷಾರ್ದಶಿಥಿಲಾವಯವಬೀಜತುಲ್ಯಂ ಅಕ್ಷರಂ. ಉಚ್ಛೂನ ಬೀಜಸಮಾನಂ ಅವ್ಯಕ್ತಂ, ಅಂಕುರ ಸ್ಥಾನೀಯೋಮಹಾನ್ ಇತಿ ವಿವೇಕಃ' [3] ಎಂದು ಸುಬಾಲೋಪನಿಷತ್ ವ್ಯಾಖ್ಯಾನ ಭಾಷ್ಯದಲ್ಲಿ ಶ್ರುತಪ್ರಕಾಶಿಕಾಚಾರ್ಯರು ಇದರ ಅವಸ್ಥಾವಿಶೇಷಗಳನ್ನು ಸುಸ್ಪಷ್ಟವಾಗಿ ತಿಳಿಸಿದ್ದಾರೆ. ಇದರಿಂದ ಅಕ್ಷರ, ತಮಸ್ಸು, ಹೂವಿನ ಮೊಗ್ಗು ಹೀಚಿನ ಅವಸ್ಥೆಯಂತೆ ಪ್ರಕೃತಿಯ ಸಂಕೋಚ ದೆಸೆಯಾದ್ದರಿಂದ, ಮಹದಾದಿಗಳಂತೆ ಬೇರೆ ತತ್ವಗಳಲ್ಲ ಎಂಬುದು ನಿಶ್ಚಿತ ವಾಗಿದೆ.

## ಸೂ. 14 ಇದಿಲ್ ನಿನ್ರುಮ್ ಗುಣವೈಷಮ್ಯತ್ತಾಲೇ ಮಹದಾದಿ ವಿಕಾರಂಗಳ್ ಪಿರಕ್ಕುಮ್

ಈ ಪ್ರಕೃತಿಯಿಂದಲೇ ಗುಣಗಳ ವೈಷಮ್ಯದಿಂದ ಮಹತ್ತು, ಅಹಂಕಾರ, ಇತ್ಯಾದಿ ವಿಕೃತಿಗಳು ಏರ್ಪಡುತ್ತದೆ.

## ಸೂ. 15 ಗುಣಂಗಳಾಹಿರನ - ಸತ್ವ, ರಜಸ್, ತಮಸ್ಸುಕ್ಕಳ್.

ಗುಣಗಳೆಂದರೆ ಸತ್ವ,ರಜಸ್ಸು ಮತ್ತು ತಮಸ್ಸುಗಳು.

## ಸೂ. 16 ಇವೈ ಪ್ರಕೃತಿಕ್ಕು ಸ್ವರೂಪಾನುಬಂಧಿಗಳಾನ ಸ್ವಭಾವಂಗಳಾಯ್, ಪ್ರಕೃತ್ಯವಸ್ಥೆಯಿಲ್ ಅನುದ್ಭೂತಂಗಳಾಯ್, ವಿಕಾರದಶೈಯಿಲ್ ಉದ್ಭೂತಂಗಳಾಯಿರುಕ್ಕುಮ್.

'ಸತ್ವಂ, ರಜಸ್ತಮ ಇತಿಗುಣಾಃ ಪ್ರಕೃತಿ ಸಂಭವಾಃ'[1] 'ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ'[2] 'ಸತ್ವಂರಜಸ್ತಮಃ ಇತಿ ಪ್ರಕೃತೇಃ ಗುಣಾಃ' ಎನ್ನಲಾಗಿದೆ.

ಈ ಗುಣಗಳು ಆಗಂತುಕವಲ್ಲದೆ (ಬಂದು ಹೋಗುವಂತಹುದಲ್ಲದೆ) ಸತ್ತಾ ಪ್ರಯುಕ್ತಗಳಾದ ಕಾರಣ ಇವುಗಳನ್ನು ಪ್ರಕೃತಿಯ ಸ್ವರೂಪಾನುಬಂಧಿಗಳು ಎನ್ನಲಾಗಿದೆ. ಅಂದರೆ ಇವುಗಳಿಲ್ಲದೆ ಅವಸ್ಥೆಯೇ ಇಲ್ಲ ಎಂಬುದಾಗಿದೆ.

ಇವುಗಳನ್ನು ಸ್ವಭಾವಗಳೆಂದೂ, ಸ್ವರೂಪಾನುಬಂಧಿಗಳೆಂದೂ ಹೇಳುವುದರಿಂದ 'ಮೂಲ ಪ್ರಕೃತಿರ್ನಾಮ

**ಸುಖ ದುಃಖ ಮೋಹಾತ್ಮಕಾನಿ ಲಾಘವ ಪ್ರಕಾಶಚಲನೋಪಷ್ಟಂಭನ ಗೌರವಾವರಣಕಾರ್ಯಾಣ್ಯತ್ಯನ್ತಾತೀಂದ್ರಿಯಾಣಿ ಕಾರ್ಯೈಕ ನಿರೂಪಣ ವಿವೇಕಾನಿ ಅನ್ಯೂನಾತಿರೇಕಾಣಿ ಸಮತಾಮುಪೇತಾನಿ ಸತ್ವರಜಸ್ತಮಾಂಸಿ ದ್ರವ್ಯಾಣಿ'**[3] ಎಂದು ಇವುಗಳನ್ನು ದ್ರವ್ಯಗಳಾಗಿಯೂ, ಇವುಗಳನ್ನು ಪ್ರಕೃತಿ ಸ್ವರೂಪಗಳಾಗಿಯೂ, ಹೇಳುವ ಸಾಂಖ್ಯಮತವು ನಿರಸನಮಾಡಲ್ಪಟ್ಟಿದೆ. ಈ ಸಾಂಖ್ಯಮತವನ್ನು ನಿರಾಕರಿಸಲೆಂದೇ ಆಳವಂದಾರ್ **'ಗುಣಾಃಪ್ರಧಾನಮ್'** ಎಂದು ತಿಳಿಸಿದ್ದಾರೆ.

**(ಪ್ರಕೃತ್ಯವಸ್ಥೈಯಿಲ್..........ಉದ್ಭೂಂತಂಗಳಾಯಿರುಕ್ಕುಮ್)** - ಪ್ರಕೃತ್ಯವಸ್ಥೆಯಲ್ಲಿ ಈ ಗುಣಗಳು ಸಾಮ್ಯಾಪನ್ನವಾಗಿರುವುದರಿಂದ (ಸಮವಾಗಿರುವುದರಿಂದ) ಇವುಗಳ ಸ್ವರೂಪ ವಿಭಾಗಗಳು ತಿಳಿಯುವುದಿಲ್ಲ. ವಿಕೃತಿ ಅವಸ್ಥೆಯಲ್ಲಿ ವೈಷಮ್ಯಾಪತ್ತಿಯಿಂದ (ಅಸಮವಾಗಿರುವುದರಿಂದ) ಸ್ವರೂಪ ವಿಭಾಗವು ತೋರುವುದು. **'ಸತ್ವರಜಸ್ತಮಾಂಸಿ ತ್ರಯೋಗುಣಾಃ'; 'ಪ್ರಕೃತೇಃ ಸ್ವರೂಪಾನುಬಂಧಿನಃ ಸ್ವಭಾವ ವಿಶೇಷಾಃ ಪ್ರಕಾಶಾದಿಕಾರ್ಯೈಕ ನಿರೂಪಣೀಯಾಃ ಪ್ರಕೃತ್ಯವಸ್ಥಾಯಾಮನುದ್ಭೂತಾಸ್ತದ್ವಿಕಾರೇಷು ಮಹದಾದಿಷು ಉದ್ಭೂತಾಃ'** [4] ಎಂದು ಶ್ರೀಭಾಷ್ಯಕಾರರೂ ಇದನ್ನು ನಿರೂಪಿಸಿದ್ದಾರೆ.

## ಸೂ. 17 ಸತ್ವಮ್ ಜ್ಞಾನಸುಖಂಗಳೈಯುಮ್ ಉಭಯ ಸಂಗತ್ತೈಯುಮ್ ಪಿರಪ್ಪಿಕ್ಕುಂ.

ವಿಕಾರದೆಸೆಯಲ್ಲಿ ಈ ಗುಣಗಳು ಕಾರ್ಯಗಳಿಂದ ಮಾತ್ರವೇ ನಿರೂಪಣೀಯಗಳಾದ್ದರಿಂದ ಇವುಗಳ ಕಾರ್ಯಗಳನ್ನು ಹೇಳುವುದರ ಮೂಲಕ ಇವುಗಳ ಸ್ವರೂಪವನ್ನು ತಿಳಿಸುತ್ತಾರೆ.

ಸತ್ವಗುಣವು ನಿರ್ಮಲವಾದ್ದರಿಂದ ಜ್ಞಾನಸುಖಾವರಣ ಮಾತ್ರವಲ್ಲದೆ ಅವುಗಳಿಗೆ ಜನಕವಾಗಿಯೂ, ಅವುಗಳನ್ನು ಪಡೆಯಲು ಪ್ರವರ್ತಿಸುವಂತೆ ಅವೆರಡರಲ್ಲೂ ಸಂಗವನ್ನೂ ಉಂಟುಮಾಡುತ್ತದೆ. **'ತತ್ರ ಸತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಂ'; 'ಸುಖಸಂಗೇನ ಬಧ್ನಾತಿ ಜ್ಞಾನ ಸಂಗೇನಚಾನಘ'**[1] ಎನ್ನಲಾಗಿದೆ.

## ಸೂ. 18 ರಜಸ್ಸುರಾಗತೃಷ್ಣಾಸಂಗಂಗಳೈಯುಂ ಕರ್ಮಸಂಗತ್ತೈಯುಂ ಪಿರಪ್ಪಿಕ್ಕುಂ.

ರಜೋಗುಣದ ಕಾರ್ಯಗಳನ್ನು ಇಲ್ಲಿ ತಿಳಿಸಲಾಗಿದೆ.

**ರಜೋರಾಗಾತ್ಮಕಂ ವಿದ್ಧಿ ತೃಷ್ಣಾ ಸಂಗಸಮುದ್ಭವಮ್।**

**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಾಮ್।**[1] ಎನ್ನಲಾಗಿದೆ ಶ್ರೀಗೀತೆಯಲ್ಲಿ.

ರಾಗವೆಂದರೆ - ಸ್ತ್ರೀ ಪುರುಷರುಗಳಿಗೆ ಅನ್ಯೋನ್ಯ ಉಂಟಾಗುವ ಸ್ಪೃಹೆಯಾಗಿದೆ- (ಆಸೆ)

ತೃಷ್ಣಾ ಎಂದರೆ - ಶಬ್ದಾದಿ ಸರ್ವವಿಷಯಗಳ ಸ್ಪೃಹೆ.

ಸಂಗವೆಂದರೆ - ಪುತ್ರ ಮಿತ್ರಾದಿಗಳಲ್ಲಿ ಸಂಶ್ಲೇಷ ಸ್ಪೃಹೆ.

ಕರ್ಮವೆಂದರೆ- ಕ್ರಿಯೆಗಳಲ್ಲಿ ಸ್ಪೃಹೆ.

## ಸೂ. 19 ತಮಸ್ಸು ವಿಪರೀತ ಜ್ಞಾನತ್ತೈಯುಮ್ ಅನವಧಾನತ್ತೈಯುಮ್ ಆಲಸ್ಯತ್ತೈಯುಮ್ ನಿದ್ರೈಯೈಯುಮ್ ಪಿರಪ್ಪಿಕ್ಕುಮ್.

ತಮೋಗುಣದಿಂದ ಏರ್ಪಡುವ ಕಾರ್ಯಗಳನ್ನು ಇಲ್ಲಿ ವಿವರಿಸುತ್ತಾರೆ.

**ತಮಸ್ತ್ವಜ್ಞಾನಜಂ ವಿದ್ಧಿಮೋಹನಂ ಸರ್ವದೇಹಿನಾಂ।**

**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ।**[1] ಎಂಬುದು ಶ್ರೀ ಗೀತೆ.

ವಿಪರೀತಜ್ಞಾನವೆಂದರೆ- ವಸ್ತುಯಾಥಾತ್ಮ್ಯ ವಿಪರೀತವಿಷಯಜ್ಞಾನ -(ಒಂದು ವಸ್ತುವನ್ನು ಬೇರೊಂದಾಗಿ ತಿಳಿಯುವುದು ಉದಾ:- ಕಂಭವನ್ನು ಮನುಷ್ಯ ಎಂದು ಭಾವಿಸುವುದು)

ಅನವಧಾನವೆಂದರೆ- ಮಾಡುವ ಕೆಲಸಕ್ಕೊಂದು ಗುರಿಯಿಲ್ಲದಿರುವಿಕೆ.

ಆಲಸ್ಯವೆಂದರೆ - ಯಾವ ಕೆಲಸವನ್ನೂ ಪ್ರಾರಂಭಮಾಡುವುದಕ್ಕೂ ಬಿಡದ ಸೋಮಾರಿತನ.

ನಿದ್ರೆಯೆಂದರೆ - ಇಂದ್ರಿಯ ಪ್ರವೃತ್ತಿ ಶಾಂತಿಯಿಂದ ಏರ್ಪಡುವ ಸರ್ವೇಂದ್ರಿಯಗಳ ಪ್ರವರ್ತನದ ಉಪರತಿ (ಶ್ರಮಗೊಂಡ ಇಂದ್ರಿಯಗಳು ತಮ್ಮ ಕಾರ್ಯದಿಂದ ವಿಶ್ರಾಂತಿ ಪಡೆಯುವುದು)

## ಸೂ. 20 ಇವ್ವೈ ಸಮಂಗಳಾಂಪೋದು, ವಿಕಾರಂಗಳ್ ಸಮಂಗಳಾಯ್ ಅಸ್ಪಷ್ಟಂಗಳಾಯಿರುಕ್ಕುಮ್. ವಿಷಮಂಗಳಾಂಪೋತು. ವಿಕಾರಂಗಳ್ ವಿಷಮಂಗಳುಮಾಯ್ ಸ್ಪಷ್ಟಂಗಳುಮಾಯಿರುಕ್ಕುಮ್.

ಈ ಗುಣಗಳ ಸಮದೆಸೆಯಲ್ಲೂ, ವಿಷಮದೆಸೆಯಲ್ಲೂ ಪ್ರಕೃತಿಯ ವಿಕಾರಗಳನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ.

ಈ ಗುಣಗಳು ಪರಸ್ಪರ ಉದ್ರೇಕಹೊಂದುವುದೋ, ಅಥವಾ ಒಂದೊಂದೇ ಉದ್ರೇಕ ಹೊಂದುವುದೋ ಇಲ್ಲದೆ ಸಮವಾಗಿರುವಾಗ ಪ್ರಕೃತಿಯ ವಿಕಾರಗಳು ನಾಮ, ರೂಪ, ವಿಶೇಷರಹಿತವಾಗಿ ತನ್ನಲ್ಲಿ ಸಮವಾಗಿ ಪ್ರಮಾಣಗಳಿಗೆ ಸಿಗದಂತೆ ಅಸ್ಪಷ್ಟವಾಗಿರುತ್ತವೆ.

ಈ ಗುಣಗಳು ಉದ್ರೇಕಗೊಂಡು ವಿಷಮವಾದಾಗ, ಪ್ರಮಾಣಗಳಿಂದ ಅರಿಯಲು ಸಾದ್ಯವಾಗುವಂತೆ ಸ್ಪಷ್ಟವಾಗಿರುತ್ತವೆ.

'ಪ್ರದೇಶಭೇದದಿಂದಲೂ, ಕಾಲಭೇದದಿಂದಲೂ' ಎಂದು ಹಿಂದೆ ಹೇಳಲ್ಪಟ್ಟದ್ದಕ್ಕೂ ಈ ಗುಣ ಸಾಮ್ಯ, ವೈಷಮ್ಯಗಳೇ ಕಾರಣ. ಅದು ಇಲ್ಲಿ ವಿಶದವಾಗಿದೆ.

## ಸೂ. 21 ವಿಷಮವಿಕಾರಂಗಳಿಲ್ ಪ್ರಥಮ ವಿಕಾರಮ್ ಮಹಾನ್.

**ಗುಣಸಾಮ್ಯಾತ್ತತಸ್ತಸ್ಮಾತ್ ಕ್ಷೇತ್ರಜ್ಞಾಧಿಷ್ಠಿತಾನ್ಮುನೇ।**

**ಗುಣ ವ್ಯಂಜನ ಸಂಭೂತಿಃ ಸರ್ಗಕಾಲೇ ದ್ವಿಜೋತ್ತಮ।**[1]

ಎಂದರೆ ಗುಣಸಾಮ್ಯವುಳ್ಳದ್ದಾಗಿ ಕ್ಷೇತ್ರಜ್ಞನಾದ ಬದ್ಧಚೇತನರಿಂದ ಅಧಿಷ್ಠಿತವಾದ ಅವ್ಯಕ್ತದಿಂದ, ವ್ಯಕ್ತಗುಣೋನ್ಮೇಷಹೇತುವಾದ ಗುಣವ್ಯಂಜನವೆಂದು ಹೆಸರು ಪಡೆದ **'ಮಹತ್‌ತತ್ವ'**ವು ಉತ್ಪನ್ನವಾಗುತ್ತದೆ.

## ಸೂ. 22 ಇದು ಸಾತ್ವಿಕಮ್, ರಾಜಸಮ್, ತಾಮಸಮೆನ್ರು ತ್ರಿವಿಧಮಾಯ್ ಅಧ್ಯವಸಾಯಜನಕಮಾಯಿರುಕ್ಕುಮ್.

ಈ ಮಹತ್ತತ್ತ್ವವು **'ಸಾತ್ವಿಕೋರಾಜಸಶ್ಚೈವ ತಾಮಸಶ್ಚತ್ರಿಧಾ ಮಹಾನ್'**[1] ಎಂದು ಸಾತ್ವಿಕ, ರಾಜಸ ತಾಮಸವೆಂದು ಮೂರು ವಿಧವಾಗಿರುತ್ತದೆ.

**'ಮಹಾನ್ ವೈಬುದ್ಧಿ ಲಕ್ಷಣಃ'**[2] ಎಂದು ಮಹತ್ತು ಬುದ್ಧಿಯನ್ನು ಲಕ್ಷಣವಾಗಿ ಉಳ್ಳದ್ದಾಗಿ ಅಧ್ಯವಸಾಯಜನಕವಾಗಿರುತ್ತದೆ. ಅವುಗಳಲ್ಲಿ

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ವಿಕೀ।**[3]

ಎಂಬಂತೆ ಪ್ರವೃತ್ತಿ ನಿವೃತ್ತಿಗಳನ್ನುಳ್ಳ ಭಯಾಭಯಗಳನ್ನೂ ಬಂಧ ಮೋಕ್ಷವನ್ನೂ, ಯಥಾವತ್ತಾಗಿ ಅರಿಯುವಂತಹುದು 'ಸಾತ್ವಿಕ ಬುದ್ಧಿ' ಎನಿಸುತ್ತದೆ.

**'ಯಯಾಧರ್ಮಮಧರ್ಮಂಚ ಕಾರ್ಯಂಚಾಕಾರ್ಯಮೇವಚ ।**
**ಆಯಥಾವತ್ಪ್ರಜಾನಾತಿ ಬುದ್ಧಿಸ್ಸಾಪಾರ್ಥರಾಜಸೀ।'**[4]

ಎಂಬಂತೆ ಧರ್ಮಾಧರ್ಮಗಳನ್ನು ಕಾರ್ಯಾ ಕಾರ್ಯಗಳನ್ನೂ ಅನ್ಯಥಾವಾಗಿ ಅರಿಯುವುದು 'ರಾಜಸ ಬುದ್ಧಿ' ಎನಿಸುತ್ತದೆ.

**ಅಧರ್ಮಂ ಧರ್ಮಮಿತಿಯಾ ಮನ್ಯತೇ ತಮಸಾವೃತಾ।**
**ಸರ್ವಾರ್ಥಾನ್ ವಿಪರೀತಾಂಶ್ಚ, ಬುದ್ಧಿಸ್ಸಾಪಾರ್ಥ ತಾಮಸೀ॥**[5]

ಎಂದು ಅಧರ್ಮವನ್ನು ಧರ್ಮವಾಗಿಯೂ, ಧರ್ಮವನ್ನು ಅಧರ್ಮವಾಗಿಯೂ ಹೀಗೆ ಸರ್ವಾರ್ಥಗಳನ್ನು ವಿಪರೀತವಾಗಿ ನಿಶ್ಚಯಿಸುವುದು 'ತಾಮಸ ಬುದ್ಧಿ' ಎನಿಸುತ್ತದೆ. ಎಂಬುದಾಗಿ ಗೀತೆಯಲ್ಲಿ ಪರಮಾತ್ಮನೇ ತಿಳಿಸಿದ್ದಾನೆ.

ಹೀಗೆ ಪ್ರಕೃತಿಯ ಪ್ರಥಮವಿಕಾರವಾದ ಮಹತ್ತನ್ನು ಅದರ ಸ್ವರೂಪವನ್ನೂ, ಕಾರ್ಯವನ್ನೂ ಪ್ರತಿಪಾದಿಸಲಾಯಿತು.

## ಸೂ. 23 ಇತಿಲ್ ನಿನ್ನುಮ್ ವೈಕಾರಿಕಮ್, ತೈಜಸಮ್ ಭೂತಾದಿಯೆನ್ರು ತ್ರಿವಿಧಮಾನ ಅಹಂಕಾರಂ ಪಿರಕ್ಕುಂ.

**ವೈಕಾರಿಕಸ್ತೈಜಸಶ್ಚ ಭೂತಾದಿಶ್ಚೈವ ತಾಮಸಃ।**
**ತ್ರಿವಿಧೋಽಯ ಮಹಂಕಾರೋ ಮಹತ್ತತ್ತ್ವಾದ ಜಾಯತ।**[1] ಎಂಬಂತೆ ಈ ಮಹತ್ ತತ್ವದಿಂದ

ವೈಕಾರಿಕ - (ಸಾತ್ವಿಕ ಅಹಂಕಾರ)

ತೈಜಸ - (ರಾಜಸ ಅಹಂಕಾರ)

ಭೂತಾದಿ - (ತಾಮಸ ಅಹಂಕಾರ) ಎಂಬ ಮೂರು ವಿಧವಾದ ಅಹಂಕಾರವು ಉಂಟಾಗುತ್ತದೆ. ತ್ರಿಗುಣಾತ್ಮಕವಾದ ಮೂಲ ಪ್ರಕೃತಿಯಿಂದ ಏರ್ಪಟ್ಟಿದ್ದರಿಂದ ಮಹತ್ತೂ ತ್ರಿ ಗುಣಾತ್ಮಕ ವಾಗಿರುತ್ತದೆ. ಇದರಿಂದ ಅಹಂಕಾರತತ್ವವು ಏರ್ಪಟ್ಟಿದ್ದರಿಂದ ಅದೂ ತ್ರಿಗುಣಾತ್ಮಕವಾಗಿರುತ್ತದೆ.

## ಸೂ. 24 ಅಹಂಕಾರಂ ಅಭಿಮಾನಹೇತುವಾಯಿರುಕ್ಕುಮ್.

ಈ ಅಹಂಕಾರವು ದೇಹಾತ್ಮಭಿಮಾನಕ್ಕೆ ಕಾರಣವಾಗಿರುತ್ತದೆ ಎಂಬುದರಿಂದ ಅಹಂಕಾರದ ಕಾರ್ಯವು ಹೇಳಲ್ಪಟ್ಟಿತು.

## ಸೂ. 25 ಇತಿಲ್ ವೈಕಾರಿಕತ್ತಿಲ್ ನಿನ್ರುಮ್ ಶ್ರೋತ್ರ, ತ್ವಕ್, ಚಕ್ಷುಃ, ಜಿಹ್ವಾ ಘ್ರಾಣ, ಎನ್ಗಿರ ಜ್ಞಾನೇಂದ್ರಿಯಂಗಳ್ ಐನ್ದುಮ್; ವಾಕ್, ಪಾಣಿ, ಪಾದ, ಸ್ಥಾಯು, ಉಪಸ್ಥಂಗಳೆನ್ಗಿರ ಕರ್ಮೇಂದ್ರಿಗಳೈನ್ದುಮ್; ಮನಸ್ಸು ಮಾಕಿರ ಪದಿನೋರಿಂದ್ರಿಯಂ ಗಳುಂ ಪಿರಕ್ಕುಂ.

ಹೀಗೆ ತ್ರಿವಿಧವಾದ ಅಹಂಕಾರದಲ್ಲಿ ವೈಕಾರಿಕವೆಂಬುದು ಸಾತ್ವಿಕಾಹಂಕಾರವಾಗಿದೆ. ಇದರಿಂದ ಸತ್ವಕಾರ್ಯವಾದ, ಲಘುತ್ವ ಪ್ರಕಾಶತ್ವಗಳನ್ನುಳ್ಳ ಹನ್ನೊಂದು ಇಂದ್ರಿಯಗಳು ಜನಿಸುತ್ತವೆ.

**(ಶ್ರೋತ್ರ........ಪಿರಕ್ಕುಂ)** .......ಅವುಗಳೊಂದೊಂದರ ಹೆಸರನ್ನೂ ಹೀಗೆ ಬಿಡಿ ಬಿಡಿಯಾಗಿ ಹೇಳಲು ಕಾರಣ ಅವುಗಳ ಕಾರ್ಯ ಭೇದ, ಸಂಜ್ಞಾ ಭೇದಗಳಲ್ಲದೆ ಅವುಗಳ ಸ್ವರೂಪವನ್ನೂ, ವ್ಯವಹಾರವನ್ನೂ ನಿರೂಪಿಸುವುದಕ್ಕಾಗಿ. ಮನಸ್ಸಿನ ಕಾರ್ಯವು ಎರಡಕ್ಕೂ(ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳಿಗೂ) ಸಹಕಾರಿಯಾಗಿ ಇರುವಿಕೆ. ಮನಸ್ಸಿನ ಕಾರ್ಯವು ಮುಂದಿನ ಸೂತ್ರಗಳಲ್ಲಿ ವಿವರಿಸಲ್ಪಡುತ್ತದೆ ಆದ್ದರಿಂದ ಇಲ್ಲಿ ಅದನ್ನು ಹೇಳಿಲ್ಲ. ಇಂದ್ರಿಯಗಳು ಸಾತ್ವಿಕಾಹಂಕಾರದ ಕಾರ್ಯ ಎಂಬುದರಿಂದ ಅವುಗಳು ರಾಜಸಾಹಾಂಕಾರ ಕಾರ್ಯವೆಂಬುದು ಪ್ರಕ್ಷಿಪ್ತವಾಗಿದೆ.

ತೈಜಸಾನೀನ್ದ್ರಿಯಾಣ್ಯಾಹುಃ ದೇವಾ ವೈಕಾರಿಕಾದಶ।<br>
ಏಕಾದಶಂ ಮನಶ್ಚಾತ್ರ ದೇವಾಃ ವೈಕಾರಿಕಾಃ ಸ್ಮೃತಾಃ। [1] ಎಂದೂ<br>
ಅಗ್ನಿರ್ವಾಗ್ಭೂತ್ವಾಮುಖಂ ಪ್ರಾವಿಶತ್।<br>
ವಾಯುರ್ ಘ್ರಾಣೋಭೂತ್ವಾ ನಾಸಿಕೇ ಪ್ರಾವಿಶತ್।<br>
ಆದಿತ್ಯಃ ಚಕ್ಷುರ್ ಭೂತ್ವಾ ಅಕ್ಷಿಣೀ ಪ್ರಾವಿಶತ್।<br>
ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್।<br>
ಔಷಧಿವನಸ್ಪತಯೋಲೋಮಾನಿಭೂತ್ವಾ ತ್ವಂ ಚ ಪ್ರಾವಿಶನ್।<br>
ಚಂದ್ರಮಾ ಮನೋಭೂತ್ವಾ ಹೃದಯಂ ಪ್ರಾವಿಶತ್।<br>
ಮೃತ್ಯುಃ ಅಪಾನೋಭೂತ್ವಾ ನಾಭಿಂ ಪ್ರಾವಿಶತ್।<br>
ಆಪೋ ರೇತೋ ಭೂತ್ವಾ ಶಿಶ್ನಂಪ್ರಾವಿಶತ್। [2]

ಎಂಬಂತೆ ದೇವಾಧಿಷ್ಠಿತಗಳಾದ್ದರಿಂದ 'ದೇವ' ಶಬ್ದವಾಚ್ಯಗಳಾದ ಹನ್ನೊಂದು ಇಂದ್ರಿಯಗಳೂ ರಾಜಸ ಕಾರ್ಯವೆನ್ನುವವರು ಕೆಲವರು,ಸಾತ್ವಿಕಾರ್ಯ ಎನ್ನುವರು ಕೆಲವರು ಎಂದು ತಿಳಿಸಿ, ನಂತರ ಸಾತ್ವಿಕಾಹಂಕಾರದ ಕಾರ್ಯ ಎನ್ನುವುದೇ ಶ್ರೀಪರಾಶರಮುನಿವರ್ಯರ ಸ್ವಪಕ್ಷವಾದ್ದರಿಂದ ಇಲ್ಲಿ ಹೀಗೆ ತಿಳಿಸಲಾಗಿದೆ. ಇಂದ್ರಿಯಗಳು ಹನ್ನೊಂದು ಎಂಬ ನಿಯಮವೂ ವ್ಯಷ್ಟಿವಿಷಯವಲ್ಲ (ಬೇರೆ ಬೇರೆ) ಸಮಷ್ಟಿ ವಿಷಯ (ಒಂದೇ).

**ತೇಷಾಂ ತ್ವವಯವಾನ್ ಸೂಕ್ಷ್ಮಾನ್ ಷಣ್ಣಾಮ ಪ್ಯಮಿತೌಜಸಾಮ್।**
**ಸನ್ನಿವೇಶ್ಯಾತ್ಮಮಾತಾಸು ಸರ್ವ ಭೂತಾನಿ ನಿರ್ಮಮೇ।** [3]

ಎಂಬಂತೆ ಅಣುಗಳಾದ್ದರಿಂದ ಸೂಕ್ಷ್ಮವಾದ ಇಂದ್ರಿಯಗಳ ಅಂಶಗಳನ್ನು ಆತ್ಮ ಮಾತ್ರೆಗಳಲ್ಲಿ ಪ್ರವೇಶಿಸಿ, ಸರ್ವಭೂತಗಳನ್ನು ಈಶ್ವರನೇ ಸೃಷ್ಟಿಸಿದನೆಂಬ ವಚನವಿರುವುದರಿಂದ 'ಸಮಷ್ಟಿ'ಎನ್ನಲಾಗುತ್ತದೆ. ಇಲ್ಲಿ 'ಸೂಕ್ಷ್ಮಾನ್' ಎಂದಿರುದರಿಂದ '**ಅಣವಶ್ಚ**' ಎಂಬ ಬ್ರಹ್ಮಸೂತ್ರ ಮರ್ಯಾದೆಯಿಂದ ಇಂದ್ರಿಯಗಳು ಅಣುವೆಂದೂ 'ಅವಯವಾನ್' ಎಂಬುದರಿಂದ ಇಂದ್ರಿಯ ಪೂರಾ ವ್ಯಕ್ತಿ ಬಾಹುಳ್ಯವುಂಟೆಂದೂ, (ಒಂದೊಂದು ಇಂದ್ರಿಯವೂ ಅನಂತ ಸಂಖ್ಯೆಯಲ್ಲಿದೆ) ಆತ್ಮ ಮಾತ್ರೆಗಳಲ್ಲಿ ಸೇರಿಸಿದನೆಂಬುದರಿಂದ ಹಿಂದೆ ನೀಡಿದ ಇಂದ್ರಿಯಗಳೇ ಯಾವತ್ ಸಂ(ಸಾ)ಹಾರ ಪರ್ಯಂತ ಅನುವರ್ತಿಸುತ್ತದೆ ಎಂಬುದೂ ಏರ್ಪಡುತ್ತದೆ.

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್।**[4]

ಎಂಬಂತೆ ಆತ್ಮನು ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಪ್ರವೇಶಿಸುವಾಗ ಇಂದ್ರಿಯಗಳನ್ನು ಗ್ರಹಿಸಿಕೊಂಡೇ ಹೋಗುವುದು ಎಂಬುದು ತಿಳಿದು ಬರುತ್ತದೆ. 'ಷಣ್ಣಾ' ಎಂದೂ 'ಮನಷ್ಷಷ್ಠಾನಿ' ಎಂದೂ ಹೇಳುವ ಸಂಖ್ಯಾನಿರ್ದೇಶದಲ್ಲಿ ನಿರ್ಬಂಧವಿಲ್ಲ. ಇಂದ್ರಿಯಾಂತರಗಳೂ ಇವುಗಳೊಡನೆ ಸೇರಿಬಿಡುವುದರಿಂದ ಎನ್ನಲಾಗಿದೆ.

## ಸೂ. 26 ಭೂತಾದಿಯಿಲ್ ನಿನ್ನುಮ್ ಶಬ್ದತನ್ಮಾತ್ರೈ ಪಿರಕ್ಕುಂ. ಇತಿಲ್ ನಿನ್ನುಮ್ ಆಕಾಶಮುಮ್ ಸ್ಪರ್ಶತನ್ಮಾತ್ರೈಯುಂ ಪಿರಕ್ಕುಂ. ಇತಿಲ್ ನಿನ್ನುಮ್ ವಾಯುವುಮ್ ರೂಪತನ್ಮಾತ್ರೈಯುಂ ಪಿರಕ್ಕುಂ. ಇತಿಲ್ ನಿನ್ನುಂ ಅಪ್ಪುಮ್. ಗಂಧತನ್ಮಾತ್ರೈಯುಂ ಪಿರಕ್ಕುಂ. ಇತಿಲ್ ನಿನ್ನುಮ್ ಪೃಥಿವೀ ಪಿರಕ್ಕುಂ.

'**ಭೂತತನ್ಮಾತ್ರ ಸರ್ಗೋಯ ಮಹಂದಾರಾತುತ್ತಾಮಸಾತ್**'[1] ಎಂಬಂತೆ 'ಭೂತಾದಿ' ಶಬ್ದವಾಚ್ಯವಾದ ತಾಮಸಾಹಂಕಾರದಿಂದ ತನ್ಮಾತ್ರ ಪಂಚಕವೂ, ತದ್ವಿಶೇಷವಾದ ಆಕಾಶಾದಿಪಂಚಭೂತಗಳೂ ಉತ್ಪನ್ನವಾಗುವ ಕ್ರಮವನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ.

**(ಭೂತಾದಿ .......... ಶಬ್ದತನ್ಮಾತ್ರೈಪಿರಕ್ಕುಂ)** - ಭೂತಾದಿ ಎನಿಸುವ ತಾಮಸಾಹಂಕಾರದಿಂದ ಆಕಾಶದ ಸೂಕ್ಷ್ಮಾವಸ್ಥೆಯಾದ ಶಬ್ದತನ್ಮಾತ್ರೆಯು ಉಂಟಾಗುತ್ತದೆ. ಇದರಿಂದ ಇದರ ಸ್ಥೂಲಾವಸ್ಥೆಯಾದ ವ್ಯಕ್ತ ಶಬ್ದ ಗುಣಕವಾದ ಆಕಾಶವೂ, ವಾಯುವಿನ ಸೂಕ್ಷ್ಮಾವಸ್ಥೆಯಾದ ಸ್ಪರ್ಶತನ್ಮಾತ್ರೆಯೂ ಉಂಟಾಗುತ್ತದೆ. ಈ ಸ್ಪರ್ಶತನ್ಮಾತ್ರೆಯಿಂದ ಇದರ ಸ್ಥೂಲಾವಸ್ಥೆಯಾದ ಸ್ಪರ್ಶಗುಣಕವಾದ ವಾಯುವೂ; ತೇಜಸ್ಸಿನ ಸೂಕ್ಷ್ಮಾವಸ್ಥೆಯಾದ ರೂಪತನ್ಮಾತ್ರೆಯೂ ಉಂಟಾಗುತ್ತದೆ. ಈ ರೂಪತನ್ಮಾತ್ರೆಯಿಂದ ಇದರ ಸ್ಥೂಲಾವಸ್ಥೆಯಾದ ರೂಪಗುಣಕವಾದ ತೇಜಸ್ಸೂ; ಅಪ್‌ನ (ಜಲದ) ಸೂಕ್ಷ್ಮಾವಸ್ಥೆಯಾದ ರಸತನ್ಮಾತ್ರೆಯೂ ಉಂಟಾಗುತ್ತದೆ. ಈ ರಸತನ್ಮಾತ್ರೆಯಿಂದ ಇದರ ಸ್ಥೂಲಾವಸ್ಥೆಯಾದ ರಸಗುಣ್ಯೆಯಾದ 'ಅಪ್'-ಜಲ, ಹಾಗೂ ಪೃಥಿವಿಯ ಸೂಕ್ಷ್ಮಾವಸ್ಥೆಯಾದ ಗಂಧತನ್ಮಾತ್ರೆಯೂ ಉಂಟಾಗುತ್ತದೆ. ಈ ಗಂಧತನ್ಮಾತ್ರೆಯಿಂದ ಇದರ ಸ್ಥೂಲಾವಸ್ಥೆಯಾದ ಗಂಧಗುಣ್ಯೆಯಾದ ಪೃಥಿವೀ (ಭೂಮಿ) ಉಂಟಾಗುತ್ತದೆ.

ಪಂಚ ಭೂತಗಳ ಹಾಗೂ ತನ್ಮಾತ್ರೆಗಳ ಕ್ರಮಗಳನ್ನು ಹೇಳುವಾಗ ಭೂತಗಳನ್ನು ಮೊದಲು ಹೇಳಿ

ಅನಂತರ ತನ್ಮಾತ್ರೆಗಳನ್ನು ಹೇಳಲಾಗಿದೆ. ಆಕಾಶವೂ ಸ್ಪರ್ಶತನ್ಮಾತ್ರೆಯೂ ಉಂಟಾಯಿತು, ವಾಯುವೂ ರೂಪತನ್ಮಾತ್ರೆಯೂ ಉಂಟಾಯಿತು ಎನ್ನುವುದಕ್ಕೆ ಕಾರಣ ಭೂತಗಳ ಉತ್ಪತ್ತಿಯ ನಂತರವೇ ತನ್ಮಾತ್ರೆಗಳ ಉತ್ಪತ್ತಿ ಎಂಬ ಕ್ರಮವನ್ನು ತೋರುವುದಕ್ಕಾಗಿ ಆಗಿದೆ. ಈ ತನ್ಮಾತ್ರೆಗಳಿಂದ ತನ್ಮಾತ್ರೆಗಳ ಉತ್ಪತ್ತಿ ಕ್ರಮವು ನಮ್ಮ ಆಚಾರ್ಯರುಗಳಿಗೆ ಪರಮ ಆದರಣೀಯವಾಗಿದೆ. ಏಕೆಂದರೆ '**ಅಷ್ಟೌಪ್ರಕೃತಯಃ ಷೋಡಶವಿಕಾರಾಃ**'[2] ಎಂಬ ಶ್ರುತಿಗೆ ಸ್ವರಸಾರ್ಥವು ಇದರಿಂದ ಸಿದ್ಧಿಸುತ್ತದೆ. '**ಈಶ್ವರಾತ್ ಪ್ರಕೃತಿ ಪುರುಷೌ, ಪ್ರಕೃತೇರ್ ಮಹಾನ್. ಮಹತೋऽಹಂಕಾರೋ, ಅಹಂಕಾರಾತ್ ಶಬ್ದತನ್ಮಾತ್ರಮ್, ಶಬ್ದತನ್ಮಾತ್ರಾತ್ ಆಕಾಶ ಸ್ಪರ್ಶತನ್ಮಾತ್ರಂ ಚ; ಸ್ಪರ್ಶತನ್ಮಾತ್ರಾತ್ ವಾಯೂ ರೂಪ ತನ್ಮಾತ್ರಂಚ; ರೂಪ ತನ್ಮಾತ್ರಾತ್ ತೇಜೋರಸತನ್ಮಾತ್ರಂಚ; ರಸತನ್ಮಾತ್ರಾತ್ಆಪೋ ಗಂಧ ತನ್ಮಾತ್ರಂಚ; ಗಂಧತನ್ಮಾತ್ರಾತ್ ಪೃಥಿವೀ**'[3] ಎಂಬ ಈ ಕ್ರಮವನ್ನೇ ಯಾದವಪ್ರಕಾಶಾದಿಗಳೂ ಆದರಿಸಿದ್ದಾರೆ.

## ಸೂ. 27 ಸ್ಪರ್ಶತನ್ಮಾತ್ರೈ ತೊಡಕ್ಕಮಾನ ನಾಲುತನ್ಮಾತ್ರೆಗಳುಂ ಆಕಾಶಂ ತೊಡಕ್ಕಮಾನ ನಾಲು ಭೂತಂಗಳುಕ್ಕುಮ್ ಕಾರ್ಯಮಾಯ್, ವಾಯುತೊಡಕ್ಕಮಾನ ನಾಲು ಭೂತಂಗಳುಕ್ಕುಂ ಕಾರಣಮಾಯಿರುಕ್ಕುಮೆನ್ನುಂ ಶೊಲ್ಲುವರ್‌ಗಳ್.

ಈ ಭೂತ ತನ್ಮಾತ್ರೋತ್ಪತ್ತಿ ಕ್ರಮವು ಶಾಸ್ತ್ರಸಿದ್ಧವಾದ್ದರಿಂದ ಅದನ್ನು ಸಂಗ್ರಹೇಣ ನಿರೂಪಿಸುತ್ತಾರೆ. ಅದರ ಕ್ರಮ ಹೀಗಿದೆ.

ಭೂತಾದಿಯಿಂದ(ತಾಮಸಾಹಂಕಾರದಿಂದ) ಶಬ್ದ ತನ್ಮಾತ್ರೆಯು ಏರ್ಪಡುತ್ತದೆ. ಶಬ್ದ ತನ್ಮಾತ್ರೆಯಿಂದ ಆಕಾಶ. ಆಕಾಶದಿಂದ ಸ್ಪರ್ಶತನ್ಮಾತ್ರೆ. ಸ್ಪರ್ಶತನ್ಮಾತ್ರೆಯಿಂದ ವಾಯು. ವಾಯುವಿನಿಂದ ರೂಪ ತನ್ಮಾತ್ರೆ. ರೂಪತನ್ಮಾತ್ರೆಯಿಂದ ತೇಜಸ್ಸು. ತೇಜಸ್ಸಿನಿಂದ ರಸತನ್ಮಾತ್ರೆ. ರಸತನ್ಮಾತ್ರೆಯಿಂದ ಜಲವು. ಜಲದಿಂದ ಗಂಧ ತನ್ಮಾತ್ರೆ. ಗಂಧತನ್ಮಾತ್ರೆಯಿಂದ ಪೃಥಿವೀ ಏರ್ಪಡುತ್ತದೆ.

ಈ ಕ್ರಮವು ಶ್ರೀ ವಿಷ್ಣು ಪುರಾಣ ಸಿದ್ಧವಾದದ್ದು. ಹಿಂದಿನ ಸೂತ್ರದಲ್ಲಿ ಹೇಳಿದ ಕ್ರಮವು ಪುರಾಣಾಂತರ ಸಿದ್ಧವಾದದ್ದು ಎನ್ನುವರು. ಆದರೆ ಹಾಗೆ ಹೇಳುವಂತಿಲ್ಲ. '**ಅಷ್ಟೌ ಪ್ರಕೃತಯಃ ಷೋಡಶ ವಿಕಾರಾಃ**' ಎಂದು ಆಕಾಶಾದಿ ಭೂತಗಳನ್ನೂ ಇಂದ್ರಿಯಗಳಂತೆ ವಿಕೃತಿಗಳಾಗಿ ಶ್ರುತಿ ಹೇಳುವುದರಿಂದ. ಶ್ರೀ ವಿಷ್ಣು ಪುರಾಣದಲ್ಲಿ '**ಆಕಾಶಸ್ತು ವಿಕುರ್ವಾಣಃ ಸ್ಪರ್ಶಮಾತ್ರಂ ಸಸರ್ಜಹ**'[1] ಎಂದು ಆರಂಭಿಸಿ ಸ್ಪರ್ಶತನ್ಮಾತ್ರಾದಿಗಳಿಗೂ ಕಾರಣವಾಗಿ ಹೇಳಿದ ಆಕಾಶಾದಿ ಪದಾರ್ಥಗಳನ್ನು ತನ್ಮಾತ್ರಲಕ್ಷಣವಾದ ಭೂತಗಳಾಗಿ ಹೇಳುವುದೇ ಆ ಪುರಾಣ ಕರ್ತೃವಾದ ಶ್ರೀ ಪರಾಶರಮುನಿವರ್ಯರಿಗೆ ವಿವಕ್ಷಿತ, ಎಂಬುದನ್ನು ವ್ಯಾಖ್ಯಾನಕಾರರುಗಳು ನಿರೂಪಿಸಿದ್ದಾರೆ. ಆದ್ದರಿಂದ ಶ್ರೀ ವಿಷ್ಣುಪುರಾಣದಲ್ಲಿ ಭೂತಗಳಿಂದ ತನ್ಮಾತ್ರೆಗಳ ಉತ್ಪತ್ತಿ ಶಾಬ್ದವಾಗಿ ಹೇಳಲ್ಪಟ್ಟಿದ್ದರೂ, ವ್ಯಾಖ್ಯಾನ ಪ್ರಕ್ರಿಯೆಯನ್ನು ನೋಡಿದಾಗ ತನ್ಮಾತ್ರೆಗಳಿಂದ ತನ್ಮಾತ್ರೆಗಳ ಉತ್ಪತ್ತಿ ಎಂಬುದನ್ನೇ ಅಂಗೀಕರಿಸಬೇಕಾಗುತ್ತದೆ.

ಭೂತಗಳಿಂದ ತನ್ಮಾತ್ರೆಗಳ ಉತ್ಪತ್ತಿ ಎಂದ ಪಕ್ಷದಲ್ಲೂ '**ಅಷ್ಟೌ ಪ್ರಕೃತಯಃ ಷೋಡಶವಿಕಾರಾಃ**' ಎಂಬ ಹದಿನಾರು ವಿಕಾರಗಳು - ಭೂತಗಳ ಹೊರತಾಗಿ ಏಕಾದಶ ಇಂದ್ರಿಯಗಳೂ, ಶಬ್ದಾದಿಗಳು ಐದು ಎಂದೂ, ತನ್ಮಾತ್ರೆಗಳಿಗೆ ಭೂತಗಳೊಡನೆ ಸ್ವರೂಪಭೇದವಿಲ್ಲದೆ ಅವಸ್ಥಾಭೇದ ಮಾತ್ರವಾದ್ದರಿಂದ '**ಅಷ್ಟೌಪ್ರಕೃತಯಃ**' ಎಂದು ಪ್ರಕೃತಿ, ಮಹತ್, ಅಹಂಕಾರಗಳನ್ನೂ ಆಕಾಶಾದಿಗಳಾದ ಐದನ್ನೂ ಹೇಳುತ್ತವೆ; ಎಂದು ಶ್ರುತಿಯ ಅವಿರೋಧವನ್ನು ನಿರ್ವಹಿಸುತ್ತಾರೆ. ಇದನ್ನೇ ಶ್ರೀ ವೇದವ್ಯಾಸ ಭಗವಾನರೂ

ಅಷ್ಟೌ ಪ್ರಕೃತಯಃ ಪ್ರೋಕ್ತಾವಿಕಾರಾಶ್ಚಾಪಿ ಷೋಡಶ।
ಅಥವ್ಯಕ್ತಾನಿಸಪ್ತೈನ ಪ್ರಾಹುಃ ಅಧ್ಯಾತ್ಮ ಚಿಂತಕಾಃ।
ಅವ್ಯಕ್ತಂಚ ಮಹಾಂಶ್ಚೈವತಥಾऽ ಹಂಕಾರ ಏವಚ।
ಪೃಥಿವೀ ವಾಯುರಾಕಾಶ ಮಹಾಜ್ಯೋತಿಶ್ಚ ಪಂಚಮುಮ್।
ವಾಕ್ ಚ ಹಸ್ತೌಚ ಪಾದೌಚ ಪಾಯುರ್ಮೇಢ್ರಂ ತಥೈವ ಚ।
ಶಬ್ದ ಸ್ಪರ್ಶಂ ಚ ರೂಪಂ ಚ ರಸೋಗಂಧಸ್ತಥೈವ ಚ।

ಏತೇ ವಿಶೇಷಾ ರಾಜೇಂದ್ರ ಮಹಾಭೂತೇಷು ಪಂಚಸು।
ದಶೇಂದ್ರಿಯಾಣ್ಯ ಥೈತಾನಿ ಸವಿಶೇಷಾಣಿ ಮೈಥಿಲ।
ಮನಃ ಷೋಡಶಮಿತ್ಯಾಹುಃ ಯಥಾऽऽತ್ಮಗತಿ ಚಿಂತಕಾಃ। [2]

ಎಂಬುದಾಗಿ ಮೋಕ್ಷಧರ್ಮದಲ್ಲಿ ಯಾಜ್ಞವಲ್ಕ್ಯ, ಜನಕ ಸಂವಾದದಲ್ಲಿ ತಿಳಿಸಿದ್ದಾರೆ.

ಹೀಗೆಯೇ ಯಮಸ್ಮೃತಿಯಲ್ಲೂ

ಮನೋಬುದ್ಧಿರಹಂಕಾರಖಾನಿಲಾಗ್ನಿಜಲಾನಿಭೂಃ।
ಏತಾಃ ಪ್ರಕೃತಯಸ್ತು ಅಷ್ಟೌವಿಕಾರಾ ಷೋಡಶಾಪರೇ।
ಶ್ರೋತ್ರತ್ವಕ್ಚಕ್ಷುರಸನಾಘ್ರಾಣ ತ್ವಕ್ಚ ಸಂಕಲ್ಪಏವ ಚ।
ಶಬ್ದರೂಪರಸಸ್ಪರ್ಶಗಂಧವಾಕ್ಪಾಣಿಪಾಯವಃ ।
ಉಪಸ್ಥಪಾದಾವಿತಿಚ ವಿಕಾರಷ್ಷೋಡಶಾಸ್ಮೃತಾಃ। [3]

ಎಂದು ಹೇಳಲಾಗಿದೆ. ಈ ಸ್ಮೃತಿಯಲ್ಲಿ ಮನಸ್ಸನ್ನು ಪ್ರಕೃತಿಗಳಲ್ಲಿ ಪರಿಗಣಿಸುವುದರಿಂದಲೂ, ಪ್ರಾರಂಭದಲ್ಲೇ ಇರುವುದರಿಂದಲೂ, ಮನಸ್ತ್ವತೆಯಿಂದ ಮನಸ್ಸೆಂದು ಪ್ರಧಾನತತ್ವವು ಹೇಳಲ್ಪಟ್ಟಿದೆ. ಸಂಕಲ್ಪ ಶಬ್ದದಿಂದ ತತ್ಕಾರಣವಾದ ಮನಸ್ಸು ಲಕ್ಷಿಸಲ್ಪಡುತ್ತೆಂದು ಸುಬಾಲೋಪನಿಷತ್ ವ್ಯಾಖ್ಯಾನದಲ್ಲಿ ಶ್ರೀ ಶ್ರುತ ಪ್ರಕಾಶಿಕಾಚಾರ್ಯರು ನಿರೂಪಿಸಿದ್ದಾರೆ. ಈ ರೀತಿ ಇತಿಹಾಸಾದಿಗಳಲ್ಲಿ ಹೇಳಲ್ಪಟ್ಟಿದೆಯಾದ್ದರಿಂದ **'ಅಷ್ಟೌಪ್ರಕೃತಯಃ'** ಎಂಬ ಶ್ರುತಿಗೆ, ಭೂತಗಳಿಂದ ತನ್ಮಾತ್ರೆಗಳ ಉತ್ಪತ್ತಿ ಎಂಬುದರ ಬಗ್ಗೆ ವಿರೋಧಾಭಾವವು ಸ್ಪಷ್ಟವಾಗಿದೆ. **'ತ್ವಚಾ ಬೀಜಮಿವಾಮೃತಮ್'** [4] ಎಂಬ ದೃಷ್ಟಾಂತ ಬಲದಿಂದ ತ್ವಕ್(ಮೇಲಿನ ಸಿಪ್ಪೆ) ಇಲ್ಲದೆ ಬೀಜಕ್ಕೆ ಅಂಕುರ ಶಕ್ತಿ ಇಲ್ಲವಾಗುವಂತೆ, ಆವಾರಕದ ಹೊರತಾಗಿ ನಂತರದ ಕಾರ್ಯಶಕ್ತಿ ಇಲ್ಲವೆನ್ನುವುದು ತಿಳಿಯುವುದರಿಂದಲೂ ಕಾರಣಗುಣಗಳನ್ನು ಬಿಟ್ಟು ಉತ್ತರೋತ್ತರ ವಿಶೇಷಗಳಲ್ಲಿ **'ಅದ್ಯಾದ್ಯಸ್ಯಗುಣಾನೇತಾನ್ ಅಪ್ನೋತಿ ಚ ಪರಃಪರಃ'** [5] ಎಂದು ಸ್ವವಿಶೇಷಕ್ಕೆ ಹೇಳುವ ಗುಣವು ಹೊಂದುವುದಿಲ್ಲವಾದ್ದರಿಂದಲೂ

ಆಕಾಶಂ ಶಬ್ದಮಾತ್ರಂ ತು ಸ್ಪರ್ಶ ಮಾತ್ರಂ ಸಮಾವಿಶತ್। [6]
ರೂಪಂ ತಥೈವಾವಿಶತ ಶ್ಶಬ್ದಸ್ಪರ್ಶಗುಣಾವಿಭೌ।
ಶಬ್ದ ಸ್ಪರ್ಶಂ ಚ ರೂಪಂ ಚ ರಸಮಾತ್ರಂ ಸಮಾಶಿಸನ್।
ತಸ್ಮಾತ್ ಚತುರ್ಗುಣಾಹ್ಯಾಪೋ ವಿಶೇಷಾಶ್ಚೇಂದ್ರಿಯ ಗ್ರಹಃ।

ಎಂಬ ಪುರಾಣ ವಚನದ ಅನುಗುಣ್ಯಕ್ಕಾಗಿಯೂ; **'ತೇಭ್ಯಃ ತನ್ಮಾತ್ರೇಭ್ಯೋ ಯಥಾಸಂಖ್ಯಾ ಮೇಕದ್ವಿತ್ರಿಚತುಃ ಪಂಚಭ್ಯೋ ಭೂತಾನ್ಯಾಕಾಶಾನಿಲಾನಲಸಲಿಲಾವನಿರೂಪಾಣಿ ಪಂಚಜಾಯಂತೇ'** [7] ಎಂದು ಇದರಲ್ಲಿ ಅಧಿಕೃತವಾಗಿ ಹೇಳಬಲ್ಲಂತಹ ಸಾಂಖ್ಯವಾಚಸ್ಪತಿ ಹೇಳುವುದರಿಂದಲೂ 'ಕಾರ್ಯೋತ್ಪಾದಕಗಳಾದ ತತ್ವಗಳು ತಮ್ಮ ತಮ್ಮ ಕಾರಣಾ

ವೃತಗಳಾಗಿಯೇ ಕಾರ್ಯಗಳನ್ನು ಉತ್ಪಾದಿಸುತ್ತವೆ ಎಂದು ತಿಳಿಯಬೇಕು' ಎಂದು ತತ್ವತ್ರಯ ವಿವರಣೆಯಲ್ಲಿ ಆಚ್ಚಾನ್‌ಪಿಳ್ಳೈ ಹೇಳಿರುವುದರಿಂದಲೂ;

**ಪ್ರಧಾನ ತತ್ವಂ ಉದ್ಭೂತಂ ಮಹಾಂತಂ ತತಸ್ಸಮಾವೃಣೋತ್।**[8]

**ಯಥಾ ಪ್ರಧಾನೇನ ಮಹಾನ್ ಮಹತಾ ಸತಥಾವೃತಃ।** [9]

**ಶಬ್ದಮಾತ್ರಂ ತಥಾಕಾಶಂ ಭೂತಾದಿಸ್ಸಮಾವೃಣೋತ್।**[10]

**ಸ್ಪರ್ಶಮಾತ್ರಸ್ತು ವೈ ವಾಯುೂರೂಪ ಮಾತ್ರಂ ಸಮಾವೃಣೋತ್।** [11] ಎಂದೂ

**'ರಸಮಾತ್ರಾಣಿ ಚಾಂಭಾಂಸಿ ರೂಪ ಮಾತ್ರಂ ಸಮಾವೃಣೋತ್'**[12] ಎಂದೂ ಶ್ರೀಪರಾಶರಮುನಿವರ್ಯರಿಂದ ಹೇಳಲ್ಪಟ್ಟಿರುವುದರಿಂದಲೂ; ಮುಂದೆ 118ನೇ ಸೂತ್ರ **'ಮುನ್ನುತ್ತೈ ತನ್ಮಾತ್ರಂಗಳೋಡೇ ಕೂಡಿಕ್ಕೊಂಡು ಉತ್ತರೋತ್ತರ ತನ್ಮಾತ್ರೆಗಳ್ ಸ್ವವಿಶೇಷಂಗಳೈ ಪಿರಪ್ಪಿಕ್ಕೈಯಾಲೇ'** ಎಂದು ಇವರೇ ನಿರೂಪಿಸಿರುವುದರಿಂದಲೂ ಆವರಣಕ್ರಮವನ್ನೇ ಅಂಗೀಕರಿಬೇಕು.

ಹೀಗೆಯೇ ಪೂರ್ವಭಾವಿ ನಿಯಮಗಳಂತೆ ಸ್ಪರ್ಶತನ್ಮಾತ್ರಾದಿಗಳಿಗೆ ತಮ್ಮ ತಮ್ಮ ವಿಶೇಷಗಳನ್ನು ಉತ್ಪಾದಿಸುವಾಗ ತಮ್ಮ ತಮ್ಮ ಪೂರ್ವಭೂತ ಸಹಾಯತ್ವವನ್ನೂ ಅಂಗೀಕರಿಸಬೇಕು. ಹೇಗೆಂದರೆ ಭೂತಾದಿಗಳಿಂದ ಶಬ್ದತನ್ಮಾತ್ರೆ ಉಂಟಾಗುತ್ತದೆ. ಶಬ್ದತನ್ಮಾತ್ರೆಯನ್ನು ಭೂತಾದಿ ಆವರಿಸುತ್ತದೆ. ಇದರಿಂದ ಆಕಾಶವು ಉಂಟಾಗುತ್ತದೆ. ಅನಂತರ ಈ ಶಬ್ದತನ್ಮಾತ್ರೆಯಿಂದ ಸ್ಪರ್ಶತನ್ಮಾತ್ರೆ ಏರ್ಪಡುತ್ತದೆ. ಈ ಸ್ಪರ್ಶತನ್ಮಾತ್ರೆಯನ್ನು ಶಬ್ದ ತನ್ಮಾತ್ರೆಯು ಆವರಿಸುತ್ತದೆ. ಹೀಗೆ ಶಬ್ದ ತನ್ಮಾತ್ರೆಯಿಂದ ಆವೃತವಾಗಿ ಆಕಾಶವನ್ನು ಸಹಾಯವಾಗಿ ಉಳ್ಳದ್ದಾಗಿ ವಾಯು ಹುಟ್ಟುತ್ತದೆ. ಈ ಸ್ಪರ್ಶತನ್ಮಾತ್ರೆಯಿಂದ ರೂಪತನ್ಮಾತ್ರೆ ಉಂಟಾಗುತ್ತದೆ. ರೂಪತನ್ಮಾತ್ರೆಯನ್ನು ಸ್ಪರ್ಶತನ್ಮಾತ್ರೆ ಆವರಿಸುತ್ತದೆ. ಸ್ಪರ್ಶತನ್ಮಾತ್ರಾವೃತವಾದ ರೂಪತನ್ಮಾತ್ರೆಯಿಂದ ವಾಯುವಿನ ಸಹಾಯ ಉಳ್ಳದ್ದಾಗಿ ತೇಜಸ್ಸು ಹುಟ್ಟುತ್ತದೆ. ಈ ರೂಪ ತನ್ಮಾತ್ರೆಯಿಂದ ರಸತನ್ಮಾತ್ರೆಯು ಏರ್ಪಡುತ್ತದೆ. ರಸತನ್ಮಾತ್ರೆಯನ್ನು ರೂಪತನ್ಮಾತ್ರೆ ಆವರಿಸುತ್ತದೆ. ಹೀಗೆ ರೂಪತನ್ಮಾತ್ರಾವೃತವಾದ, ತೇಜಸ್ಸನ್ನು ಸಹಾಯಕವಾಗಿ ಉಳ್ಳ ರಸತನ್ಮಾತ್ರೆಯಿಂದ **'ಅಪ್'**-(ಜಲ) ಉಂಟಾಗುತ್ತದೆ. ಈ ರಸ ತನ್ಮಾತ್ರೆಯಿಂದ ಗಂಧ ತನ್ಮಾತ್ರೆಯು ಹುಟ್ಟುತ್ತದೆ. ಗಂಧ ತನ್ಮಾತ್ರೆಯನ್ನು ರಸತನ್ಮಾತ್ರೆಯು ಆವರಿಸುತ್ತದೆ. ರಸ ತನ್ಮಾತ್ರಾವೃತವಾದ ಅಪ್‌ನ್ನು ಸಹಾಯಕವಾಗಿ ಉಳ್ಳ ಗಂಧತನ್ಮಾತ್ರೆಯಿಂದ ಪೃಥಿವೀ ಹುಟ್ಟುತ್ತದೆ.

ಈ ಕ್ರಮವು ಹಿಂದಿನ ಭೂತಗಳಿಂದ ಮುಂದಿನ ತನ್ಮಾತ್ರೆಗಳ ಈ ಉತ್ಪತ್ತಿಯನ್ನು ಹೇಳುವ ಪಕ್ಷಕ್ಕೂ ಒಪ್ಪುತ್ತದೆ. ತಮ್ಮ ಹಿಂದಿನ ಭೂತಗಳಿಂದ ಮುಂದಿನ ತನ್ಮಾತ್ರೆಗಳ ಈ ಉತ್ಪತ್ತಿ ಕ್ರಮವು ವಿಶೇಷವಾದದ್ದು. ಇದು **'ತತ್ವತ್ರಯವಿವರಣ'**ದಲ್ಲಿ ಆಚ್ಚಾನ್‌ಪಿಳ್ಳೆಯವರು ಪ್ರತಿಪಾದಿಸಿದ ಕ್ರಮವಾಗಿದೆ.

ಹೀಗಿಲ್ಲದೆ **'ತತ್ವ ನಿರೂಪಣ'**ದಲ್ಲಿ ಜೀಯರ್‌ರುವರು ನಿರೂಪಿಸಿದ ಒಂದು ಕ್ರಮವುಂಟು. ಭೂತಾದಿಯಿಂದ ಶಬ್ದ ತನ್ಮಾತ್ರೆ ಹುಟ್ಟುತ್ತದೆ. ಅದರಿಂದ ಅದರ ಸ್ಥೂಲಾವಸ್ಥೆಯಾದ ಆಕಾಶವು ಹುಟ್ಟುತ್ತದೆ. ಶಬ್ದ ತನ್ಮಾತ್ರೆಯನ್ನೂ ಆಕಾಶವನ್ನೂ ಭೂತಾದಿಯು ಆವರಿಸುತ್ತದೆ. ಹೀಗೆ ಭೂತಾದಿಯಿಂದ ಆವೃತವಾದ ಸ್ಥೂಲಾಕಾಶವನ್ನು ಸಹಕಾರಿಯಾಗಿಕೊಂಡ ವಿಕೃತವಾದ ಶಬ್ದ ತನ್ಮಾತ್ರೆಯಿಂದ ಸ್ಪರ್ಶತನ್ಮಾತ್ರೆಯು ಹುಟ್ಟುತ್ತದೆ. ಅದರಿಂದ ಸ್ಪರ್ಶಗುಣಕವಾದ ವಾಯು ಹುಟ್ಟುತ್ತದೆ. ಅವೆರಡನ್ನೂ (ಸ್ಪರ್ಶತನ್ಮಾತ್ರೆವಾಯು) ಕಾರಣವಾದ ಶಬ್ದತನ್ಮಾತ್ರೆ ಆವರಿಸುತ್ತದೆ. ಶಬ್ದತನ್ಮಾತ್ರೆಯಿಂದ ಆವೃತವಾದ ವಾಯು ಸಹಕೃತವಾದ ವಿಕೃತವಾದ (ಬದಲಾವಣೆಹೊಂದಿದ) ಸ್ಪರ್ಶತನ್ಮಾತ್ರೆಯಿಂದ ರೂಪತನ್ಮಾತ್ರೆಯು ಹುಟ್ಟುತ್ತದೆ. ಅದರಿಂದ ರೂಪಗುಣಕವಾದ

ತೇಜಸ್ಸು ಹುಟ್ಟುತ್ತದೆ. ಆವೆರಡನ್ನೂ (ರೂಪತನ್ಮಾತ್ರೆ ಮತ್ತು ತೇಜಸ್ಸು) ಕಾರಣವಾದ ಸ್ಪರ್ಶತನ್ಮಾತ್ರೆ ಆವರಿಸುತ್ತದೆ. ಸ್ಪರ್ಶತನ್ಮಾತ್ರೆಯಿಂದ ಅವೃತವಾದ, ತೇಜಸ್ಸಹಕೃತವಾದ, ವಿಕೃತವಾದ ರೂಪತನ್ಮಾತ್ರೆಯಿಂದ ರಸತನ್ಮಾತ್ರೆಯು ಏರ್ಪಡುತ್ತದೆ. ಅದರಿಂದ ರಸಗುಣಕವಾದ ಜಲವು ಹುಟ್ಟುತ್ತದೆ. ಆವೆರಡನ್ನೂ (ರಸತನ್ಮಾತ್ರೆ ಮತ್ತು ಅಪ್) ಕಾರಣವಾದ ರೂಪತನ್ಮಾತ್ರೆ ಆವರಿಸುತ್ತದೆ. ಇದರಿಂದ ಆವೃತವಾಗಿ ಜಲವನ್ನು ಸಹಾಯಕವಾಗಿ ಉಳ್ಳ ವಿಕೃತವಾದ ರಸತನ್ಮಾತ್ರೆಯಿಂದ ಗಂಧತನ್ಮಾತ್ರೆ ಹುಟ್ಟುತ್ತದೆ. ಅದರಿಂದ ಗಂಧ ಗುಣ್ಣೆಯಾದ ಪೃಥಿವೀ ಹುಟ್ಟುತ್ತದೆ. ಅವೆರಡನ್ನೂ ಕಾರಣವಾದ ರಸತನ್ಮಾತ್ರೆ ಆವರಿಸುತ್ತದೆ. ಎಂಬುದಾಗಿದೆ.

ಮೊದಲು ಹೇಳಲ್ಪಟ್ಟ ಕ್ರಮದಲ್ಲಿ ಸ್ಪರ್ಶತನ್ಮಾತ್ರಾದಿ ಚತುಷ್ಟಯಕ್ಕೆ ಅವುಗಳ ವಿಶೇಷಗಳನ್ನು ಉತ್ಪಾದಿಸುವಲ್ಲಿ ಅವುಗಳ ಹಿಂದಿನ ಭೂತಗಳ ಸಹಾಯವು ಹೇಳಲ್ಪಟ್ಟಿದೆ.

ಅನಂತರ ಹೇಳಲ್ಪಟ್ಟ ಕ್ರಮದಲ್ಲಿ ಮುಂದಿನ ತನ್ಮಾತ್ರೆಗಳ ಉತ್ಪತ್ತಿಯಲ್ಲಿ ಹಿಂದಿನ ತನ್ಮಾತ್ರೆಗಳಿಗೆ ಅವುಗಳ ವಿಶೇಷಗಳ ಸಹಾಯವು ಹೇಳಲ್ಪಟ್ಟಿದೆ. ಆದ್ದರಿಂದ ಅನ್ಯೋನ್ಯ ವಿರೋಧವಿಲ್ಲ.

ಆ ಒಂದರಲ್ಲೂ ಎರಡೂ ಹೇಳಲ್ಪಡದೇ ಇದ್ದರೂ ಎರಡೂ ಅಪೇಕ್ಷಿತವಾದ್ದರಿಂದ. ಆವರಣ ಕಥನದಲ್ಲೂ 'ಪೂರ್ವ ಪೂರ್ವ ತನ್ಮಾತ್ರೆಯು, ಉತ್ತರೋತ್ತರ ತನ್ಮಾತ್ರೆಯನ್ನೂ ಅದರ ವಿಶೇಷವನ್ನೂ ಆವರಿಸುತ್ತದೆ' ಎಂದು ಜೀಯರ್‌ರವರು ತಿಳಿಸಿರುವುದರಿಂದಲೂ; ಶ್ರೀ ವಿಷ್ಣು ಪುರಾಣದಲ್ಲಿ **'ಶಬ್ದ ಮಾತ್ರಂ ತಥಾಕಾಶಂ ಭೂತಾದಿಸ್ಸ ಸಮಾವೃಣೋತ್'** ಎಂಬ ಈ ಉಕ್ತಿಗೆ - **'ಶಬ್ದ ಮಾತ್ರಂ-ಶಬ್ದತನ್ಮಾತ್ರಂ; ತಥಾಕಾಶಂ-ಸ್ಥೂಲಾಕಾಶಂ ಚ ಸಃ ಭೂತಾದಿರಾವೃಣೋತ್, ಏತೇನ ಪೂರ್ವಪೂರ್ವತನ್ಮಾತ್ರಮುತ್ತರೋತ್ತರತನ್ಮಾತ್ರಂ ತದ್ವಿಶೇಷಂಚಾವೃಣೋದಿತಿ ದರ್ಶಿತಮ್।**[13] ಎಂದು ಪಿಳ್ಳೈ ಎಂಗಳಾಳ್ವಾನ್‌ರವರು ವ್ಯಾಖ್ಯಾನ ಮಾಡಿರುವುದರಿಂದಲೂ; ತತ್ವತ್ರಯ ವಿವರಣದಲ್ಲಿ ತನ್ಮಾತ್ರೆಗಳಿಗೆ ಆವರಣವನ್ನು ಹೇಳಿದಂತೆ ಅದರ ವಿಶೇಷಕ್ಕೂ ಆವರಣವನ್ನೂ ಹೇಳಿಲ್ಲದಿದ್ದರೂ ಅದು ಉಪಲಕ್ಷಣೆಯಿಂದ ಏರ್ಪಡುತ್ತದೆ. ಹಾಗಿಲ್ಲದಿದ್ದರೆ ಅಲ್ಲಿ ಭೂತಗಳಿಂದ ತನ್ಮಾತ್ರೆಗಳ ಉತ್ಪತ್ತಿ ಹೇಳುವಂತಿಲ್ಲ. ಆದ್ದರಿಂದ ಎರಡು ಅಭಿಪ್ರಾಯಗಳನ್ನೂ ಅಂಗೀಕರಿಸಬೇಕು.

ತತ್ವ ನಿರೂಪಣದಲ್ಲಿ ತನ್ಮಾತ್ರತದ್ವಿಶೇಷಗಳೆರಡಕ್ಕೂ ಆವರಣವನ್ನು ಹೇಳುವಲ್ಲಿ ಎರಡನ್ನೂ ಕೂಡಿಸಿಯೇ ಹೇಳಿದ್ದರೂ, ವಿಶೇಷೋತ್ಪತ್ತಿಗೆ ಮುನ್ನವೇ ತನ್ಮಾತ್ರೆಗೆ ಆವರಣವೇರ್ಪಡುತ್ತದೆ ಎಂದು ತಿಳಿಯಬೇಕು. ಸಿಪ್ಪೆಯಿಲ್ಲದೆ ಬೀಜಕ್ಕೆ ಮೊಳಕೆಯೊಡೆಯುವ ಶಕ್ತಿ ಹೇಗೆ ಇಲ್ಲವೊ ಹಾಗೆಯೇ ಆವಾರಕವಿಲ್ಲದಿದ್ದರೆ ಮುಂದಿನ ಕಾರ್ಯಶಕ್ತಿ ಇಲ್ಲವಾಗುತ್ತದೆ ಎಂಬುದನ್ನು ಹಿಂದೆಯೇ ತಿಳಿಸಲಾಗಿದೆ. ಹೀಗೆ ಭೂತತನ್ಮಾತ್ರ ಸೃಷ್ಟಿಯನ್ನು ಹೇಳುವಲ್ಲಿ ಆವರಣಕ್ರಮವು ವ್ಯಕ್ತವಾಗಿದ್ದರೂ ಹೇಳದೇ ಬಿಟ್ಟಿದ್ದು ಅದು ಇಲ್ಲಿ ಅವಶ್ಯಕವಿಲ್ಲ ಎಂಬುದಕ್ಕಾಗಿ ಅಲ್ಲ, ಬದಲಾಗಿ ಸಂಗ್ರಹೇಣ ಅಲ್ಲಿ ಪ್ರತಿಪಾದಿಸಿರುವುದರಿಂದ ಮಾತ್ರ. ಪೆರಿಯವಾಚ್ಚಾನ್ ಪಿಳ್ಳೆಯವರೂ ಹೀಗೆಯೇ ನಿರೂಪಿಸಿದ್ದಾರೆ.

## ಸೂ. 28 ತನ್ಮಾತ್ರಂಗಳಾವನ-ಭೂತಂಗಳಿನುಡೈಯ ಸೂಕ್ಷ್ಮಾವಸ್ಥೈಹಳ್.

ಭೂತತನ್ಮಾತ್ರೆಗಳ ಉತ್ಪತ್ತಿ ಕ್ರಮವನ್ನು ಹಿಂದಿನ ಸೂತ್ರದಲ್ಲಿ ತಿಳಿಸಿದರು. ಆ ತನ್ಮಾತ್ರೆಗಳೆಂದರೆ ಏನು ಎಂಬುದನ್ನು ಇಲ್ಲಿ ತಿಳಿಸುತ್ತಾರೆ.

**ತಸ್ಮಿಂ ಸ್ತಸ್ಮಿಂ ಸ್ತುತನ್ಮಾತ್ರಂ ತೇನತನ್ಮಾತ್ರತಾಸ್ಮೃತಾ।**

**ತನ್ಮಾತ್ರಾಣ್ಯವಿಶೇಷಾಣಿ ಅವಿಶೇಷಾಸ್ತತೋಹಿತೇ ನಶಾಂತಾನಾಹಿಘೋರಾಸ್ತೇನ ಮೂಢಾಶ್ಚಾವಿಶೇಷಿಣಃ**[1] ಎಂದು ಶಾಂತತ್ವ, ಘೋರತ್ವ, ಮೂಢತ್ವ ಲಕ್ಷಣವಾದ ವಿಶೇಷಗಳಲ್ಲಿದ ಶಬ್ದಾದಿಗಳನ್ನು ಗುಣವಾಗಿ ಉಳ್ಳ ಆಕಾಶಾದಿಭೂತ ಸೂಕ್ಷ್ಮಗಳೇ '**ತನ್ಮಾತ್ರ**'ಗಳು.

ಶಾಂತತ್ವವೆಂದರೆ - ಅನುಕೂಲವೇದ ನೀಯತ್ವ; ಘೋರತ್ವವೆಂದರೆ- ಪ್ರತಿಕೂಲವೇದನೀಯತ್ವ;

ಮೂಢತ್ವವೆಂದರೆ - ಉದಾಸೀನ ವೇದನೀಯತ್ವ. ಈ ಪಂಚಭೂತಗಳಲ್ಲಿ ಸ್ವಭಾವವೇ ಶಾಂತವಾಗಿರುವುದು ಭೂಮಿ ಮತ್ತು ಜಲ. ಘೋರವಾಗಿರುವುದು ತೇಜಸ್ಸು ಮತ್ತು ವಾಯು. ಮೂಢವಾಗಿರುವುದು ಆಕಾಶ. ಇವುಗಳೆಲ್ಲದರ ಸಮ್ಮೇಳನದಿಂದ (ಪಂಚಭೂತಗಳೂ ಅವುಗಳ ಕಾರ್ಯಗಳೂ) ಶಾಂತತ್ವ ಘೋರತ್ವ ಮೂಢತ್ವಗಳನ್ನು ಉಳ್ಳವಾಗಿರುತ್ತದೆ.

ತನ್ಮಾತ್ರೆಗಳಿಗೆ ಈ ಶಾಂತತ್ವಾದಿ ವಿಶೇಷಗಳು ಇಲ್ಲವಾದ್ದರಿಂದ ಅವುಗಳನ್ನು '**ಅವಿಶೇಷಗಳು**' ಎನ್ನಲಾಗುತ್ತದೆ. ತನ್ಮಾತ್ರೆಗಳೆಂದೂ, ಅವಿಶೇಷಗಳೆಂದೂ ಪರ್ಯಾಯಪದಗಳು. ಈ ವಿಚಾರದಲ್ಲಿ ಅಭಿಯುಕ್ತರಾದ ಯಾದವಪ್ರಕಾಶಾದಿಗಳೂ '**ತನ್ಮಾತ್ರಾಣ್ಯಾವಿಶೇಷಾ ಇತ್ಯನರ್ಥಾಂತರಂ। ಶಾಂತತ್ವ ಘೋರತ್ವ ಮೂಢತ್ವಮಿತಿ ತ್ರಯೋ ವಿಶೇಷಾಸ್ತ್ರೈಗುಣ್ಯಾತ್ಮನಃ ತೇಷಾಮನುದ್ಭವಾತ್ ಸೂಕ್ಷ್ಮಮಾಕಾಶಮವಿಶೇಷ ಲಕ್ಷಣಂ ಭವತಿ। ತೇನ ಶಬ್ದ ತನ್ಮಾತ್ರಮುಚ್ಯತೇ। ಏವಂ ಸೂಕ್ಷ್ಮೋ ವಾಯು ಸೂಕ್ಷ್ಮಂ ತೇಜಸೂಕ್ಷ್ಮಾ ಆಪಸೂಕ್ಷ್ಮಾ ಪೃಥಿವೀ।**'[2] ಎಂದು ತಿಳಿಸಿದ್ದಾರೆ. ಆದ್ದರಿಂದ ತ್ರಿವಿಧಾಹಂಕಾರದಲ್ಲಿ ಸಾತ್ವಿಕಾಹಂಕಾರದಿಂದ ಹನ್ನೊಂದು ಇಂದ್ರಿಯಗಳೂ, ತಾಮಸಾಹಂಕಾರದಿಂದ ಪಂಚ ಭೂತಗಳೂ ತನ್ಮಾತ್ರೆಗಳೂ ಉತ್ಪತ್ತಿಯಾದ ಕ್ರಮವು ಹೇಳಲ್ಪಟ್ಟಿತು.

## ಸೂ. 29 ಮತ್ತೆ ಇರಂಡು ಅಹಂಕಾರಮುಮ್ ಸ್ವಕಾರ್ಯಂಗಳೈ ಪಿರಪ್ಪಿಕ್ಕುಂ ಪೋದು ರಾಜಸ ಅಹಂಕಾರಮ್ ಸಹಕಾರಿಯಾಯಿರುಕ್ಕುಮ್.

ಸಾತ್ವಿಕ, ತಾಮಸ ಅಹಂಕಾರಗಳೆರಡೂ ಸ್ವಕಾರ್ಯಗಳನ್ನು ಉತ್ಪಾದಿಸುವಾಗ ಬೀಜಾಂಕುರಕ್ಕೆ ನೀರಿನಂತೆಯೂ, ಅಗ್ನಿಯ ಉಜ್ವಲತೆಗೆ ವಾಯುವಿನಂತೆಯೂ ರಾಜಸಾಹಂಕಾರವು ಸಹಕಾರಿಯಾಗಿರುತ್ತದೆ. ಇದರ ಸಹಕಾರಿತ್ವವೆಂದರೆ '**ರಜಃ ಪ್ರವರ್ತಕಂ ತತ್ರ**' ಎಂಬಂತೆ ಇದರಲ್ಲಿ ಇಂದ್ರಿಯ ಹೇತುವಾದ ಸತ್ವಾಂಶಕ್ಕೂ, ಭೂತ ಹೇತುವಾದ ತಮೋ ಅಂಶಕ್ಕೂ ಚಲಸ್ವಭಾವವುಳ್ಳ ರಜಸ್ಸು ಪ್ರೇರಕವಾಗಿ ಪ್ರವರ್ತಿಸುವುದು.

## ಸೂ. 30 ಸಾತ್ವಿಕಾಹಂಕಾರಮ್ ಶಬ್ದತನ್ಮಾತ್ರಾದಿ ಪಂಚಕತ್ತೈಯುಮುಡೈವೇ ಸಹಕಾರಿಯಾಯ್‌ಕ್ಕೊಣ್ಡು ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈನ್ದೈಯುಮ್ ಸೃಷ್ಟಿಕ್ಕುಮ್. ತತ್ ಸಹಕೃತಮಾಯ್‌ಕ್ಕೊಣ್ಡು ವಾಗಾದಿ ಕರ್ಮೇಂದ್ರಿಯಂ ಗಳೈನ್ದೈಯುಮ್ ಸೃಷ್ಟಿಕ್ಕುಮ್. ಇವ್ವೈ ಒಳಿಯ ತಾನೇ ಮನಸ್ಸೈ ಸೃಷ್ಟಿಕ್ಕುಂ ಎನ್ನುಮ್ ಶೊಲ್ಲುವರ್‌ಗಳ್.

ಸಾತ್ವಿಕ, ತಾಮಸ ಅಹಂಕಾರಗಳಿಗೆ ಸಾಮಾನ್ಯವಾಗಿರುವ ಸಹಕಾರಿಯನ್ನು ತಿಳಿಸಿದ ನಂತರ ಸಾತ್ವಿಕಾಹಂಕಾರಕ್ಕೆ ಅಸಾಧಾರಣವಾದ ಸಹಕಾರಿಗಳನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ.

ಸಾತ್ವಿಕಾಹಂಕಾರವು ಇಂದ್ರಿಯಗಳನ್ನು ಸೃಷ್ಟಿಸುವಾಗ ಇವುಗಳ ಪ್ರತಿನಿಯಮಕ್ಕಾಗಿ ಶಬ್ದ ತನ್ಮಾತ್ರೆಯನ್ನು ಸಹಕಾರಿಯಾಗಿ ಉಳ್ಳದ್ದಾಗಿ ಶ್ರೋತ್ರೇಂದ್ರಿಯವನ್ನೂ, ಸ್ಪರ್ಶ ತನ್ಮಾತ್ರೆಯನ್ನು ಸಹಕಾರಿಯಾಗಿ ಕೊಂಡು ತ್ವಗಿಂದ್ರಿಯವನ್ನೂ; ರೂಪತನ್ಮಾತ್ರೆಯನ್ನು ಸಹಕಾರಿಯಾಗಿ ಕೊಂಡು ಚಕ್ಷುರಿಂದ್ರಿಯವನ್ನೂ; ರಸನ್ಮಾತ್ರೆಯನ್ನು ಸಹಕಾರಿಯಾಗಿ ಕೊಂಡು ಜಿಹ್ವೇಂದ್ರಿಯವನ್ನೂ; ಗಂಧತನ್ಮಾತ್ರೆಯನ್ನು ಸಹಕಾರಿಯಾಗಿ ಕೊಂಡು ಘ್ರಾಣೇಂದ್ರಿಯವನ್ನೂ ಸೃಷ್ಟಿಸುತ್ತದೆ. ಹೀಗೆ ಸೃಷ್ಟಿಸಿದ ಅನಂತರ ಶ್ರೋತ್ರಗ್ರಾಹ್ಯವಾದ ಶಬ್ದವಿಷಯವಾಗಿಯೂ, ತ್ವಂಗಿಂದ್ರಿಯ ಗ್ರಾಹ್ಯವಾದ ಸ್ಪರ್ಶವಿಷಯವಾಗಿಯೂ, ಚಕ್ಷುರಿಂದ್ರಿಯ ಗ್ರಾಹ್ಯವಾದ ರೂಪದಲ್ಲಿ ಪ್ರವೃತ್ತಿ ಹೇತು, ರಸನಾವಿಷಯ ರಸಾಶ್ರಯವಾದ ಜಲದಲ್ಲಿ ನಿಸ್ಸರಣ ಹೇತುವಾಗಿಯೂ, ಘ್ರಾಣ ವಿಷಯ ಗಂಧಾಶ್ರಯ ಪೃಥಿವ್ಯಂಶವಾದ ಅನ್ನಾದಿಗಳಲ್ಲಿ (ತಿನ್ನುವುದೂ ಹೊರಗೆ ಕಳಿಸುವುದೂ) ಬುಜೀಷೋತ್ಸರ್ಜನ ಹೇತುವಾಗಿಯೂ ಸೃಷ್ಟಿ ಇರುತ್ತದೆ. ಹೀಗೆ ಜ್ಞಾನೇಂದ್ರಿಯ ಪಂಚಕ ಶೇಷವಾಗಿ ಶಬ್ದಾದಿ ಪಂಚಕಗಳು ಸೇರಿರುತ್ತವೆ.

ಕರ್ಮೇಂದ್ರಿಯ ಪಂಚಕಗಳನ್ನು ಸೃಷ್ಟಿಸುವಾಗ ಶ್ರೋತ್ರ ಸಹಕೃತವಾಗಿ ವಾಕ್ಕನ್ನೂ, ತ್ವಕ್ ಸಹಕೃತವಾಗಿ ಪಾಣಿಯನ್ನೂ, ಚಕ್ಷುಸ್ಸಹಕೃತವಾಗಿ ಪಾದವನ್ನೂ, ಜಿಹ್ವಾ ಸಹಕೃತವಾಗಿ ಉಪಸ್ಥೆಯನ್ನೂ, ಘ್ರಾಣ ಸಹಕೃತವಾಗಿ ವಾಯುವನ್ನೂ ಸೃಷ್ಟಿಸುತ್ತದೆ. ಹೀಗೆ ಈ ಸಾತ್ವಿಕಾಹಂಕಾರವು ಉಭಯಾತ್ಮಕವಾದ ಮನಸ್ಸನ್ನು ಮಾತ್ರ ಯಾವ ಸಹಕಾರವೂ ಇಲ್ಲದೆ ತಾನೇ ಸೃಷ್ಟಿಸುತ್ತದೆ ಎಂದು ತತ್ವವೇತ್ತರು ತಿಳಿಸುತ್ತಾರೆ.

ಇದನ್ನು ಶ್ರೀ ವಿಷ್ಣು ಪುರಾಣವ್ಯಾಖ್ಯಾನದಲ್ಲಿ '**ಅಯಮತ್ರೇಂದ್ರಿಯ ಸೃಷ್ಟಿಕ್ರಮಃ- ವೈಕಾರಿಕಾಹಂಕಾರಾತ್ ಕ್ರಮೇಣ ಶಬ್ದ ತನ್ಮಾತ್ರಾದಿ ಪಂಚಕ ಸಹಾಯಾತ್ ಕ್ರಮೇಣ ಶ್ರೋತ್ರಾದಿ ಜ್ಞಾನೇಂದ್ರಿಯ ಪಂಚಕಸ್ಯ ಸೃಷ್ಟಿಃ ತಸ್ಮಾದೇವ ತತ್ಸಹಾಯಾತ್ ವಾಗಾದಿ ಕರ್ಮೇಂದ್ರಿಯ ಪಂಚಕಸ್ಯ ಅಸಹಾಯಾತ್ತು ತಸ್ಮಾತ್ ಮನಸಃ ಸೃಷ್ಟಿರಿತಿ**' [1] ಎಂದು ಪಿಳ್ಳೈ ಎಂಗಾಳಾಳ್ವಾನ್ ವಿವರಿಸಿದ್ದಾರೆ.

## ಸೂ. 31 ಶಿಲರ್ ಇಂದ್ರಿಯಂಗಳಿಲ್ ಶಿಲವತ್ತೈ ಭೂತಕಾರ್ಯಮೆನ್ರಾರ್‌ಹಳ್

'ಕೆಲವರು ಇಂದ್ರಿಯಗಳ ಉತ್ಪತ್ತಿಯನ್ನು ಪಂಚಭೂತಗಳ ಕಾರ್ಯವೆನ್ನುತ್ತಾರೆ' ಎಂಬುದಾಗಿ ತಮ್ಮ ನಿರೂಪಣೆಗೆ ವಿರುದ್ಧವಾದ ಅಭಿಪ್ರಾಯವನ್ನು ನಿರಸನಮಾಡುವುದಕ್ಕಾಗಿ ಪ್ರಸ್ತಾಪಿಸುತ್ತಾರೆ.

ಕೆಲವರು ಎಂದರೆ- ಘ್ರಾಣಾದಿ ಇಂದ್ರಿಯಗಳನ್ನು ಪೃಥಿವ್ಯಾದಿ ಭೂತಗಳ ಕಾರ್ಯವೆಂದು ಹೇಳುವ **'ನೈಯಾಯಿಕರು'**. ಇವರುಗಳು ಆನುಮಾನಿಕರಾದ್ದರಿಂದ ಅನುಮಾನ ಪ್ರಮಾಣದಿಂದಲೇ ತಮ್ಮ ಸಿದ್ಧಾಂತವನ್ನು ನಿರೂಪಿಸುತ್ತಾರೆ.

## ಸೂ. 32 ಅತು ಶಾಸ್ತ್ರವಿರುದ್ಧಮ್

ಹೀಗೆ ಇಂದ್ರಿಯಗಳನ್ನು ಭೂತಕಾರ್ಯಗಳೆನ್ನುವುದು (ಅಹಂಕಾರಗಳಿಂದ ಎನ್ನುವ) ಇತಿಹಾಸ ಪುರಾಣಾದಿಗಳಿಗೆ ವಿರುದ್ಧವಾಗಿದೆ.

## ಸೂ. 33 ಭೂತಂಗಳ್ ಆಪ್ಯಾಯಕಂಗಳಿತ್ತನ್ನೆ.

ಮೋಕ್ಷ ಧರ್ಮ ಪುರಾಣದಲ್ಲಿ

**ಶಬ್ದಃ ಶ್ರೋತ್ರಂ ತಥಾಖಾದಿತ್ರಯ ಮಾಕಾಶಸಂಭವಮ್।**

**ವಾಯೋಸ್ಸ್ಪರ್ಶಂ ತಥಾಚೇಷ್ಟಾತ್ವಕ್ಚೈವ ತ್ರಿತಯಂ ಸ್ಮೃತಮ್।**

**ರೂಪಂ ಚಕ್ಷುಸ್ತಥಾವ್ಯಕ್ತಿಃ ತ್ರಿತಯಂ ತೈಜ ಉಚ್ಯತೇ।**

**ರಸಃ ಕ್ಲೇದಶ್ಚ ಜಿಹ್ವಾ ಚ ತ್ರಯೋಜಲಗುಣಾಸ್ಮೃತಾಃ।**

**ಘ್ರಾಣಂ ಘ್ರೇಯಂ ಶರೀರಂ ಚ ತೇತು ಭೂಮಿ ಗುಣಾಸ್ಮೃತಾಃ।** [1]

ಎಂದು ಹೇಳುವುದರಿಂದಲೂ, ಇತಿಹಾಸಗಳೂ ಇಂದ್ರಿಯಗಳಿಗೆ ಭೌತಿಕತ್ವವನ್ನು ಹೇಳುವುದರಿಂದ ಇಂದ್ರಿಯಗಳಿಗೆ ಭೂತಗಳು ಕಾರಣವಾಗಬೇಕಿಲ್ಲ ಎಂದರೆ ಅದು ಹಾಗಲ್ಲ ಎಂಬುದನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ.

ಇತಿಹಾಸಗಳಲ್ಲಿ ಇಂದ್ರಿಯಗಳಿಗೆ ಹೇಳಲ್ಪಟ್ಟ ಭೌತಿಕತ್ವವು ಭೂತಗಳಿಂದ ಉಂಟಾದ **'ಆಪ್ಯಾಯನ'** ಮಾತ್ರದಿಂದ. ಆದ್ದರಿಂದ ಇಂದ್ರಿಯಗಳಿಗೆ ಭೂತಗಳು ಕೇವಲ **'ಆಪ್ಯಾಯಕಗಳು'**.

'ಆಪ್ಯಾಯಕತ್ವ'ವೆಂದರೆ – ಪೋಷಕತ್ವ. ಭೂತಗಳು ಇಂದ್ರಿಯಗಳಿಗೆ ಪೋಷಕಗಳಾಗಿವೆಯೇ ವಿನಃ ಕಾರಣಗಳಾಗಿಲ್ಲ.

ಇನ್ನು ಅಹಂಕಾರವನ್ನು ಇಂದ್ರಿಯಗಳಿಗೆ ನಿಮಿತ್ತಕಾರಣವಾಗಿಯೂ, ಭೂತಗಳನ್ನು ಇವುಗಳಿಗೆ ಉಪಾದಾನಕಾರಣವಾಗಿಯೂ, ಹೇಳುವ ಕುದೃಷ್ಟಿ ಮತವೊಂದಿದೆ.

**ಅಹಂಕಾರಸ್ಯೇಂದ್ರಿಯಾಣಿ ಪ್ರತಿನಿಮಿತ್ತತ್ವಮೇವ।**

**ಭೂತಾನಾಮೇವೋಪಾದಾನತ್ವಮ್।**

**ಅನ್ನಮಯಂ ಹಿ ಸೋಮ್ಯಮನಃ ಆಪೋಮಯಃ ತೇಜೋಮಯೀ ವಾಕ್।**

**ಇತಿ ಶ್ರುತೇರಿತಿ ಕೇಚಿದಾಹುಃ।**

**ತದಯುಕ್ತಮ್, ಅಹಂಕಾರಸ್ಯೈವೋಪಾದಾನತ್ವೇऽಪಿ ಭೂತಾನಾಮಾಪ್ಯಾಯಕತ್ವೇನಾಪಿ ತಥಾನಿರ್ದೇಶೋಪಪತ್ತೇಃ।** [2] ಎಂದು ಪಿಳ್ಳೈ ಎಂಗಳಾಳ್ವಾನ್ ಶ್ರೀ ವಿಷ್ಣುಪುರಾಣ ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

**(ಇಂದ್ರಿಯಂಗಳಿಲ್ ಶಿಲವತ್ತೈ)** ಎಂದು ಪ್ರಾರಂಭಿಸಿ ಇವರು ಪ್ರತಿಪಾದಿಸಿದ ಕ್ರಮವು ಪ್ರತಿಕ್ಷಿಪ್ತವು. ಹಾಗಾದರೆ **'ಅತು ಶಾಸ್ತ್ರವಿರುದ್ಧಂ'** ಎಂದು ಹೇಳಿದುದು ಏಕೆ ಎಂದರೆ **'ಏಕಾದಶಂ ಮನಶ್ಚಾತ್ರ ದೇವಾ ವೈಕಾರಿಕಾಃ ಸ್ಮೃತಾಃ'**[3] ಇತ್ಯಾದಿಗಳಿಂದ ಇಂದ್ರಿಯಗಳನ್ನು ಸಾತ್ವಿಕಾಹಂಕಾರ ಕಾರ್ಯವೆಂದೇ ಹೇಳುವ ಪುರಾಣಾದಿಗಳಿಗೆ ವಿರುದ್ಧ ಎಂದರ್ಥ.

ಪುರಾಣಾದಿಗಳಿಗಿಂತ **'ಅನ್ನಮಯಂ ಹಿ ಸೋಮ್ಯಮನಃ'**[4] ಇತ್ಯಾದಿ ಶ್ರುತಿಗಳಿಗೆ ಪ್ರಾಬಲ್ಯ ವಿದ್ದರೂ **'ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್'** ಎಂಬುದರಿಂದ ಉಪಬೃಂಹಣಾನುಕೂಲವಾಗಿ ಅವುಗಳಿಗೆ ಅರ್ಥಹೇಳಬೇಕು. ಆದರೆ ಉಪಬೃಂಹಣಗಳೂ ಭೌತಿಕತ್ವವನ್ನು ಹೇಳುವುದರಿಂದ ಇಂದ್ರಿಯಗಳಿಗೆ ಭೂತಗಳೇ ಕಾರಣವೆಂದು ತೋರುವುದಲ್ಲ ಎಂದರೆ (ಭೂತಂಗಳ್ ಅಪ್ಯಾಯಕಂಗಳಿತ್ತನ್ನೆ) ಎಂದು ನಿರ್ವಹಿಸುತ್ತಾರೆ. ಘ್ರಾಣಾದಿಗಳಾದ ಇಂದ್ರಿಯಗಳಿಗೆ ಪೃಥಿವ್ಯಾದಿ ಭೂತಂಗಳಿಂದುಂಟಾದ ಆಪ್ಯಾಯನವು ಶ್ರುತಿ ಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ. ಸುಬಾಲೋಪನಿಷತ್ ವ್ಯಾಖ್ಯಾನದಲ್ಲಿ **'ಘ್ರಾಣಾದೀನಾಂ ಇಂದ್ರಿಯಣಾಂ ಹಿ ಪೃಥಿವ್ಯಾದಿ**

ಭೂತೈರಾಪ್ಯಾಯನಂ ಶ್ರುತಿಸ್ಮೃತಿಷು ಪ್ರಸಿದ್ಧಮ್'; 'ಅನ್ನಮಯಂ ಹಿ ಸೋಮ್ಯಮನಃ ಆಪೋಮಯಃ ಪ್ರಾಣಃ ತೇಜೋಮಯಾ ವಾಕ್'; 'ಶ್ರೋತಂ ನಭೋ ಘ್ರಾಣಮುಕ್ತಂ ಪೃಥಿವ್ಯಾಃ' ಎಂದು ಆರಂಭಿಸಿ 'ವಾಯ್ವಾತ್ಮಕಂ ಸ್ಪರ್ಶನಮಾನಸ್ತಿ ನಭಃ ಶ್ರೋತ್ರ ಇ್ಟ ತನ್ಮಯಂ'[5] ಇತ್ಯಾದಿಗಳಲ್ಲಿ ಶ್ರುತ ಪ್ರಕಾಶಿಕಾಚಾರ್ಯರು ಸ್ಪಷ್ಟಪಡಿಸಿದ್ದಾರೆ.

ಹೀಗೆ ಇಂದ್ರಿಯಗಳಿಗೆ ಭೂತಗಳು ಯಾವಾಗಲೂ ಆಪ್ಯಾಯ ವೆಂಬುದನ್ನು ಮೋಕ್ಷಧರ್ಮದಲ್ಲಿ ಭೃಗು ಭರದ್ವಾಜ ಸಂವಾದದಲ್ಲಿ 'ಆಪ್ಯಾಯಂತೇ ಚ ತೇನಿತ್ಯಂಧಾತವಸ್ತೈಸ್ತು ಪಂಚಭಿಃ'[6] ಎಂದು ಸುವ್ಯಕ್ತವಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಭೂತಗಳು ಇಂದ್ರಿಯಗಳಿಗೆ ಆಪ್ಯಾಯಕಗಳೇ ವಿನಃ ಕಾರಣಗಳಲ್ಲ ಎಂಬುದು ಸಿದ್ಧವಾಯಿತು.

**ಸೂ. 34 ಇವೈ ಕೂಡಿನಾಲಲ್ಲದು ಕಾರ್ಯಕರಮಲ್ಲಾ ಮೈಯಾಲೇ ಮಣ್ಣೈಯುಮ್ ಮಣಲೈಯುಮ್ ನೀರೈಯುಮ್ ಶೇರ್ತೊರು ದ್ರವ್ಯಮಾಕ್ಕಿ ಚುವರಿಡುವಾರ್ಪೈ ಪ್ಪೋಲೇ, ಈಶ್ವರನ್ ಇವತ್ತೈಯೆಲ್ಲಾಮ್ ತನ್ನಿಲೇ ಶೇರ್ತು ಓರಣ್ಡಮಾಕ್ಕಿ ಅತುಕ್ಕುಳ್ಳೇ ಚತುರ್ಮುಖನೈ ಸೃಷ್ಟಿತ್ತರುಳುಮ್.**

ಹೀಗೆ ಮಹದಾದಿ ಪದಾರ್ಥಗಳ ಉತ್ಪತ್ತಿ ಕ್ರಮವನ್ನು ತಿಳಿಸಿದ ನಂತರ ಇವುಗಳಿಂದ ಅಂಡಸೃಷ್ಟ್ಯಾದಿಗಳನ್ನು ಮಾಡುವ ಪ್ರಕಾರವನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ.

**(ಇವೈ ...... ಅಲ್ಲಾಮ್ಮೆಯಾಲೇ)** - 'ನಾನಾವೀರ್ಯಾಪೃಥಗ್ಭೂತಾಸ್ತತಸ್ತೇ ಸಂಹಂತಿಂ ವಿನಾ'; 'ನಾಶಕ್ನುವನ್ಪ್ರಜಾಸ್ರಷ್ಟು ಮಸಮಾಗಮ್ಯ ಕೃತ್ಸ್ನಶಃ'[1] ಎಂಬಂತೆ ಶಾಂತತ್ವ, ಘೋರತ್ವ,ಮೂಢತ್ವಗಳಿಂದ ನಾನಾಶಕ್ತಿಯುಕ್ತಗಳಾಗಿ ಬಿಡಿ ಬಿಡಿಯಾಗಿರುವ ಈ ಮಹದಾದಿ ಪದಾರ್ಥಗಳು ಪರಸ್ಪರ ಸೇರದ ಹೊರತು ಅಂಡರೂಪವಾದ ಕಾರ್ಯವನ್ನು ಉತ್ಪತ್ತಿ ಮಾಡಲಾರದ್ದರಿಂದ

**(ಮಣ್ಣೈಯುಂ........ಚುವರಿಡು ವಾರ್ಪೈಪ್ಪೋಲೇ.)** - ಬಿಡಿ ಬಿಡಿಯಾಗಿರುವ ಮಣ್ಣು, ಮರಳು ಮತ್ತು ನೀರನ್ನು ಸೇರಿಸಿ ಸಮುದಾಯಾತ್ಮಕವಾದ ಒಂದು ದ್ರವ್ಯವಾಗಿಸಿ ಗೋಡೆ ರೂಪವಾದ ಕಾರ್ಯವನ್ನು ನಿರ್ಮಿಸುವವರಂತೆ.

**(ಈಶ್ವರನ್.........ಅಂಡಮಾಕ್ಕಿ)** - ಜಗತ್ತಿನ ಸೃಷ್ಟಿಕರ್ತನಾದ ಈಶ್ವರನು 'ಸಮೇತ್ಯಾನ್ಯೋನ್ಯ ಸಂಯೋಗಂ ಪರಸ್ಪರ ಸಮಾಶ್ರಯಾಃ'; 'ಏಕ ಸಂಘಾತಲಕ್ಷ್ಯಾಶ್ಚ ಸಂಪ್ರಾಪ್ಯೈಕ್ಯಮಶೇಷತಃ'; 'ಮಹದಾದಯೋವಿಶೇಷಾನ್ತಾಹ್ಯಂಡ ಮುತ್ಪಾದಯಂತಿತೇ'[2] ಎಂಬಂತೆ ಇವೆಲ್ಲವನ್ನೂ ಅನ್ಯೋನ್ಯ ಸಂಘಾತವಾಗಿಸಿ ಇವುಗಳಿಂದ ಅಂಡಸೃಷ್ಟಿಯನ್ನು ಮಾಡಿದನು.

ಈ ಅಂಡದೊಳಗೆ ಮಹದಾದಿ ಕಾರ್ಯಗಳನ್ನು ಪೂರ್ಣವಾಗಿ ಕಾಣುವುದರಿಂದ ಮಹದಾದಿ ಪದಾರ್ಥಗಳೆಲ್ಲವನ್ನೂ ಸೇರಿಸಿ ಅಂಡ ಸೃಷ್ಟಿಯನ್ನು ಈಶ್ವರ ಮಾಡಿದನೆಂಬುದು ಸುವ್ಯಕ್ತ, ಆದ್ದರಿಂದ **'ಭೂತೇಭ್ಯೋಽಣ್ಡಂ ಮಹಾಬುದ್ಧೇ ಬೃಹತ್ತದುದಕೇಶಯಮ್'**[3]

ಎಂಬಂತೆ ಭೂತಗಳಿಂದ ಅಂಡೋತ್ಪತ್ತಿ, ಅದು ನೀರಲ್ಲಿ ಇರುತ್ತದೆ ಎಂದು ಹೇಳಲ್ಪಟ್ಟದ್ದು

**ಅಪ ಏವ ಸಸರ್ಜಾದೌ ತಾಸುವೀರ್ಯಮಪಾಸೃಜತ್।**

**ತದಂಡಮಭವದ್ಧೈಮಂ ಸಹಸ್ರಾಂಶು ಸಮಪ್ರಭಮ್।**[4]

ಎಂದು ನೀರಿನಿಂದ ಅಂಡದ ಉತ್ಪತ್ತಿ ಯಾಯಿತೆಂದು ಮನುಭಗವಾನ್ ಹೇಳಿದ್ದು ಭೂತಾಂತರಗಳಿಗೂ ಉಪಲಕ್ಷಣವಾಗಿದೆ. ಅಂದರೆ- ಹಿಂದಿನ ಭೂತಾಂಶಗಳೊಡನೆ ಸಂಸೃಷ್ಟವಾಗಿ ಪೃಥಿವಿಯೂ ತನ್ನೊಳಗೆ ಕರಗಿರುವ ನೀರಿನಿಂದ ಉತ್ಪನ್ನವಾಗಿ ಅದರಲ್ಲೇ ಇದೆ ಎಂದರ್ಥ.

**(ಅತುಕ್ಕುಳ್ಳೇ..........ಅರುಳುಂ)**- ಈ ರೀತಿಯಾಗಿ ಅಂಡಸೃಷ್ಟಿಯಾಗುವ ರೀತಿಯನ್ನು ತಿಳಿಸಿ, ಅನಂತರ ಈ ಬಾಹ್ಯ ಭೂತಗಳು ಆಂತರವಾದ ಆಕಾಶಾದಿಗಳಾಗಿ ಪರಿಣಮಿಸಿದ ನಂತರ, ಆದರಿಂದ ಲೋಕ ವಿಭಾಗಗಳನ್ನು ಮಾಡುವುದಕ್ಕಾಗಿಯೂ, ಆ ಲೋಕಗಳಲ್ಲಿ ದೇವಾದಿ ಜೀವ ವಿಭಾಗಗಳನ್ನು ಮಾಡುವುದಕ್ಕಾಗಿಯೂ, ಈ ಅಂಡದಲ್ಲಿ ಬದ್ಧಾತ್ಮ ಸಮಷ್ಟಿ ಭೂತನಾದ ಬ್ರಹ್ಮನನ್ನು ಸೃಷ್ಟಿಸಿದ ಕ್ರಮವನ್ನೂ ನಿರೂಪಿಸಲಾಯಿತು. ಚತುರ್ಮುಖನಿಗೆ ಬದ್ಧಾತ್ಮಸಮಷ್ಟಿಭಾವವೆಂದರೆ- ಈ ಅಂಡಕ್ಕೆ ಬೇಕಾದ ಕರ್ಮವಶ್ಯಚೇತನರು ಇವನ ಶರೀರದಲ್ಲಿ ಉಂಟಾಗುವುದು. ಹೀಗೆ ಚತುರ್ಮುಖನನ್ನು ಸೃಷ್ಟಿಸಿದ್ದು , ಇನ್ನು ಮುಂದೆ ನಡೆಯುವ ಸೃಷ್ಟಿಯೆಲ್ಲವನ್ನೂ ಸದ್ವಾರಕ (ಇವನ ಮೂಲಕ) ವಾಗಿ ನಡೆಸುವುದಕ್ಕಾಗಿ.

**ಸೂ. 35 ಅಂಡತ್ತೈಯುಂ ಅಂಡಕಾರಣಂಗಳೈಯುಂ ತಾನೇ ಉಂಡಾಕ್ಕುಮ್. ಅಂಡತ್ತುಕ್ಕುಳ್ಪಟ್ಟ ವಸ್ತುಕ್ಕಳೈ ಚೇತನರ್‌ಕ್ಕು ಅಂತರ್ಯಾಮಿಯಾಯ್ ನಿನ್ರು ಣ್ಡಾಕ್ಕುಮ್.**

ಸಮಷ್ಟಿ ಸೃಷ್ಟಿಯಲ್ಲೂ ,ವ್ಯಷ್ಟಿ ಸೃಷ್ಟಿಯಲ್ಲೂ ಸರ್ವೇಶ್ವರನು ಅನುಸರಿಸುವ ಕ್ರಮವನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ.

**(ಅಂಡತ್ತೈಯುಂ ........ತಾನೇ ಉಂಡಾಕ್ಕುಂ)**- ಸಮುದಾಯ ಕಾರ್ಯವಾದ ಅಂಡವನ್ನೂ, ಇದರ ಕಾರಣವಾದ ಮಹದಾದಿ ಪದಾರ್ಥಗಳನ್ನೂ ಸತ್ಯಸಂಕಲ್ಪನಾದ ತನ್ನ ಅವ್ಯವಹಿತವಾದ ಸಂಕಲ್ಪದಿಂದ ಉಂಟು ಮಾಡುತ್ತಾನೆ.

**ಸೋಽಭಿಧ್ಯಾಯ ಶರೀರಾತ್ಸ್ವಾತ್ ಸಿಸೃಕ್ಷುರ್ವಿವಿಧಾಃ ಪ್ರಜಾಃ।**
**ಅಪಏವ ಸಸರ್ಜಾದೌ ತಾಸುವೀರ್ಯಮಪಾಸೃಜತ್।**
**ತದಣ್ಡಮಭವದ್‌ಧೈಮಂ ಸಹಸ್ರಾಂಶು ಸಮಪ್ರಭಮ್।** [1]ಎಂಬಂತೆ.

**(ಅಂಡತ್ತುಕ್ಕುಳ್ಪಟ್ಟ...... ನಿನ್ರುಣ್ಡಾಕ್ಕುಮ್)**- ಚತುರ್ಮುಖಾದಿ ಚೇತನರ ಹೃದಯಗಳಲ್ಲಿದ್ದು 'ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಂ ಅಪೋಹನಂ ಚ '[2] ಎಂಬಂತೆ ಸಂಕಲ್ಪಜ್ಞಾನಾದಿಗಳನ್ನು ಉಂಟುಮಾಡಿಕೊಂಡು ಅಂಡದೊಳಗೆ ಸಕಲ ಪದಾರ್ಥಗಳನ್ನು ಸೃಷ್ಟಿಸುತ್ತಾನೆ.

**ಯತ್ಕಿಂಚಿತ್ ಸೃಜ್ಯತೇ ಯೇನ ಸತ್ವಜಾತೇನ ವೈದ್ವಿಜ।**
**ತಸ್ಯ ಸೃಜಸ್ಯ ಸಂಭೂತೌ ತತ್ ಸರ್ವೈ ಹರೇಸ್ತನುಃ।** [3]

ಎಂಬಂತೆ ಈಶ್ವರನು ಸಕಲ ಕರ್ತೃ ಶರೀರಿಯಾಗಿದ್ದು ಸಕಲ ಕಾರ್ಯಗಳನ್ನೂ ಸೃಷ್ಟಿಸುತ್ತಾನೆ ಎನ್ನಲಾಗಿದೆ.

**ಸೂ. 36. ಅಂಡಂಗಳ್ ತಾನ್ ಅನೇಕಂಗಳಾಯ್, ಪದಿನಾಲು ಲೋಕಂಗಳೋಡೇ ಕೂಡಿ ಒನ್ರುಕ್ಕೊನ್ರು ಪದಿತ್ತು ಮಡಂಗಾನ ಏಳು ಆವರಣಂಗಳಾಲುಂ ಶೂಳಪ್ಪಟ್ಟು ಈಶ್ವರನುಕ್ಕು ಕ್ರೀಡಾಕಂದುಕಸ್ಥಾನೀಯಂಗಳಾಯ್, ಜಲಬುದ್ಬುದಂ ಪೋಲೇ ಏಕಕಾಲತ್ತಿಲೇ ಸೃಷ್ಟಂಗಳಾಯಿರುಕ್ಕುಂ.**

ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ಇಂತಹ ಅಂಡಗಳ ಬಹುತ್ವವನ್ನೂ, ಅವುಗಳು ಇರುವ ರೀತಿಯನ್ನೂ, ಅವುಗಳು ಪರಮಾತ್ಮನಿಗೆ ಯಾವ ಪ್ರಕಾರದಲ್ಲಿ ವಿನಿಯೋಗವಾಗುತ್ತದೆ ಎಂಬುದನ್ನೂ, ಅವುಗಳ ಪರಿಣಾಮ ಪ್ರಕಾರಗಳನ್ನೂ ಈ ಸೂತ್ರದಲ್ಲಿ ವಿವರಿಸುತ್ತಾರೆ.

**(ಅಂಡಂಗಳ್ ತಾನ್ ಅನೇಕಂಗಳಾಯ್)** - **'ಅಂಡಾನಾಂತು ಸಹಸ್ರಾಣಾಂ ಸಹಸ್ರಾಣ್ಯಯುತಾನಿ ಚ'**;[1] **'ಈ ದೃಶಾನಾಂ ತಥಾ ತತ್ರ ಕೋಟಿ ಕೋಟಿ ಶತಾನಿಚ।'** ಎನ್ನಲಾಗಿದೆ.

**(ಪದಿನಾಲು ಲೋಕಂಗಳೋಡೇ ಕೂಡಿ)**- ಹದಿನಾಲ್ಕು ಲೋಕಗಳಿಂದ ಕೂಡಿ-ಹದಿನಾಲ್ಕು ಲೋಕಗಳು ಯಾವುದೆಂದರೆ - ಕೆಳಗಿನ ಅಂಡಕಟಾಹದ ಮೇಲ್ಭಾಗದಲ್ಲಿ ಎಂಭತ್ತು ಮೂರು ನೂರು ಸಾವಿರದ ಎಂಭತ್ತು ಸಾವಿರ ಯೋಜನ ಉದ್ದವುಳ್ಳ ಗರ್ಭೋದಕದ ಮೇಲೆ

**ಸಪ್ತತಿಸ್ತು ಸಹಸ್ರಾಣಾಂ ದ್ವಿ ಜೋಚ್ಛ್ರಾಯೋಪಿ ಕಥ್ಯತೇ।**
**ದಶಸಾಹಸ್ರಮೇಕೈಕಂ ಪಾತಾಳಂ ಮುನಿಸತ್ತಮ।**
**ಅತಲಂ ವಿತಲಂ ಚೈವ ನಿತಲಂ ಚ ಗಭಸ್ತಿಮತ್।**
**ಮಹಾಖ್ಯಂ ಸುತಲಂಚಾಗ್ರ್ಯಂ ಪಾತಾಳಂ ಚೈವ ಸಪ್ತ ಮಮ್ ।**[2]

ಎಂಬಂತೆ ಒಂದೊಂದೂ ಹದಿನಾಲ್ಕು ಸಾವಿರ ಯೋಜನ ಉದ್ದಗಲವುಳ್ಳದ್ದಾಗಿ ದೈತ್ಯದಾನವಪನ್ನಗ ಸುಪರ್ಣಾದಿಗಳು ವರ್ತಿಸುವ ದೇಶವಾಗಿ

**ಶುಕ್ಲ ಕೃಷ್ಣಾರುಣಾಃ ಪೀತಾಶ್ಶರ್ಕರಾ ಶೈಲಕಾಂಚನಾಃ।**
**ಭೂಮಯೋಯತ್ರಮೈತ್ರೇಯ ವರಪ್ರಾಸಾದ ಶೋಭಿತಾಃ।** [3]

ಎಂಬಂತೆ ಬಿಳುಪಾಗಿಯೂ ಕಪ್ಪಾಗಿಯೂ, ಕೆಂಪಾಗಿಯೂ, ಹಳದಿಯಾಗಿಯೂ, ಕಾಲುವೆಯು ಸಕ್ಕರೆ ರೂಪವಾಗಿಯೂ, ಪರ್ವತರೂಪವಾಗಿಯೂ, ಬಂಗಾರಮಯವಾದ ಸ್ಥಲ ವಿಶೇಷಗಳುಳ್ಳದ್ದಾಗಿಯೂ, ವಿಲಕ್ಷಣವಾದ ಮಾಳಿಗೆ, ಪ್ರಾಸಾದ , ತೋರಣಗಳಿಂದ ಅಲಂಕೃತವಾಗಿ, ಸ್ವರ್ಗಾದಿಗಳಿಗಿಂತಲೂ ನಿರತಿಶಯ ಭೋಗ್ಯವಾಗಿ ಅತಲ, ವಿತಲ, ನಿತಲ, ಗಭಸ್ತಿಮತ್ ಎಂದು ಹೇಳಲ್ಪಡುವ ತಲಾತಲ, ಮಹಾತಲ, ಸುತಲ, ಪಾತಾಲ, ವೆಂದು ಹೆಸರುಳ್ಳ ಏಳು **'ಅಧೋಲೋಕಗಳೂ'** ಇವೆ. ಅದಕ್ಕೆ ಮೇಲೆ ಎಪ್ಪತ್ತುಸಾವಿರ ಯೋಜನ ಅಗಲವುಳ್ಳದ್ದಾಗಿ, ಸಪ್ತದ್ವೀಪಸಾಗರ ಪರ್ವತ ವಿಶಿಷ್ಟವಾಗಿ ಪಾದಚಾರಿಗಳಾದ ಮನುಷ್ಯರು ವರ್ತಿಸುವ ದೇಶವಾಗಿ ಪದ್ಮಾಕಾರವಾಗಿರುವುದು **'ಭೂಲೋಕವು'**. ಈ ಭೂಲೋಕಕ್ಕೆ ಮೇಲೆ ಆದಿತ್ಯನಿಗೆ ಕೆಳಗೆ ನೂರು ಸಾವಿರ ಯೋಜನ ಉದ್ದವುಳ್ಳದ್ದಾಗಿ ಗಂಧರ್ವಾದಿಗಳು ವರ್ತಿಸುವ ದೇಶವು **'ಭುವರ್ಲೋಕವು'**. ಆದಿತ್ಯನಿಗೆ ಮೇಲೆ ಧ್ರುವನಿಗೆ ಕೆಳಗೆ ಹದಿನಾಲ್ಕುಸಾವಿರಯೋಜನ ಉದ್ದವುಳ್ಳದ್ದಾಗಿ, ಅಧಿಕಾರವುಳ್ಳ ಗ್ರಹ, ನಕ್ಷತ್ರೇಂದ್ರಾದಿಗಳು ವರ್ತಿಸುವುದೇ **'ಸ್ವರ್ಲೋಕವು'**. ಧ್ರುವನಿಗೆ ಮೇಲೆ ಒಂದು ಕೋಟಿ ಯೋಜನ ಉದ್ದವುಳ್ಳದ್ದಾಗಿ **'ಏನಿವೃತ್ತಾಧಿಕಾರಾಸ್ತು ಮಹರ್ಲೋಕನಿವಾಸಿನಃ'**[4] ಎಂಬಂತೆ ನಿವೃತ್ತಾಧಿಕಾರರಾಗಿ ಅಧಿಕಾರಾಪೇಕ್ಷೆವುಳ್ಳ ಇಂದ್ರಾದಿಗಳು ವರ್ತಿಸುವ ಲೋಕವೇ **'ಮಹರ್ಲೋಕವು'**. ಈ ಮಹರ್ಲೋಕಕ್ಕೆ ಮೇಲೆ ಎರಡು ಕೋಟಿ ಯೋಜನ ಉದ್ದವುಳ್ಳದ್ದಾಗಿ ಬ್ರಹ್ಮಪುತ್ರರುಗಳಾದ ಸನಕಾದಿ ಪರಮಯೋಗಿಗಳು ವರ್ತಿಸುವ ದೇಶವೇ **'ಜನೋಲೋಕ'**. ಈ ಜನೋಲೋಕಕ್ಕೆ ಮೇಲೆ ಎಂಟುಕೋಟಿಯೋಜನ ಉದ್ದವುಳ್ಳದ್ದಾಗಿ ವೈರಾಜ್ಯರಾದ ಪ್ರಜಾಪತಿಗಳು ವರ್ತಿಸುವ ದೇಶವೇ **'ತಪೋಲೋಕವು'**. ಈ ತಪೋಲೋಕಕ್ಕೆ ಮೇಲೆ ನಲವತ್ತೆಂಟು ಕೋಟಿಯೋಜನ ಉದ್ದವುಳ್ಳದ್ದಾಗಿ

**ತೇಷಾ ಮೇಷಾಂ ಕೇಚನ ಬ್ರಹ್ಮ ಲೋಕಾ ರುದ್ರಸ್ಯಾನ್ಯೇ ಸಂತಿ ತತ್ಕೈವಲೋಕಾಃ।**
**ವಿಷ್ಣೋರನ್ಯೇ ಸಂತಿ ಲೋಕಾ ವಿಶಾಲಾಸ್ತಾಂಸ್ತಾನ್ ಲೋಕಾಂಸ್ತಾನುಪಾಸ್ಯವ್ರಜಂತಿ।** [5]

ಎಂಬಂತೆ ಬ್ರಹ್ಮ ವಿಷ್ಣು ಶಿವರುಗಳು, ಅವರುಗಳನ್ನು ಉಪಾಸಿಸಿ ತತ್ಪ್ರಾಪ್ತಿ ಹೊಂದಿದವರು ವರ್ತಿಸುವುದೇ **'ಸತ್ಯಲೋಕವು'**. ಆದ್ದರಿಂದ ಊರ್ಧ್ವಾಧಃ ಕಟಾಹಗಳಿಗೆ ಮಧ್ಯದಲ್ಲಿ ಅರವತ್ತು ಕೋಟಿ ಯೋಜನ ಅಂಡೋಚ್ಛ್ರಾಯವಾಗಿರುತ್ತದೆ. ಐವತ್ತು ಕೋಟಿ ಅಂಡೋಚ್ಛ್ರಾಯ ಎನ್ನುವ ಪಕ್ಷವೂ ಉಂಟು. ಅದರಲ್ಲಿ **'ಸೂರ್ಯಾಂಡ ಗೋಳ ಯೋರ್ಮಧ್ಯೇ ಕೋಟ್ಯಸ್ಸ್ಯುಃ ಪಂಚವಿಂಶತಿಃ'**[6] ಎಂಬ ಶುಕ್ರವಚನಾನುಸಾರವಾಗಿ ಸೂರ್ಯನಿಗೆ ಮೇಲೆ ಇಪ್ಪತ್ತೈದು ಕೋಟಿಯೂ, ಕೆಳಗೆ ಇಪ್ಪತ್ತೈದು ಕೋಟಿಯೂ ಇರುತ್ತದೆ.

ಈ ಕ್ರಮದಲ್ಲಿರುವ ಹದಿನಾಲ್ಕು ಲೋಕಗಳೊಡನೆ ಕೂಡಿದ ಬ್ರಹ್ಮಾಂಡವು ಹೇಳಲ್ಪಟ್ಟವು. **(ಒನ್ರು..................ಶೂಪ್ಪಟ್ಟು)** - ಈ ಹದಿನಾಲ್ಕು ಲೋಕಗಳನ್ನು

**ಏಕದಂಡ ಕಟಾಹೇನ ತಿರಶ್ಚೋರ್ಧ್ವ ಮಧಸ್ಥಥಾ।**
**ಕಪಿತ್ಥಸ್ಯಯಥಾಬೀಜಂ ಸರ್ವತೋ ವೈ ಸಮಾವೃತಮ್।**[7]

ಎಂಬಂತೆ ಬೇಲದ ತಿರುಳನ್ನು ಬೇಲದ ಹಣ್ಣಿನ ಕರಟ ಪೂರ್ಣವಾಗಿ ಆವರಿಸುವಂತೆ **'ಕೋಟಿ ಯೋಜನ ಮಾನಸ್ತು ಕಟಾಸ್ಸಂವ್ಯವಸ್ಥಿತಃ'**[8] ಎಂಬಂತೆ ಕೋಟಿಯೋಜನ ವಿಸ್ತೀರ್ಣ ಅವಕಾಶವುಳ್ಳದ್ದಾಗಿರುವಂತೆ ಅಂಡಕಟಾಹವು ಆವರಿಸಿರುತ್ತದೆ. ಅಂಡಕಟಾಹದೊಡನೆ ಕೂಡಿದ ಈ ಅಂಡವು **'ದಶೋತ್ತರೇಣ ಪಯಸಾ ಮೈತ್ರೇಯ ಅಂಡಂ ಚ ತದ್ವೃತಮ್।'**[9] ಎಂಬಂತೆ ತನಗಿಂತ ಹತ್ತು ಪಟ್ಟು ಅಧಿಕವಾಗಿ ಹರಡಿರುವ ಜಲತತ್ವದಿಂದ ಆವೃತವಾಗಿದೆ.

**ಪಂಚಾಶತ್‌ಕೋಟಿ ವಿಸ್ತಾರಾಸೇಯಮುರ್ವೀ ಮಹಾಮುನೇ॥**
**ಸಪ್ತೈವಾಂಡಕಟಾಹೇನ ಸದ್ವೀಪಾಬ್ಧಿ ಮಹೀಧರಾ॥**[10]

ಎಂದು ಅಂಡಕಟಾಹದೊಡನೆ ಕೂಡಿದ ಭೂಮಂಡಲವು ಐದುಶತಕೋಟಿ ವಿಸ್ತಾರವಾಗಿಯೂ **'ಭೂಮಂಡಲಂ ಶತಕೋಟಿ ವಿಸ್ತಾರಂ ಸಾಣ್ಡಕಟಾಹಂ'**[11] ಎಂದೂ ವಾರಾಹಪುರಾಣದಲ್ಲಿ ಹೇಳಲ್ಪಡುವುದರಿಂದಲೂ; ಹೀಗೆಯೇ ಸ್ಕಾಂದ ಪುರಾಣದ ಶಿವ ರಹಸ್ಯದಲ್ಲಿ ಹೇಳಿರುವುದರಿಂದಲೂ ಮೇರು ಪರ್ವತವನ್ನು ಸುತ್ತು ವರಿದು ಐದುಶತಕೋಟಿ ವಿಸ್ತಾರವುಳ್ಳ ಭೂಮಿಯನ್ನು ಶತಕೋಟಿ ವಿಸ್ತಾರವಾಗಿಯೂ ಹೇಳುವುದುಂಟು. ಈ ಎರಡರಲ್ಲೂ ಒಂದು ಅಳತೆಯನ್ನು ಪರಿಗಣಿಸಿ ಅದಕ್ಕೆ ಹತ್ತು ಪಟ್ಟು ಅಧಿಕ ಹರವುಳ್ಳ ಜಲತತತ್ವದಿಂದ ಇದು ಆವೃತವಾಗಿದೆ ಎಂದು ತಿಳಿಯಬೇಕು.

ಭೂಮಂಡಲವನ್ನಷ್ಟೇ ಅಲ್ಲದೆ ಇಡೀ ಅಂಡಕಟಾಹವನ್ನೇ ಅದಕ್ಕಿಂತ ಹತ್ತು ಪಟ್ಟು ಅಧಿಕವಾದ ಜಲತತ್ವ ಆವರಿಸಿದೆ ಎನ್ನುವ ಅಭಿಪ್ರಾಯವೂ ಉಂಟು. ಹೀಗೆ ದಶೋತ್ತರವಾದ ಜಲತತ್ವವನ್ನು ತೇಜಸ್ ತತ್ವವು ಆವರಿಸುತ್ತದೆ. ಅದನ್ನು ವಾಯುತತ್ವವೂ ವಾಯುವನ್ನು ಆಕಾಶತತ್ವವೂ, ಆಕಾಶವನ್ನು ಅಹಂಕಾರವನ್ನು ತತ್ವವೂ, ಅಹಂಕಾರವನ್ನು ಮಹತ್ ತತ್ವವೂ, ಮಹತ್‌ನ್ನು ಅವ್ಯಕ್ತವೂ ಆವರಿಸುತ್ತದೆ. **'ತದನಂತಮಸಂಖ್ಯಾತ ಪ್ರಮಾಣಮ್'** ಎಂಬಂತೆ ಅಪರಿಮಿತ ಪ್ರಮಾಣವಾದ ಅವ್ಯಕ್ತಕ್ಕೆ ಆವರಣಪ್ರಯುಕ್ತವಾದ ದಶೋತ್ತರತ್ವವು ಹೇಗೆ ಎಂದರೆ; 'ಸಾವಿರದಲ್ಲಿ ಹತ್ತು ಉಂಟಾಗುವಂತೆ ಅಪರಿಮಿತ ಸಂಖ್ಯೆಯಲ್ಲಿ ಅದೂ ಉಂಟಾಗುವುದರಿಂದ ಸಾಧ್ಯವಾಗುತ್ತದೆ'.

**ವಾರಿವಹ್ನ್ಯನಿಲಾಕಾಶೈಸ್ತತೋಭೂತಾದಿನಾ ಬಹಿಃ।**
**ವೃತಂ ದಶಗುಣೈರಂಡಂ ಭೂತಾದಿರ್ಮಹತಾ ತಥಾ।**
**ಅವ್ಯಕ್ತೇ ನಾವೃತೋ ಬ್ರಹ್ಮಂಸ್ತೈ ಸ್ಸರ್ವೈ ಸ್ಸಹಿತೋಮಹಾನ್।**
**ಏಭಿರಾವರಣೈರಂಡಂ ಸಪ್ತಭಿಃ ಪ್ರಾಕೃತೈರ್‌ವೃತಮ್।**[12]

ಎಂಬಂತೆ ಹೀಗೆ ದಶೋತ್ತರಗಳಾದ ಸಪ್ತಾವರಣಗಳಿಂದಲೂ ಸುತ್ತುವರಿಯಲ್ಪಟ್ಟು

**(ಈಶ್ವರನುಕ್ಕು ಕ್ರೀಡಾಸ್ಥಾನೀಯಂಗಳಾಯ್).**- ಆಟವಾಡುವುದರಲ್ಲಿ ಆಸಕ್ತನಾದ ಬಾಲಕನ ಆಟದ ವಸ್ತುಗಳಂತೆ ಕ್ರೀಡಾರಸ ಆಸಕ್ತನಾದ ಈಶ್ವರನಿಗೆ ಲೀಲೋಪಕರಣಗಳಾಗಿರುವಿಕೆ. **'ಹರೇ ವಿಹರಸಿ ಕ್ರೀಡಾಕಂದುಕೈರಿವ ಜಂತುಭಿಃ'**ಎಂದೂ **'ಮೋದತೇ ಭಗವಾನ್ ಭೂತೈರ್ ಬಾಲಃ ಕ್ರೀಡಾಕಂದುಕೈರಿವ '** ಎಂದೂ ಹೇಳಲ್ಪಡುವಂತೆ ಈಶ್ವರನಿಗೆ ವಿಭೂತಿಯಾಗಿ ಲೀಲೋಪಕರಣವಾಗಿದೆ.

**(ಜಲ.... ಸೃಷ್ಟಂಗಳಾಯಿರುಕ್ಕುಂ)** – ಈ ಅಂಡಗಳು ಈಶ್ವರನು ಸೃಷ್ಟಿಸುವಾಗ ಕ್ರಮಕ್ರಮವಾಗಿ ಒಂದೊಂದಾಗಿ ಪರಿಣಮಿಸದೆ **'ನಕ್ರಮೇಣ ವಿವೃದ್ಧಃ ತಜ್ಜಲಬುದ್ಬುದವತ್ ಸಮಂ'**[13] ಎಂಬಂತೆ ನೀರಿನ ಗುಳ್ಳೆಗಳಂತೆ ಏಕಕಾಲದಲ್ಲಿ ಉತ್ಪನ್ನವಾಗುತ್ತದೆ. **'ಏಕಕಾಲೇನ ಸೃಜ್ಯಂತೇ'**[14] ಎಂಬಂತೆ ಸಕಲ ಅಂಡಗಳೂ ಏಕಕಾಲದಲ್ಲಿ ಉತ್ಪನ್ನವಾಗಿರುತ್ತವೆ ಎಂಬುದೂ ಅವೆಲ್ಲವೂ ಒಂದರಂತೆ ಒಂದು ಇವೆ ಎಂಬುದೂ ಹೇಳಲ್ಪಟ್ಟಿತು.

## ಸೂ. 37 ಭೂತಂಗಳಿಲ್ ಆಕಾಶಂ ಅವಕಾಶಹೇತು; ವಾಯು ವಹನಾದಿ ಹೇತು; ತೇಜಸ್ ಪಚನಾದಿ ಹೇತು. ಜಲಮ್ ಸೇಚನ ಪಿಂಡೀಕರಣಾದಿ ಹೇತು; ಪೃಥಿವಿ ಧಾರಣಾದಿ ಹೇತು ಎನ್ನರ್‌ಹಳ್.

ಭೂತ ಪಂಚಕಗಳಿಗೂ ಬೇರೆ ಬೇರೆಯಾಗಿ ವಿನಿಯೋಗವನ್ನು ಇಲ್ಲಿ ಹೇಳಲಾಗಿದೆ.

**(ಭೂತಂಗಳಿಲ್ ಆಕಾಶಂ ಅವಕಾಶ ಹೇತು)** ಸಕಲ ಪದಾರ್ಥಗಳಿಗೂ ಇರಲು ಸಂಚರಿಸಲು ಸ್ಥಳ ಮಾಡಿಕೊಡುವುದೇ ಆಕಾಶದ ವಿನಿಯೋಗವಾಗಿದೆ.

**ಅಸ್ಯ ದೇಹಸ್ಯ ವಿಯತೋ ಲಾಘವಂ ಸೌಕ್ಷ್ಮಮೇವ ಚ।**
**ಶಬ್ದ ಶ್ರೋತ್ರಂ ಬಲಂ ಬ್ರಹ್ಮನ್ ಸುಷಿರತ್ವಂ ವಿವಿಕ್ತತಾ।**[1]

ಎಂದು ವಾಯುವಿಗೆ ಹಲವು ಬಗೆ ವಿನಿಯೋಗಗಳು ಹೇಳಲ್ಪಟ್ಟಿದ್ದರೂ, ಇಲ್ಲಿ ಇದರ ಪ್ರಾಧಾನ್ಯದಿಂದ ಇದೊಂದನ್ನೇ ಹೇಳಲಾಗಿದೆ.

**(ವಾಯು......ಹೇತು)**- ವಾಯುವು ವಹನ ಕಾರ್ಯಮಾಡುತ್ತದೆ. ವಹನ-ಹೊರುವುದು. ಆದಿ ಶಬ್ದದಿಂದ ವ್ಯೂಹನ ಚೇಷ್ಟಾದಿಗಳು ಹೇಳಲ್ಪಡುತ್ತವೆ. ಇದು - **'ವಾಯೋಃ ಸ್ಪರ್ಶೇಂದ್ರಿಯಂ ಚೇಷ್ಟಾಂ ಕಾರ್ಕಶ್ಯಂ ಸ್ಪರ್ಶಮೇವಚ। ವ್ಯೂಹನಂ ವಹನಂ ದೇಹಸ್ಸ್ವೀಕರೋತಿ ಸದುತ್ತಮ'** [2] ಎನ್ನಲಾಗಿದೆ.

**(ತೇಜಸ್ಸು........ ಹೇತು)** ಅಗ್ನಿಯು ಪಚನ ಕಾರ್ಯ ಮಾಡುತ್ತದೆ. ಪಚನವೆಂದರೆ ಪಾಕ ಮಾಡುವುದು. ಆದಿ ಶಬ್ದದಿಂದ ಪ್ರಕಾಶಾದಿಗಳು ಹೇಳಲ್ಪಡುತ್ತವೆ. ಇದೂ

**ಅಗ್ನೇರೌಷ್ಣ್ಯಂ ಪ್ರಕಾಶತ್ವಯಾವೇನ್ದ್ರಿಯ ಮಮರ್ಷಣಂ।**
**ಸಂತಾಪ ಶೌರ್ಯತೈಕ್ಷ್ಣ್ಯಾನಿ ವರ್ಣಂ ಪಚನಶಕ್ತಿತಾಮ್।**
**ಆಧತ್ತೇ ಸಹಸಾ ದೇಹಸ್ಸಾಹಸಂ ಚ ದ್ವಿಜರ್ಷಭ।।**[3] ಎಂದು ಹೇಳಲ್ಪಟ್ಟಿದೆ.

**(ಜಲಂ......ಹೇತು)** ಜಲವು ನೆನೆಸುವ ಕಾರ್ಯ ಮಾಜುತ್ತದೆ. 'ಸೇಚನ' ವೆಂದರೆ - ನೆನೆಸುವುದು. ಪಿಂಡೀಕರಣವೆಂದರೆ - ಒಟ್ಟು ಮಾಡುವಿಕೆ. ಆದಿ ಶಬ್ದದಿಂದ ಶೈತ್ಯ, ಆರ್ದ್ರತೆ ಮುಂತಾದವುಗಳನ್ನು

ಹೇಳಲಾಗಿದೆ. ಇದನ್ನು

**ಶೈತ್ಯ ಸಮಾಧತ್ತೇ ಸ್ನಿಗ್ಧತ್ವಂ ರಸನೇಂದ್ರಿಯಂ।**
**ಪ್ರಸಾದಂ ಮಾರ್ದವಂ ಪಿಂಡೀಕರಣಂ ಕ್ಲೇದನಂ ಚ ವೈ॥** [4] ಎಂದು ತಿಳಿಸಲಾಗಿದೆ.

**(ಪೃಥವಿ.......ಹೇತು)**- ಭೂಮಿಯು ಧರಿಸುವ ಕಾರ್ಯ ಮಾಡುತ್ತದೆ. ಧಾರಣವೆಂದರೆ- ಧರಿಸುವುದು. ಆದಿ ಶಬ್ದದಿಂದ ಮೂರ್ತಿಮತ್ತ್ವ, ಗುರುತ್ವಾದಿಗಳು ಹೇಳಲ್ಪಡುತ್ತವೆ.

**ಭೂಮೇರ್ ಗಂಧಗುಣಂ ಘ್ರಾಣಂ ಗರಿಮಾಣಂ ಚ ಧಾರಣಂ।**

**ಮೂರ್ತಿಮತ್ತ್ವಂ ಸಹಿಷ್ಣುತ್ವಂ ಸ್ವೀಕರೋತಿ ಯಥಾತಥಮ್।** [5] ಎಂದು ಇದು ವ್ಯಾಖ್ಯಾನಿಸಲ್ಪಟ್ಟಿದೆ.

'ಎನ್ಬರ್‌ಕಳ್' -'ಎನ್ನುತ್ತಾರೆ'- ಎಂಬುದು ತತ್ವ ವಿತ್ತುಗಳು ಹೇಳುತ್ತಾರೆ ಎಂಬರ್ಥದಲ್ಲಿ.

## ಸೂ. 38. ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈನ್ದುಕ್ಕುಂ ಅಡೈವೇ ಶಬ್ದಾದಿಗಳೈನ್ದೈಯುಂ ಗ್ರಹಿಕ್ಕೈ ತೊಳಿಲ್। ವಾಗಾದಿ ಕರ್ಮೇಂದ್ರಿಯಂಗಳೈನ್ದುಕ್ಕುಂ ವಿಸರ್ಗಶಿಲ್ಪಗತ್ಯುಕ್ತಿಕಳ್ ತೊಳಿಲ್, ಮನಸ್ಸು ಇವೈಯಿತ್ತನೈಕ್ಕುಂ ಪೊದು।

ಏಕಾದಶ ಇಂದ್ರಿಯಗಳ ವೃತ್ತಿಭೇಧಗಳನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ. ಶ್ರೋತ್ರಕ್ಕೆ ಶಬ್ದ ಗ್ರಹಣವೂ, 'ತ್ವಕ್'- ಚರ್ಮೇಂದ್ರಿಯಕ್ಕೆ ಸ್ಪರ್ಶಗ್ರಹಣವೂ; ಕಣ್ಣುಗಳಿಗೆ ರೂಪಗ್ರಹಣವೂ; ನಾಲಿಗೆಗೆ ರಸಗ್ರಹಣವೂ; ಮೂಗಿಗೆ ಗಂಧಗ್ರಹಣವೂ ಕೆಲಸವಾಗಿದೆ.

**ತ್ವಕ್ ಚಕ್ಷುಃ ನಾಸಿಕಾ ಜಿಹ್ವಾಶ್ರೋತ್ರಮತ್ರತು ಪಂಚಮಮ್।**
**ಶಬ್ದಾದೀನಾಮವಾಪ್ತ್ಯರ್ಥಂ ಯುಕ್ತಾನಿ ವೈದ್ವಿಜ।** [1]

ಎನ್ನಲಾಗಿದೆ. ಈ ಶ್ಲೋಕದಲ್ಲಿ ಇಂದ್ರಿಯಗಳನ್ನು ವ್ಯುತ್ಕ್ರಮವಾಗಿ (ಕ್ರಮವನ್ನು ತಲೆಕೆಳಗಾಗಿ) ಹೇಳಿರುವುದರಿಂದ ಇದಕ್ಕೆ ಇದು ವಿಷಯವೆಂಬುದನ್ನು ನ್ಯಾಯ (ತರ್ಕ) ದಿಂದ ನಿಷ್ಕರ್ಷಿಸಬೇಕು. ಜ್ಞಾನೇಂದ್ರಿಯಗಳಿಗೆ ಶಬ್ದಾದಿಗಳನ್ನು ಗ್ರಹಿಸುವುದೇ ಕೆಲಸವೆಂಬುದಷ್ಟೇ ಇಲ್ಲಿ ಹೇಳಲಾಗಿದೆ.

**(ವಾಗಾದಿ..........ತೊಳಿಲ್)**- ಈ ರೀತಿ ವ್ಯುತ್ಕ್ರಮವಾಗಿ ಹೇಳಿರುವುದು ವಾಕ್ಯಸ್ವಾರಸ್ಯಕ್ಕಾಗಿ, ವಾಕ್ಕಿಗೆ ಉಕ್ತಿಯೂ, ಕೈಗಳಿಗೆ ಶಿಲ್ಪವೂ, ಪಾದಗಳಿಗೆ ಗಮನವೂ; ಉಪಸ್ಥ, ಪಾಯುಗಳಿಗೆ ಜಲ ಮಲ ವಿಸರ್ಜನವೂ ಕೆಲಸವಾಗಿದೆ. ಇದನ್ನೇ

**ಪಾಯೂಪಸ್ಥಕೌಪಾದೌ ವಾಕ್ಚ ಮೈತ್ರೇಯ ಪಂಚಮಿ।**
**ವಿಸರ್ಗ ಶಿಲ್ಪಗತ್ಯುಕ್ತಿಕರ್ಮ ತೇಷಾಂ ಚ ಕಥ್ಯತೇ।** [2] ಎನ್ನಲಾಗಿದೆ.

**(ಮನಸ್ಸು...........ಪೊತು)**-ಜ್ಞಾನೇಂದ್ರಿಯಗಳು ಸ್ವಸ್ವ ವಿಷಯಗಳನ್ನು ಗ್ರಹಿಸುವಾಗ , ಕರ್ಮೇಂದ್ರಿಯಗಳು ಸ್ವಸ್ವಕರ್ಮಗಳನ್ನುಮಾಡುವಾಗ, ಮನಸ್ಸಹಕಾರ ಅವಶ್ಯಕವಾದ್ದರಿಂದ ಉಭಯಾತ್ಮಕವಾದ ಮನಸ್ಸು ಇವೆರಡಕ್ಕೂ ಸಾಮಾನ್ಯವಾಗಿರುತ್ತದೆ.

## ಸೂ. 39. ಆಕಾಶಾದಿ ಭೂತಂಗಳುಕ್ಕು ಅಡ್ವೈವೇ ಶಬ್ದಾದಿಗಳ್ ಗುಣಮಾಯಿರುಕ್ಕುಂ.

ಜ್ಞಾನೇಂದ್ರಿಯಗಳಿಗೆ ವಿಷಯಗಳಾಗಿ ಹೇಳಲ್ಪಟ್ಟ ಶಬ್ದಾದಿಗಳು ಐದೂ, ಆಕಾಶಾದಿಗಳಿಗೆ ಪ್ರತಿನಿಯತ ಗುಣಗಳಾಗಿರುತ್ತವೆ. ಎಂದರೆ ಆಕಾಶಗುಣ- ಶಬ್ದ; ವಾಯುಗುಣ-ಸ್ಪರ್ಶ; ಅಗ್ನಿಗುಣ-ರೂಪ; ಜಲಗುಣ-ರಸ; ಭೂಮಿಯಗುಣ-ಗಂಧ; ಎಂದು ಆಯಾಯಾಗುಣಗಳು ಅವುಗಳಿಗೇ ಮೀಸಲಾಗಿರುವಿಕೆ.

## ಸೂ.40. ಗುಣವಿನಿಯಮ್ ಪಂಚೀಕರಣತ್ತಾಲೇ.

ಹೀಗೆ ಪ್ರತಿನಿಯತ ಗುಣಗಳಾದ ಪಂಚಭೂತಗಳಿಗೆ ಆ ಗುಣವಿನಿಮಯವೇರ್ಪಡಲು ಕಾರಣವನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ.

ಗುಣವಿನಿಮಯವೆಂದರೆ- ಒಂದು ಭೂತದಲ್ಲಿ ಮತ್ತೊಂದು ಭೂತದ ಗುಣಗಳೂ ತೋರುವಂತೆ ಭೂತಗಳಲ್ಲಿ ಏರ್ಪಟ್ಟ ಗುಣಬೆರಕೆಯಾಗಿದೆ. ಶ್ರುತಪ್ರಕಾಶಿಕಾಚಾರ್ಯರು **ಶುಕಪಕ್ಷೀಯ**'ದಲ್ಲಿ '**ತೇಜೋವಾರಿಮೃದಾಂ ಯಥಾವಿನಿಮಯಃ**'[1] ಎಂಬುದಕ್ಕೆ (ಶ್ರೀ ಭಾಗವತ ಮಂಗಳ ಶ್ಲೋಕದ ಒಂದು ಪಾದಕ್ಕೆ) **ವಿನಿಮಯಃ-ಪರಸ್ಪರ ಸಂಮಿಶ್ರೀಕರಣಮ್**' ಎಂದು ಅರ್ಥೈಸಿದ್ದಾರೆ. ಇಲ್ಲಿಯೂ ವಿನಿಮಯವೆಂದರೆ ಪರಸ್ಪರ ಸಂಮಿಶ್ರೀಕರಣವೆಂದೇ ಅರ್ಥ. ಅಲ್ಲಿ ಭೂತಗಳ ಅನೋನ್ಯಮಿಶ್ರಣವು ಹೇಳಲ್ಪಟ್ಟಿದೆ. ಗುಣಗಳ ಅನ್ಯೋನ್ಯಮಿಶ್ರಣವೆಂದರೆ- ಒಂದು ಭೂತವೂ ಮತ್ತೊಂದು ಗುಣವೂ ಮಿಶ್ರವಾಗುವುದಲ್ಲ. ಆದರೆ ಒಂದರ ಗುಣ ಮತ್ತೊಂದರಲ್ಲಿ ಹೊಕ್ಕು ಎಲ್ಲದರಲ್ಲೂ ಎಲ್ಲವೂ ಉಂಟಾಗುವಂತೆ ಇರುವಿಕೆ. ಅಥವಾ

'ವಿನಿಮಯ' ವೆಂದರೆ- ಒಂದನ್ನು ಕೊಟ್ಟು ಒಂದನ್ನು ಪಡೆಯುವಿಕೆ ಎಂದೂ ಆಗುತ್ತದೆ. ಒಂದು ಭೂತ ತನ್ನ ಗುಣವನ್ನು ಮತ್ತೊಂದಕ್ಕೆ ನೀಡಿ ಅದರದನ್ನು ತಾನು ಪಡೆದುಕೊಳ್ಳುವುದು ಎಂದೂ ಹೇಳಬಹುದು. ಇದರಿಂದ ತನ್ನ ಗುಣವೂ ಮತ್ತೊಂದರಲ್ಲಿ ಉಂಟಾಗಿ ಮತ್ತೊಂದರ ಗುಣವು ತನ್ನಲ್ಲಿ ಉಂಟಾಗುವಿಕೆಯು ಹೇಳಲ್ಪಟ್ಟಿತು. '**ಗುಣ ವಿನಿಮಯಂ ಪಂಚೀಕರಣತ್ತಾಲೇ**' ಎಂಬುದರ ಅಭಿಪ್ರಾಯವೇನೆಂದರೆ- ಗುಣಗಳಾದ್ದರಿಂದ ಒಂದನ್ನು ಆಶ್ರಯಿಸದೇ ಇರುವಂತಿಲ್ಲ. (ದ್ರವ್ಯವನ್ನು ಆಶ್ರಯಿಸಿಯೇ ಇರುವಂತಹುದು ಗುಣಗಳು ) ಆದ್ದರಿಂದ ದ್ರವ್ಯಗಳ ಮಿಶ್ರಣವೇ ಗುಣಗಳ ಮಿಶ್ರಣಕ್ಕೆ ಕಾರಣವಾಗಿದೆ ಎಂದರ್ಥ.

ಪಂಚೀಕರಣವೆಂದರೆ-

**ಏವಂ ಜಾತೇಷು ಭೂತಾನಿ ಪ್ರತ್ಯೇಕಂ ಸ್ಯುರ್ದ್ವಿಧಾತತಃ।**
**ಚತುರ್ಧಾಭಿನ್ನಮೇಕೈಕಂ ಅರ್ಧಮರ್ಧಂ ತಥಾಸ್ಥಿತಮ್।**
**ವ್ಯೋ ಮ್ನೋರ್ಧಭಾಗಶ್ಚತ್ವಾರೋ ವಾಯುಃತೇಜಪಯೋಭುವಾಮ್।**
**ಅರ್ಧಾನಿಯಾನಿವಾಯೋಸ್ತು ವ್ಯೋಮ ತೇಜಃ ಪಯೋಭುವಾಮ್।** [2]

ಇತ್ಯಾದಿಯಾಗಿ ಪುರಾಣಗಳಲ್ಲಿ ಹೇಳಲ್ಪಡುವಂತೆ. ಆಕಾಶಾದಿಭೂತಗಳೈದನ್ನೂ ಬಿಡಿಬಿಡಿಯಾಗಿ ಎರಡು ಭಾಗಮಾಡಿ, ಅದರಲ್ಲಿ ಒಂದು ಭಾಗವನ್ನು ನಾಲ್ಕು ಭಾಗವಾಗಿಸಿ, ಆ ಭಾಗಗಳನ್ನು ಬೇರೆ ಭೂತಗಳಲ್ಲಿ ಕೂಡಿಸಿ ಸರ್ವಭೂತಗಳಲ್ಲೂ ಸರ್ವವೂ ಉಂಟಾಗುವಂತೆ ಮಾಡುವುದು. ಹೀಗೆ ಪಂಚೀಕರಣವಾದರೂ ಅವಿಭಕ್ತವಾದ ಅರ್ಧಗಳು ಪ್ರಧಾನವಾಗಿರುವುದರಿಂದ ಆಕಾಶಾದಿ ಭೂತಗಳೆಂದು ಬೇರೆ ಬೇರೆಯಾಗಿ ವ್ಯವಹರಿಸಲು ಯಾವ ತಡೆಯೂ ಇಲ್ಲ.

## ಸೂ. 41 ಆಕಾಶಮ್ ಕರುತ್ತು ತೋತ್ತುಗಿರದುಂ ಅತ್ತಾಲೇ.

ಅತಿ ಸೂಕ್ಷ್ಮತೆಯಿಂದ ಕಣ್ಣಿಗೆ ಕಾಣದಂತಿರುವ ಆಕಾಶಕ್ಕೆ ಚಕ್ಷುರ್ವಿಷಯತ್ವವೂ; (ಕಣ್ಣಿಗೆ ವಿಷಯವಾಗುವಿಕೆ) **'ಯತ್ಕೃಷ್ಣಂ ತತ್ಪೃಥಿವೀ'** ಎಂದು ಪೃಥ್ವಿಗುಳ್ಳದ್ದಾಗಿ ಹೇಳಲ್ಪಡುವ ಕೃಷ್ಣತ್ವವು (ಕಪ್ಪು ಬಣ್ಣ) ಆಕಾಶಕ್ಕೆ ಏರ್ಪಟ್ಟಿರುವುದೂ ಈ ಪಂಚೀಕರಣದಿಂದಲೇ. ಎಂದರೆ ಭೂಮಿಯಗುಣ ಆಕಾಶದಲ್ಲಿ ಬೆರೆತಿರುವುದರಿಂದ.

ಇದರಿಂದ ತ್ರಿವೃತ್ಕರಣವನ್ನು ಹೇಳಿದ ನಂತರ ಶ್ರುತಿ ತಾನೇ **'ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂಯತ್ಕೃಷ್ಣಂತದನ್ನಸ್ಯ'**[1] ಎಂದು ಅಗ್ನಿಯಲ್ಲಿ ತ್ರಿರೂಪವನ್ನು ತೋರಿಸಿದಂತೆ ಈ ಸೂತ್ರಕಾರರೂ ಪಂಚೀಕರಣನ್ನು ತಿಳಿಸಿದನಂತರ. ಸರ್ವವನ್ನೂ ಸೂಕ್ಷ್ಮವಾಗಿರುವ ಒಂದು ಭೂತದಲ್ಲಿ (ಆಕಾಶದಲ್ಲಿ) ತೋರಿಸಿದರು. ಹೀಗೇ ಶ್ರೀ ಭಾಷ್ಯದಲ್ಲಿ

**ಯದಗ್ನೇ ಲೋಹಿತಂ ರೂಪಂ ತೇಜಸ್ತದ ಹಾಮಪಿ।**
**ಶುಕ್ಲಂ ಕೃಷ್ಣಂ ಪೃಥಿವ್ಯಾಶ್ಚೇತ್ಯಗ್ನಾ ದೇವ ಪ್ರತಿರೂಪತಾ।**
**ಶ್ರುತ್ಯೈವದರ್ಶಿತಾ ತಸ್ಮಾತ್ಸರ್ವೇಽಸರ್ವತ್ರ ಸಂಗತಾಃ**[2]

ಎಂದು ಶ್ರೀ ಭಾಷ್ಯಕಾರರಾದ ಶ್ರೀ ರಾಮಾನುಜಾಚಾರ್ಯರೂ ಅನುಗ್ರಹಿಸಿದ್ದಾರೆ. ಛಾಂದೋಗ್ಯದಲ್ಲಿ ಪಂಚೀಕರಣವನ್ನು ಹೇಳದೆ ತ್ರಿವೃತ್ಕರಣವನ್ನು ಹೇಳಲು ಕಾರಣವೇನೆಂದರೆ ಅಲ್ಲಿ ತೇಜೋಽ ಬನ್ನಗಳು (ಪೃಥಿವೀ, ಅಪ್, ತೇಜಸ್)ಮೂರರ ಉತ್ಪತ್ತಿಮಾತ್ರ ಹೇಳಲಾಗಿದೆ. ಬೇರೇ ಶ್ರುತಿಗಳಲ್ಲಿ ಹೇಳಲ್ಪಡುವ ಆಕಾಶಾವಾಯುಗಳ, ಅವ್ಯಕ್ತ, ಮಹದಹಂಕಾರಾದಿಗಳ ಉತ್ಪತ್ತಿಗಳೂ ಅಲ್ಲಿ ಹೇಳಲ್ಪಟ್ಟಿಲ್ಲ. ಆದ್ದರಿಂದ ತೇಜೋಽ ಬನ್ನ ಮಾತ್ರಗಳ ಹೇಳುವಿಕೆಯು ಇತರ ತತ್ವಗಳಿಗೆ ಉಪಲಕ್ಷಣವಾದಂತೆ, ತ್ರಿವೃತ್ಕರಣದ ಹೇಳುವಿಕೆಯು ಪಂಚೀಕರಣಕ್ಕೆ ಉಪಲಕ್ಷಣವಾಗಿದೆ. ಹೀಗೆ ಪಂಚೀಕರಣದಿಂದ' ಸಕಲ ಭೂತಗಳೂ ಪರಸ್ಪರ ಮಿಶ್ರಗಳಾಗಿ ಶಬ್ದಾದಿಗುಣ ಪಂಚಕವು ಸರ್ವಭೂತಗಳಲ್ಲೂ ಉಂಟಾಗಿರುವುದೆಂದು ಗುಣವಿನಿಮಯ ಹೇತುವು ಹೇಳಲ್ಪಟ್ಟಿತು.

## ಸೂ. 42 ಮುನ್ನುಬ್ತೈ ತನ್ಮಾತ್ರೆಗಳೋಡೇ ಕೂಡಿಕ್ಕೊಣ್ಡು ಉತ್ತರೋತ್ತರ ತನ್ಮಾತ್ರೈಗಳ್ ಸ್ವವಿಶೇಷಂಗಳೈ ಪಿರಪ್ಪಿಕ್ಕೈಯಾಲೇ, ಗುಣಾಧಿಕ್ಯಮುಣ್ಡಾಯಿತ್ತೆನ್ನುಮ್ ಶೊಲ್ಲುವರ್‌ಹಳ್.

ಆಕಾಶಾದಿಗಳಲ್ಲಿ ಹಿಂದು ಹಿಂದಿನದಕ್ಕಿಂತ, ಮುಂದು ಮುಂದಿನವುಗಳಿಗೆ ಗುಣಾಧಿಕ್ಯ ಏರ್ಪಡಲು ಕಾರಣವನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ.

(ಮುನ್ನುಬತ್ತತನ್ಮಾತ್ರೈಗಳ್) - ಶಬ್ದ ತನ್ಮಾತ್ರೆಯಿಂದ ಆವೃತವಾಗಿ ಸ್ಪರ್ಶ ತನ್ಮಾತ್ರೆಯು ಸ್ವವಿಶೇಷವಾದ ವಾಯುವನ್ನು ಉಂಟುಮಾಡುವುದರಿಂದ ವಾಯುವಿಗೆ ಸ್ಪರ್ಶ, ಶಬ್ದ ಗುಣಗಳೆರಡೂ ಗುಣವಾಗುತ್ತದೆ. ಹೀಗೆ ಶಬ್ದ ತನ್ಮಾತ್ರೆಯಿಂದ ಆವೃತವಾದ ಸ್ಪರ್ಶತನ್ಮಾತ್ರೆಯಿಂದ ಆವೃತವಾಗಿ ಅವೆರಡೂ ಕೂಡಿ ರೂಪ ತನ್ಮಾತ್ರೆ, ಸ್ವವಿಷಯವಾದ ತೇಜಸ್ಸನ್ನು ಉಂಟುಮಾಡುವುದರಿಂದ ತೇಜಸ್‌ತತ್ವಕ್ಕೆ ಶಬ್ದಸ್ಪರ್ಶರೂಪ ವೆಂಬ ಮೂರು ಗುಣಗಳಾಗುತ್ತವೆ. ಹೀಗೆ ಹಿಂದಿನ ಎರಡು ತನ್ಮಾತ್ರೆಯಿಂದ ಕೂಡಿದ ರಸತನ್ಮಾತ್ರೆಯು ಸ್ವವಿಶೇಷವಾದ ಜಲತತ್ವವನ್ನು ಉಂಟುಮಾಡುವುದರಿಂದ ಜಲತತ್ವಕ್ಕೆ ಶಬ್ದ, ಸ್ಪರ್ಶ, ರೂಪ , ರಸಗಳೆಂಬ ನಾಲ್ಕು ಗುಣಗಳಾಗುತ್ತವೆ. ಹೀಗೆ ಹಿಂದಿನ ಮೂರರೊಡನೆ ಕೂಡಿದ ರಸ ತನ್ಮಾತ್ರೆಯಿಂದ ಆವೃತವಾಗಿ ಗಂಧತನ್ಮಾತ್ರೆಯು ಸ್ವವಿಶೇಷವಾದ

ಪೃಥಿವಿಯನ್ನು ಉಂಟುಮಾಡುವುದರಿಂದ ಪೃಥಿವಿತತ್ವಕ್ಕೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಗುಣಗಳಾಗುತ್ತವೆ. 'ಹೀಗೆ ಏಕೈಕ ಗುಣಾಶ್ರಯವಾದ ಅಕಾಶಾದಿ ಭೂತಗಳಿಗೆ ಗುಣ ವಿನಿಮಯವು ಪಂಚೀಕರಣ ಪ್ರಯುಕ್ತವಾದಂತೆ, ಮುಂದುಮುಂದಿನ ಭೂತಗಳಲ್ಲಿಗುಣಾಧಿಕ್ಯವು ತಮ್ಮತಮ್ಮತನ್ಮಾತ್ರೆಗಳಿಂದುಂಟಾದ ಆವರಣ ಪ್ರಯುಕ್ತವಾದದ್ದು ಎಂದೂ ಹೇಳುತ್ತಾರೆ' ಎಂದು ಹಿಂದೆ ತಿಳಿಸಿದ್ದ ರೊಡನೆ ಇದನ್ನೂ ಸೇರಿಸಿ ಸೂತ್ರಕಾರರು ನಿರೂಪಿಸುತ್ತಾರೆ.- 'ಹೀಗೆ ತತ್ವವಿತ್ತುಗಳು ಹೇಳುತ್ತಾರೆ' ಎಂದು ಅಭಿಪ್ರಾಯ.

**ಆಕಾಶಂ ತಬ್ದ ಮಾತ್ರಂತು ಸ್ಪರ್ಶಮಾತ್ರಂ ಸಮಾವಿಶತ್।**
**ರೂಪಂ ತಥೈವಾವಿಶತಶ್ಶಬ್ದ ಸ್ಪರ್ಶ ಗುಣಾವುಭೌ।**
**ಶಬ್ದ ಸ್ಪರ್ಶಶ್ಚ ರೂಪಂಚ ರಸಮಾತ್ರಂ ಸಮಾವಿಶತ್।**
**ತಸ್ಮಾಚ್ಚತುರ್ಗುಣಾ ಹ್ಯಾತೋವಿಶೇಷಾಶ್ಚೇಂದ್ರಿಯಗ್ರಹಃ॥** [1] ಎನ್ನಲಾಗಿದೆ.

## ಸೂ. 43 ಸತ್ವಶೂನ್ಯಮಾವತು ಕಾಲಮ್.

ಸತ್ವಾದಿ ತ್ರಿಗುಣ ಶೂನ್ಯವಾದದ್ದು ಕಾಲ. ತಾವು ಉದ್ದೇಶಿಸಿದ ಕ್ರಮದಲ್ಲಿ ಶುದ್ಧಸತ್ವ, ಮಿಶ್ರಸತ್ವಗಳ ಸ್ವರೂಪಾದಿಗಳನ್ನು ಹಿಂದಿನ ಸೂತ್ರಗಳಲ್ಲಿ ನಿರೂಪಿಸಿದರು.'ಸತ್ವಶೂನ್ಯಮಾವದು ಕಾಲಂ' ಎಂದು ಸತ್ವಗುಣವು ರಜಸ್‌ತಮಸ್ಸುಗಳಿಗೆ ಉಪಲಕ್ಷಣವಾದ್ದರಿಂದ; ಸತ್ವಶೂನ್ಯವೆಂದರೆ - ಸತ್ವ, ರಜಸ್ಸು, ತಮಸ್ಸು ಮೂರೂ ಶೂನ್ಯ ಎಂದು ಏರ್ಪಡುತ್ತದೆ. ಕೇವಲ ಸತ್ವವಾಗಿಯೂ,(ಶುದ್ಧ ಸತ್ವ) ಗುಣತ್ರಯಾಶ್ರಯವಾಗಿಯೂ (ಮಿಶ್ರ ಸತ್ವ) ಇರುವ ಅಚಿದ್ವಯಕ್ಕಿಂತ ಈ ಕಾಲವು ಬೇರೆಯಾದದ್ದು ಎಂದು ತೋರಿಸುತ್ತಾರೆ.

## ಸೂ. 44 ಇದು ಪ್ರಕೃತಿ ಪ್ರಾಕೃತಂಗಳಿನುಡೈಯ ಪರಿಣಾಮಂಗಳುಕ್ಕು ಹೇತುವಾಯ್ ಕಲಾಕಾಷ್ಠಾದಿರೂಪೇಣ ಪರಿಣಮಿಕ್ಕಕ್ಕಡವತಾಯ್ ನಿತ್ಯಮಾಯ್, ಈಶ್ವರನುಕ್ಕು ಕ್ರೀಡಾಪರಿಕರಮಾಯ್ ಶರೀರ ಭೂತಮಾಯಿರುಕ್ಕುಮ್

ಈ ಕಾಲತತ್ವದ ಪ್ರಕಾರವೇನೆಂಬುದನ್ನು ಇಲ್ಲಿ ಹೇಳಲಾಗಿದೆ.

**(ಪ್ರಕೃತಿ......... ಹೇತುವಾಯ್)** - 'ಪ್ರಕೃತಿ' ಎಂದರೆ- ಅವ್ಯಕ್ತ. 'ಪ್ರಾಕೃತ' ಎಂದರೆ- ವ್ಯಕ್ತ. ಪ್ರಕೃತಿ ಪ್ರಾಕೃತ ಪರಿಣಾಮಗಳಿಗೆ ಕಾಲತತ್ವವು ಹೇತುವಾಗಿದೆ ಎಂದರೆ- ಇವುಗಳನ್ನು ಸ್ವಸಂಕಲ್ಪದಿಂದ ಪರಿಣಮಿಸುವ ಸರ್ವೇಶ್ವರನು. ಕಾಲದ ಅವಸ್ಥಾವಿಶೇಶಗಳನ್ನು ಗಮನಿಸಿಕೊಂಡಿದ್ದು, ಆಯಾ ಕಾಲವು ಬಂದಾಗ ಇವುಗಳನ್ನು ನಿರ್ವಹಿಸುವುದರಿಂದ ಪ್ರಕೃತಿ ಪ್ರಾಕೃತಗಳ ಪರಿಣಾಮಗಳಿಗೆ ಈ ಕಾಲವು ಅವಶ್ಯಾಪೇಕ್ಷಿತವಾಗಿರುವುದು.

**ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯಾತ್ಮೇಚ್ಛಯಾ ಹರಿಃ।**
**ಕ್ಷೋಭಯಾಮಾಸ ಸಂಪ್ರಾಪ್ತೇ ಸರ್ಗಕಾಲೇವ್ಯಯಾವ್ಯಯೌ;** [1] ಎಂದೂ
**ಕಾಲೇಶಂಸತಿ ಯೋಗ್ಯತಾಂ ಚಿದಚಿತೋರನ್ಯೋನ್ಯ ಮಾಲಿಂಗತೋಃ।**
**ಭೂತಾಹಂಕೃತಿ ಬುದ್ಧಿ ಪಂಚಕರಣೀ ಸ್ವಾನ್ತಪ್ರವೃತ್ತೀಂದ್ರಿಯೈಃ।**
**ಅಂಡಾನಾವರಣೈ ಸ್ಸಹಸ್ರಮಕರೋತ್॥** [2]

ಎಂಬಂತೆಯೂ ಜಗತ್‌ಸೃಷ್ಟಿ ಮಾಡುವಾಗ ಆ ಕಾಲವು ಬರುವವರೆಗೂ ನಿರೀಕ್ಷಿಸಿ ಸೃಷ್ಟಿಮಾಡುವುದು;

ಇದು ಸ್ಥಿತಿ, ಲಯಗಳಿಗೂ ಅನ್ವಯವಾಗುತ್ತದೆ. ಹೀಗೆ ಕಾಲಪ್ರಧಾನವಾಗಿ ಸರ್ವೇಶ್ವರನು ಜಗತ್ ಸೃಷ್ಟ್ಯಾದಿಗಳನ್ನು ನಿರ್ವಹಿಸುವುದರಿಂದ ಈ ವಿಭೂತಿಯಲ್ಲಿ ಸಕಲ ಪದಾರ್ಥಗಳೂ ಕಾಲಕೃತ ಪರಿಣಾಮವಾಗಿರುತ್ತದೆ. ಇವುಗಳ ಪರಿಣಾಮಕ್ಕೆ ಕಾಲವು ಹೇತುವೆಂಬುದನ್ನು ಇದರ ಅನ್ವಯವ್ಯತಿರೇಕಗಳಿಂದ ಲೌಕಿಕ ಪದಾರ್ಥಗಳಲ್ಲಿ ಕಾಣಬಹುದಾಗಿದೆ. ಆದ್ದರಿಂದ ಕಾಲದ ಪ್ರಕೃತಿ ಪ್ರಾಕೃತ ಪರಿಣಾಮ ಹೇತುತ್ವವು (ಕಾರಣವೂ) ಶಾಸ್ತ್ರಗಳಿಂದಲೂ, ಪ್ರತ್ಯಕ್ಷದಿಂದಲೂ ಸಿದ್ಧವಾಗಿದೆ.

ಅನಂತರ ಹಿಂದೆ ಹೇಳಿದ್ದಕ್ಕೆ ಉಪಯೋಗಿಯಾದ ಇದರ ಪರಿಣಾಮವಿಶೇಷವನ್ನು ತಿಳಿಸಲಾಗುತ್ತದೆ.

**(ಕಲಾ.............ಕ್ಕಡವತಾಯ್) - ಕಾಷ್ಠಾಪಂಚದಶಖ್ಯಾತಾನಿ ನಿಮೇಷಾ ಮುನಿಸತ್ತಮ। ಕಾಷ್ಠಾತ್ರಿಂಶತ್ಕಲಾತ್ರಿಂಶತ್ಕಲಾ ಮುಹೂರ್ತೋವಿಧಿಃ। ತಾವತ್ ಸಂಖ್ಯೈರಹೋರಾತ್ರಂ ಮುಹೂರ್ತೈರ್ಮಾನುಷಂ ಸ್ಮೃತಂ। ಅಹೋರಾತ್ರಾಣಿ ತಾವಂತಿಮಾಸಃ ಪಕ್ಷದ್ವಯಾತ್ಮಕಃ। ತೈಷ್ಷಡ್ಭಿರಯನಸಂವರ್ಷಂ ದ್ವೇಯನೇ ದಕ್ಷಿಣೋತ್ತರೇ। ಅಯನಂ ದಕ್ಷಿಣಂ ರಾತ್ರಿಃ ದೇವಾನಂ ಉತ್ತರಂ ದಿನಂ। ದಿವ್ಯೈರ್ವರ್ಷಸಹಸ್ರೈಸ್ತು ಕೃತತ್ರೇತಾದಿ ಸಂಜ್ಞಿತಂ। ಚತುರ್ಯುಗ ದ್ವಾದಶಭಿಸ್ತದ್ವಿಭಾಗಂ ನಿಬೋಧಮೇ। ಚತ್ವಾರಿ ತ್ರೀಣಿದ್ವೇಚೈಕಂ ಕೃತಾದಿಷು ಯಥಾಕ್ರಮಮ್। ದಿವ್ಯಾಬ್ದಾನಾಂ ಸಹಸ್ರಾಣಿ ಯುಗೇಷ್ವಾಹುಃ ಪುರಾವಿದಃ। ತತ್ಪ್ರಮಾಣೈಶ್ಶತೈಸ್ಸನ್ಧ್ಯಾ ಪೂರ್ವಾತತ್ರಾಭಿಧೀಯತೇ। ಸನ್ಧ್ಯಾಂಶಕಶ್ಚ ತತ್ತುಲ್ಯೋಯುಗಸ್ಯಾನನ್ತರೋಹಿ ಸಃ। ಸಂಧ್ಯಾ ಸಂಧ್ಯಾಂಶಯೋರ್ನ್ತರ್ಯಃ ಕಾಲೋಮುನಿಸತ್ತಮ। ಯುಗಾಖ್ಯಸ್ಸತು ವಿಜ್ಞೇಯಃ ಕೃತ ತ್ರೇತಾದಿ ಸಂಜ್ಞಿತಃ।**[3] ಎಂದು ಪ್ರಾರಂಭಿಸಿ 'ಏವಂತು ಬ್ರಹ್ಮಣೋ ವರ್ಷಂ ಏವಂ ವರ್ಷ **ಶತಂತು ತತ್। ಶತಂ ಹಿ ತಸ್ಯವರ್ಷಾಣಾಂ ಪರಮಾಯುರ್ಮಹಾತ್ಮನಃ।'** ಎಂಬುವವರೆಗೆ ಕಾಲದ ಪರಿಣಾಮ ವಿಶೇಷವು ಶ್ರೀ ಪರಾಶರ ಮುನಿಯಿಂದ ಪ್ರಣೀತವಾಗಿದೆ.

ಇದನ್ನೇ ನಡುವಿಲ್ ತಿರುವೀದಿ ಪಿಳ್ಳೈ ಭಟ್ಟರ್ - ನಿಮೇಷಮ್ ಪತಿನೈನ್ದು ಕೊಣ್ಡದು ಕಾಷ್ಟೈ; (15 ನಿಮೇಷವು ಒಂದು ಕಾಷ್ಠೆ) ಕಾಷ್ಟೈ ಮುಪ್ಪದು ಕೊಣ್ಡದು ಕಲೈ; (30 ಕಾಷ್ಠೆ ಒಂದು ಕಲೆ) ಕಲೈ ಮುಪ್ಪದು ಕೊಣ್ಡದು ಮೂಹೂರ್ತಂ;(ಮೂವತ್ತು ಕಲೆಗಳಿಗೆ ಒಂದು ಮೂಹೂರ್ತ) ಮಹೂರ್ತಂ ಮುಪ್ಪದು ಕೊಣ್ಡದು ದಿವಸಂ (ಮೂವತ್ತು ಮೂಹೂರ್ತಗಳಿಗೆ ಒಂದು ದಿವಸ) ದಿವಸಂ ಮುಪ್ಪದು ಕೊಣ್ಡದು ಪಕ್ಷದ್ವಯರೂಪಮಾನ ಮಾಸಂ; (30ದಿನಗಳು ಕೂಡಿ 2 ಪಕ್ಷಗಳುಳ್ಳ ಒಂದು ತಿಂಗಳು ) ಮಾಸ ಮಿರಣ್ಡುಕೊಂಡದು ಋತು; (ಎರಡು ತಿಂಗಳಿಗೆ ಒಂದು ಋತು) ಋತುಮೂನ್ರು ಕೊಣ್ಡತು ಅಯನಮ್; (3 ಋತುಗಳಿಗೆ ಒಂದು ಅಯನ) ಅಯನಂ ಇರಣ್ಡು ಕೊಣ್ಡತು ಸಂವತ್ಸರಮ್ (ಎರಡು ಅಯನಗಳಿಗೆ ಒಂದು ವರ್ಷ) ಇಪ್ಪಡಿ ಮಾನುಷ ಸಂವತ್ಸರಂ ಮುನ್ನೂತ್ತೊರುಪದು ಕೊಣ್ಡ ಒರು ದೇವಸಂವತ್ಸರಂ. (ಇಂತಹ ಮಾನುಷ ವರ್ಷಗಳು 360 ಕೂಡಿದರೆ ಒಂದು ದೇವವರ್ಷ) ದೇವಸಂವತ್ಸರಂ ಪನ್ನೀರಾಯಿರಂ ಕೊಣ್ಡತು ಚತುರ್ಯುಗಂ (12,000 ದೇವ ವರ್ಷಗಳಿಗೆ ಒಂದು ಚತುರ್ಯುಗ) ಅದಿಲ್ ಕೃತಯುಗಂ ನಾಲಾಯಿರಂ. (ಅದರಲ್ಲಿ ಕೃತಯುಗ 4000) ತ್ರೇತೈ ಮೂವಾಯಿರಂ (ತ್ರೇತಾ ಯುಗ 3000) ದ್ವಾಪರಂ ಇರಂಡಾಯಿರಂ (ದ್ವಾಪರವು 2000) ಕಲಿಯುಗ ಮಾಯಿರಂ (ಕಲಿಯುಗ 1000) ಕೃತಯುಗತ್ತುಕ್ಕು ಪೂರ್ವ ಸಂಧ್ಯೆ ನಾನೂರು (ಕೃತಯುಗಕ್ಕೆ ಪೂರ್ವ ಸಂಧ್ಯೆ 400) (ಮುಂದಿನ ಸಂಧಿಕಾಲ) ಅಪರ ಸಂಧ್ಯೆ ನಾನೂರು (ಅಪರ ಸಂಧ್ಯೆ 400) (ಅನಂತರದ ಸಂಧಿಕಾಲ) ತ್ರೇತೈಕ್ಕು ಪೂರ್ವಸಂಧ್ಯೆ ಮುನ್ನೂರು ಅಪರ ಸಂಧ್ಯೆ ಮುನ್ನೂರು (ತ್ರೇತಾಯಾಯುಗಕ್ಕೆ ಪೂರ್ವಸಂಧ್ಯೆ 300 ಅಪರ ಸಂಧ್ಯೆ 300) ದ್ವಾಪರತ್ತುಕ್ಕು ಪೂರ್ವಸಂಧ್ಯೆ ಇರುನೂರು ಅಪರಸಂಧ್ಯೆ ಇರುನೂರು (ದ್ವಾಪರಕ್ಕೆ ಪೂರ್ವಸಂಧ್ಯೆ 200 ಅಪರ ಸಂಧ್ಯೆ 200) ಕಲಿಯುಗತ್ತುಕ್ಕು ಪೂರ್ವಸಂಧ್ಯೆ ನೂರು; ಅಪರ ಸಂಧ್ಯೆ ನೂರು (ಕಲಿಯುಗಕ್ಕೆ ಪೂರ್ವಸಂಧ್ಯೆ 100 ಮತ್ತು ಅಪರ ಸಂಧ್ಯೆ 100) ಇಪ್ಪಡಿ 71 ಚತುರ್ಯುಗಂ ಒರು ಮನ್ವಂತರಂ- (ಹೀಗೆ ಎಪ್ಪತ್ತೊಂದು ಚತುರ್ಯುಗವಾದರೆ ಒಂದು ಮನ್ವಂತರ.) ಇಪ್ಪಡಿ

ಪದಿನಾಲು ಮನ್ವಂತರಂ ಆಯಿರಂ ಚತುರ್ಯುಗಂ (ಹೀಗೆ 14 ಮನ್ವಂತರಗಳು 1000 ಚತುರ್ಯುಗ) ಇದು ಬ್ರಹ್ಮಾವುಕ್ಕು ಒರುಪಕಲ್ (ಇದು ಚತುರ್ಮುಖ ಬ್ರಹ್ಮನಿಗೆ 1ಹಗಲು, ರಾತ್ರಿಯೂ ಇದಕ್ಕೆ ಸಮವಾಗಿರುತ್ತದೆ.) ಹೀಗೆ ಆಹೋರಾತ್ರಗಳೂ, ಮಾಸಸಂವತ್ಸರಗಳಾಗಿ ಗುಣಿಸಿ ಶತಾನ್ತವಾಗಿ ಪರಿಗಣಿತವಾದ ಬ್ರಹ್ಮನ ಆಯುಸ್ಸಿಗೆ 'ಪರ' ಎಂದು ಹೆಸರು. ಎಂದು ವಿಸ್ತಾರವಾಗಿ ನಿರೂಪಿಸಿದ್ದಾರೆ.

ಹೀಗೆ ಕಾಲದ ಕಲಾಕಾಷ್ಠಾದಿ ಪರಿಣಾಮಗಳು ಇಲ್ಲಿ ಹೇಳಲ್ಪಟ್ಟಿತು.

**(ನಿತ್ಯಮಾಯ್)** - ಇಲ್ಲಿ ನಿತ್ಯತ್ವವೆಂದರೆ, **'ಅನಾದಿರ್ಭಗವಾನ್ ಕಾಲೋನಾನ್ತೋಽಸ್ಯ ದ್ವಿಜ ವಿದ್ಯತೇ'**[4] ಎಂಬಂತೆ ಆದಿ ಅಂತ್ಯವಿಲ್ಲದಿರುವಿಕೆ.

**(ಈಶ್ವರನುಕ್ಕು ಕ್ರೀಡಾಪರಿಕರಮಾಯ್)** - 'ನಿಖಿಲ ಜಗದುದಯ ವಿಭವಲಯಲೀಲನಾದ ಸರ್ವೇಶ್ವರನಿಗೆ ಆಯಾಯಾ ಲೀಲೆಗೆ ಉಪಕರಣವಾಗಿರುವಿಕೆ'. ಸರ್ವೇಶ್ವರನಿಗೆ ಪ್ರಕೃತಿ, ಪುರುಷ, ಕಾಲಗಳು ಮೂರೂ ಲೀಲೋಪಕರಣವಾಗಿದೆ. ಅದರಲ್ಲಿ ಪ್ರಕೃತಿ ಪುರುಷರುಗಳು ಸೃಷ್ಟ್ಯಾದಿಗಳಿಗೆ ಕರ್ಮ ಭವಸಿ(ವಸ್ತುವಾಗಿ) ಲೀಲೋಪಕರಣವಾಗುತ್ತಾರೆ. ಈ ಕಾಲವು ಸಹಕಾರಿತ್ವೇನ(ಅದಕ್ಕೆ ಸಹಾಯವಾಗಿದ್ದು) ಲೀಲೋಪಕರಣವಾಗಿರುತ್ತದೆ. ಸರ್ವೇಶ್ವರನು ಸೃಷ್ಟ್ಯಾದಿಗಳನ್ನು ನಿರ್ವಹಿಸುವಾಗ ಸತ್ಯಸಂಕಲ್ಪನಾದ ತಾನೇ ಮೊದಲು ವಿಧಿಸಿದ ಕಾಲನಿಯಮವು ತಪ್ಪದಂತೆ ಆಯಾಯಾ ಕಾಲಾಗಮನವನ್ನು ನಿರೀಕ್ಷಿಸಿಯೇ ನಿರ್ವಹಿಸುವುದರಿಂದ, ಈ ಕಾಲವು ನಿಮೇಷಕಾಷ್ಠಾದಿರೂಪೇಣ ಪರಿಣಮಿಸುವುದರಿಂದಲೂ ಇದೂ ಸೃಷ್ಟಿ ವಿಷಯವಾಗಿಯೇ ಇರುತ್ತದೆ. ಈ ಪ್ರಕಾರಗಳಿಂದ ಈಶ್ವರನಿಗೆ ಕ್ರೀಡಾಪರಿಕರವಾಗಿರುತ್ತದೆ. ಕಾಲವನ್ನು ಕ್ರೀಡಾಪರಿಕರವೆಂದೇ ಹೇಳುವುದರಿಂದ ಕಾಲಕೃತ ಪರಿಣಾಮವಾಗಿಯೇ ನಡೆಯುವ ಲೀಲಾವಿಭೂತಿಯಲ್ಲೇ ಇದಕ್ಕೆ ವಿನಿಯೋಗ. **'ನಕಾಲಸ್ತತ್ರವೈ ಪ್ರಭುಃ'**[5] ಎಂಬಂತೆ ಭೋಗ ವಿಭೂತಿ (ನಿತ್ಯ ವಿಭೂತಿ-ಪರಮ ಪದ) ಯಲ್ಲಿ ಇದರ ಅಪೇಕ್ಷೆಯಿಲ್ಲ ಎಂಬುದು ಏರ್ಪಟ್ಟಿತು.

ಅನಂತರ ಈ ರೀತಿಯಾದ ಕಾಲತತ್ತ್ವವು ಈಶ್ವರನಿಗೆ ಅಪೃಥಕ್ ಸಿದ್ಧ (ಬೇರ್ಪಡಿಸಲಾಗದಂತಹ) ವಿಶೇಷಣವಾಗಿರುವಿಕೆಯನ್ನು ತಿಳಿಸುತ್ತಾರೆ.

**(ಶರೀರ ಭೂತಮಾಯಿರುಕ್ಕುಂ)** - **'ಪರಸ್ಯ ಬ್ರಹ್ಮಣೋರೂಪಂ ಪುರುಷಃ ಪರಮಾಂದ್ವಿಜ। ವ್ಯಕ್ತಾಽವ್ಯಕ್ತೇ ತಥೈವಾನ್ಯೇರೂಪೇ ಕಾಲಸ್ತಥಾಪರಮ್।'**;[6] **'ಪ್ರಧಾನ ಪುರುಷಾಽವ್ಯಕ್ತ ಕಾಲಾಸ್ತು ಪ್ರವಿಭಾಗಶಃ। ರೂಪಾಣಿ ಸ್ಥಿತಿ ಸರ್ಗಾನ್ತವ್ಯಕ್ತಿ ಸದ್ಭಾವ ಹೇತವಃ।'**;[7] **'ವಿಷ್ಣೋಃ ಸ್ವರೂಪಾತ್ಪರತರ ತೋದಿತೇ ದ್ವೇರೂಪೇ ಪ್ರಧಾನಂ ಪುರುಷಶ್ಚ ವಿಪ್ರ। ತಸ್ಯೈವ ತೇಽನ್ಯೇ ನಧೃತೇ ವಿಯುಕ್ತೇ ರೂಪಾಂತರಂ ತದ್ವಿಜ ಕಾಲಸಂಜ್ಞಮ್।'**[8] ಎನ್ನಲಾಗಿದೆ.

ಒಬ್ಬ ಚೇತನನೊಡನೆ ಒಂದು ದ್ರವ್ಯಕ್ಕೆ ಉಂಟಾದ ಪೃಥಕ್ಸಿದ್ಧಿಅನರ್ಹ ಆಧಾರ ಆಧೇಯ ಭಾವವೂ (ಬೇರ್ಪಟ್ಟಿರಲು ಸಾಧ್ಯವಾಗದಿರುವಿಕೆ) ನಿಯಂತೃ ನಿಯಾಮಯಭಾವವೂ, ಶೇಷ ಶೇಷಿಭಾವವೂ, ಒಂದೊಂದೇ ಶರೀರ ಲಕ್ಷಣವಾಗಿದೆ. ಕಾಲವೆಂಬ ಅಚಿದ್ದ್ರವ್ಯಕ್ಕೆ ಈ ಮೂರು ವಿಧವಾದ ಸಂಬಂಧವೂ ಈಶ್ವರನೊಡನಿರುವುದರಿಂದ ಈ ಕಾಲವೂ ಅವನಿಗೆ ಶರೀರವಾಗಿದೆ ಎಂದರ್ಥ. ಹೀಗೆ ಪ್ರಕೃತ್ಯಾದಿ ಪರಿಣಾಮ ಸಹಕಾರಿಯಾದ ಕಾಲವು ಈಶ್ವರನಿಗೆ ಶರೀರವಾಗಿದೆ . ಎಂಬುದರಿಂದ, ಜಗತ್ಸೃಷ್ಟಿಗೆ ಸಹಕಾರಿಕಾರಣವೂ ಈಶ್ವರನೇ ಎಂಬುದಕ್ಕೆ ವಿರೋಧವಿಲ್ಲ, ಆದ್ದರಿಂದ ಕಾಲದ ಸತ್ವಶೂನ್ಯತ್ವವನ್ನು, ಅದರ ಕಾರ್ಯವನ್ನೂ, ಅದರ ಪರಿಣಾಮಗಳನ್ನೂ ಅದರ ಅನಾದಿನಿಧನತ್ವವನ್ನು, ಆದು ಈಶ್ವರನಿಗೆ ಇಂತಹ ಕಾರ್ಯಕ್ಕೆ ಪರಿಕರ ಎಂಬುದನ್ನೂ ಅದು ಈಶ್ವರನಿಗೆ ಶರೀರವೆಂಬುದನ್ನೂ ಈ ಸೂತ್ರದಲ್ಲಿ ವಿಸ್ತಾರವಾಗಿ ನಿರೂಪಿಲಾಯಿತು.

## ಸೂ. 45. ಮತ್ತೈ ಇರಣ್ಡು ಅಚಿತ್ತುಂ ಈಶ್ವರನುಕ್ಕುಂ ಆತ್ಮಾವುಕ್ಕುಂ ಭೋಗ್ಯ ಭೋಗೋಪಕರಣ ಭೋಗ ಸ್ಥಾನಂಗಳಾಯಿರುಕ್ಕುಂ.

ತ್ರಿವಿಧವಾದ ಅಚಿತ್ತುಗಳನ್ನೂ ವಿವರಿಸುವಲ್ಲಿ ಸರ್ವೇಶ್ವರನಿಗೆ ಭೋಗೋಪಕರಣವಾದ ಗೌರವಕ್ಕಾಗಿ ಶುದ್ಧಸತ್ತ್ವವನ್ನು ಕುರಿತು ಮೊದಲು ತಿಳಿಸಿದರು. ಅನಂತರ ಅವನ ಲೀಲೆಗೆ ಪ್ರಧಾನ ಉಪಕರಣವಾಗಿರುವ ಪ್ರಧಾನ ಶಬ್ದವಾಚ್ಯವಾದ ಮಿಶ್ರಸತ್ವವನ್ನು ಕುರಿತು ತಿಳಿಸಿದರು. ಅನಂತರ ಆ ಪ್ರಧಾನದ ಪರಿಣಾಮಕ್ಕೆ ಸಹಕಾರಿಯಾಗಿ, ಲೀಲೋಪಕರಣವಾಗಿರುವ ಸತ್ವಶೂನ್ಯದ (ಕಾಲದ) ಬಗ್ಗೆ ತಿಳಿಸಿದರು. ಹೀಗೆ ಅಚಿತ್‌ತ್ರಯವನ್ನೂ ನಿರೂಪಿಸುವಲ್ಲಿ **'ಪ್ರಕೃತಿ ಪ್ರಾಕೃತಂಗಳಿನುಡೈಯ ಪರಿಣಾಮಂಗಳುಕ್ಕು ಹೇತುವಾಯ್'** ಎಂದು ಕಾಲತತ್ವಕ್ಕೆ ವಿನಿಯೋಗವನ್ನು ಹೇಳಿದಂತೆ ಶುದ್ಧಸತ್ವ ಮತ್ತು ಮಿಶ್ರಸತ್ವಕ್ಕೆ ವಿನಿಯೋಗವನ್ನು ಹೇಳಲಿಲ್ಲವಾದ್ದರಿಂದ ಈ ಸೂತ್ರದಲ್ಲಿ ಅದನ್ನು ನಿರೂಪಿಸುತ್ತಾರೆ.

**(ಮತ್ತೈಯಿರುಣ್ಡು ಅಚಿತ್ತುಂ)**-ಎರಡು ಅಚಿತ್ತು ಎಂದರೆ, ಮಿಶ್ರಸತ್ವ ಮತ್ತು ಶುದ್ಧಸತ್ವಗಳು . ಇವು ಈಶ್ವರನಿಗೂ ಆತ್ಮಾವಿಗೂ ಎಂದರೆ - ಚೇತನರು ಅಚೇತನದ ಭೋಕ್ತಾಗಳು. ಚೇತನರಾಗಿರುವವರು ಆತ್ಮಾ ಮತ್ತು ಈಶ್ವರರಿಬ್ಬರೇ. ಆದ್ದರಿಂದ ಆತ್ಮಾ ಮತ್ತು ಈಶ್ವರರಿಗೆ ಭೋಗ್ಯವಾಗಿರುತ್ತವೆ. **(ಆತ್ಮಾವುಕ್ಕುಂ)** ಎಂಬುದು ತ್ರಿವಿಧಚೇತನರನ್ನೂ ತಿಳಿಸುತ್ತದೆ. ಹೀಗೆ ಉಭಯ ಅಚಿತ್ತುಗಳೂ ಉಭಯರಿಗೂ ಭೋಗ್ಯವಾಗಿ ಇರುತ್ತಿದ್ದರೂ. ಕೇವಲ ಭಗವದಿಚ್ಛೆಯಿಂದ ತದ್ಭೋಗಾರ್ಥವಾಗಿ ಪರಿಣಮಿಸುವುದರಿಂದಲೂ, ಅನವರತ ಅಪರೋಕ್ಷಿತವಾದ ಸ್ವ, ಪರಸ್ವರೂಪರಾದ ನಿತ್ಯ ಮುಕ್ತರಲ್ಲಿ **'ತಿರುಮಕಳುಂನೀಯುಂ'** ಎಂಬಂತೆ ಆ ಮಿಥುನದ (ಲಕ್ಷ್ಮೀ ನಾರಾಯಣರೆಂಬ ದಂಪತಿಗಳ) ಭೋಗಕ್ಕಾಗಿ ಮೀಸಲಾಗಿರುವುದರ ಹೊರತಾಗಿ **'ಅಹಂಮಮ'** ಎನ್ನುವರಿಲ್ಲವಾದ್ದರಿಂದಲೂ; ಶುದ್ಧ ಸತ್ವದ ವಿನಿಯೋಗವು ಈಶ್ವರ ಪ್ರಧಾನವಾಗಿರುತ್ತದೆ. ಅಲ್ಲದೆ ಚೇತನರ ಕರ್ಮಾನುಗುಣವಾಗಿ ಭಗವತ್ ಸಂಕಲ್ಪದಿಂದ ಪರಿಣಮಿಸುವುದರಿಂದಲೂ, ಚೇತನರೆಲ್ಲರೂ ದೇವಮನುಷ್ಯಾದಿ ಶರೀರಗಳಲ್ಲಿ 'ಅಹಂ' ಎಂಬ ಬುದ್ಧಿಯುಳ್ಳವರಾಗಿ ಸ್ವತಂತ್ರ ಭೋಕ್ತಾಗಳಾಗಿರುವುದರಿಂದಲೂ. ಸರ್ವೇಶ್ವರನಿಗೆ ಈ ವಿಭೂತಿಯಲ್ಲಿ ಲೀಲಾರಸವೇ ಪ್ರಚುರವಾಗಿ ಭೋಗರಸವು ಅತ್ಯಲ್ಪವಾದ್ದರಿಂದಲೂ, ಮಿಶ್ರಸತ್ವದ ವಿನಿಯೋಗವು ಬದ್ಧಚೇತನ ಪ್ರಧಾನವಾಗಿರುತ್ತದೆ.

## ಸೂ. 46 ಭೋಗ್ಯಂಗಳಾಕಿರನ-ವಿಷಯಂಗಳ್; ಭೋಗೋಪಕರಣಂಗಳಾಕಿರನ-ಚಕ್ಷುರಾದಿ ಕರಣಂಗಳ್; ಭೋಗಸ್ಥಾನಂಗಳಾಕಿರನ- ಚತುರ್ದಶಭುವನಂಗಳುಂ ಸಮಸ್ತ ದೇಹಮುಂ;

ನಿತ್ಯ ವಿಭೂತಿಯಲ್ಲಿ- ಭೋಗ್ಯಗಳಾಗಿರುವುವು- ಅಪ್ರಾಕೃತವಾದ ಶಬ್ದಾದಿಗಳು. ಭೋಗೋಪ ಕರಣಗಳು-ದಿವ್ಯ ಮಾಲ್ಯಾದಿಗಳು. ಛತ್ರ ಚಾಮರಾದಿಗಳೂ, ಕರಣಗಳಾದ ತಾನೂ.

ಭೋಗಸ್ಥಾನಗಳು-ಅಪ್ರಾಕೃತರತ್ನಮಯವಾದ ಮಂಟಪಗಳೂ, ಮಾಳಿಗೆಗಳೂ,ಇತ್ಯಾದಿಗಳೂ ಮತ್ತು ಪಂಚೋಪನಿಷನ್ಮಯವಾದ ದಿವ್ಯ ವಿಗ್ರಹಗಳು(ಶರೀರಗಳು) ಈ ರೀತಿ ನಿತ್ಯವಿಭೂತಿಯ ಪ್ರಕಾರವನ್ನು ಇಲ್ಲಿ ಹೇಳಬೇಕಾಗಿರುವಾಗ ಅದನ್ನು ಹೇಳದೆ ಸಂಕೋಚಗೊಳಿಸಿ ಲೀಲಾವಿಭೂತಿಯ ಪ್ರಕಾರವನ್ನು ಮಾತ್ರ ತಿಳಿಸಿದ್ದಾರೆ. ಉಭಯ ವಿಭೂತಿಗೂ ಇದೇ ರೀತಿ ಆಗಬಹುದಲ್ಲಾ ಎಂದರೆ, ಭೋಗೋಪಕರಣಗಳಲ್ಲಿ ಪ್ರಧಾನವನ್ನು ಹೇಳದೇ ಇರುವುದರಿಂದಲೂ, ಭೋಗಸ್ಥಾನಗಳಲ್ಲಿನ ವೈಷಮ್ಯದಿಂದಲೂ ಹಾಗೆ ಹೇಳಲು ಸಾಧ್ಯವಿಲ್ಲ.

ಇಲ್ಲಿ ಚೇತನನಿಗೆ 'ಭೋಗ'ವಾದರೋ- ಸುಖದುಃಖರೂಪವಾದ ಅನುಭವಜ್ಞಾನ. ಆ ಜ್ಞಾನಕ್ಕೆ ವಿಷಯವಾದ್ದರಿಂದ ಶಬ್ದಾದಿ ವಿಷಯಗಳು 'ಭೋಗ್ಯ'ಗಳು. ಆ ಜ್ಞಾನಕ್ಕೆ ಉಪಕರಣಗಳಾದ್ದರಿಂದ ಇಂದ್ರಿಯಗಳು 'ಭೋಗೋಪಕರಣಗಳು'. ಯಾವ ಒಂದು ಆಶ್ರಯದಲ್ಲಿ ಚೇತನನಿಗೆ ಆ ಜ್ಞಾನ ಉಂಟಾಗುತ್ತದೆಯೋ ಅದು 'ಭೋಗಸ್ಥಾನ' ಶಬ್ದದ ಅರ್ಥವಾದ್ದರಿಂದ, ಭೋಗಸ್ಥಾನಗಳೆಂಬುದಾಗಿ ಆಯಾಯಾ ದೇಹವನ್ನೂ, ಲೋಕವನ್ನೂ ಹೇಳಲಾಗುತ್ತದೆ. ಲೋಕ ವಿಭಾಗವು ಹಿಂದೆಯೇ ಹೇಳಲ್ಪಟ್ಟಿದೆ. ದೇಹಗಳೆಂದರೆ ಸುರ, ನರ, ತಿರ್ಯಕ್, ಸ್ಥಾವರಾತ್ಮಕವಾದ ಶರೀರಗಳು. ಈಶ್ವರನಿಗೆ ಈ ಲೋಕದಲ್ಲಿರುವ ಭೋಗ್ಯ ಭೋಗೋಪಕರಣಾದಿಗಳನ್ನು, ಅವತಾರಗಳಿಗೆ ಮೂಲವಾದ ಕ್ಷೀರಾಬ್ಧಿಶಯನದಲ್ಲೂ, ಅವತಾರ ವಿಶೇಷಗಳಲ್ಲೂ, ಅರ್ಚಾವತಾರಗಳಲ್ಲೂ ಏರ್ಪಡುವ ವಿನಿಯೋಗ ವಿಶೇಷಗಳಿಂದ ಕಾಣಬಹುದು.

## ಸೂ. 47. ಇತಿಲ್, ಮುರ್ಪಟ್ಟ ಅಚಿತ್ತುಕ್ಕು ಕೀಳೆಲ್ಲೈಯುಣ್ಡಾಯ್ ಶುತ್ತುವಮ್ ಮೇಲುಮೆಲ್ಲೈಯಿನ್ರಿಕ್ಕೇ ಇರುಕ್ಕುಮ್; ನಡುವಿಲ್ ಅಚಿತ್ತುಕ್ಕು ಶುತ್ತುಂ ಕೀಳುಮೆಲ್ಲೈಯಿನ್ರಿಕ್ಕೇ ಮೇಲೆಲ್ಲೈಯುಣ್ಡಾಯಿರುಕ್ಕುಮ್; ಕಾಲಮೆಙ್ಗು ಮೊಕ್ಕವುಣ್ಡಾಯಿರುಕ್ಕುಮ್.

ಮೂರು ವಿಧವಾದ ಅಚಿತ್ತಿನ ಪರಿಮಾಣಗಳನ್ನು ನಿರೂಪಿಸುತ್ತಾರೆ.

**(ಮುರ್ಪಟ್ಟ........ಉಂಡಾಯ್)**- ಮೊದಲನೆಯ ಅಚಿತ್ತಿಗೆ (ಶುದ್ಧಸತ್ವಕ್ಕೆ) ಕೆಳಗಿನ ಎಲ್ಲೆ ಇದೆ ಎಂಬುದು ಮಿಶ್ರಸತ್ವಾವಧಿಯಾದ್ದರಿಂದ. (ಕೆಳಗಿನ ಎಲ್ಲೆ ಮಿಶ್ರ ಸತ್ವ)

**(ನಡುವಿಲ್........ಇರುಕ್ಕುಮ್)**- ಮಧ್ಯದ ಅಚಿತ್ತಿಗೆ (ಮಿಶ್ರಸತ್ವಕ್ಕೆ) ಮೇಲಿನ ಎಲ್ಲೆ ಇದೆ ಎಂಬುದು ಶುದ್ಧ ಸತ್ವಾವಧಿಯಾದ್ದರಿಂದ. (ಮೇಲಿನ ಎಲ್ಲೆ ಶುದ್ಧ ಸತ್ವ)

**(ಕಾಲ..........ಇರುಕ್ಕುಂ)**- ಕಾಲಕ್ಕೆ ಈ ರೀತಿಯಾದ ಮಿತಿ ಇಲ್ಲದ್ದರಿಂದ ಎಲ್ಲೆಡೆಯಲ್ಲಿಯೂ ಇದೆ ಎಂಬುದಾಗಿದೆ. ಹೀಗೆ ಸಾರ್ವತ್ರಿಕವಾದ ಕಾಲವು ಉಭಯವಿಭೂತಿಯಲ್ಲೂ ನಿತ್ಯವೆಂಬುದು ಸೂತ್ರಕಾರರ ಅಭಿಪ್ರಾಯವಾಗಿದೆ.

## ಸೂ. 48. ಕಾಲನ್ದಾನ್ ಪರಮಪದತ್ತಿಲ್ ನಿತ್ಯಂ, ಇಙ್ಗು ಅನಿತ್ಯಮೆನ್ನು ಶೊಲ್ಲುವರ್‌ಗಳ್.

ಈ ಕಾಲಕ್ಕೆ ವಿಭೂತಿ ವಿಭಾಗಾನುಗುಣವಾಗಿ ಭೇಧ ಹೇಳುವವರೂ ಉಂಟು.

**(ಕಾಲನ್ದಾನ್....... ಶೊಲ್ಲುವರ್‌ಗಳ್)** - ಕಾಲವು ನಿತ್ಯ ವಿಭೂತಿಯಾದ ಪರಮಪದದಲ್ಲಿ ನಿತ್ಯವೆಂದೂ, ಈ ಲೀಲಾವಿಭೂತಿಯಲ್ಲಿ ಅನಿತ್ಯವೆಂದೂ ಹೇಳುತ್ತಾರೆ! ಹೀಗೆ ಹೇಳಲು ಕಾರಣ ಪರಮಪದದಲ್ಲಿ ಕಾಲಕ್ಕೆ ಉತ್ಪತ್ತ್ಯಾದಿಗಳು ಉಂಟು ಎಂದು ಶಾಸ್ತ್ರಗಳು ಹೇಳದೇ ಇರುವುದರಿಂದಲೂ, ಈ ವಿಭೂತಿಯಲ್ಲಿ ಉತ್ಪತ್ತ್ಯಾದಿಗಳನ್ನು ಹೇಳುವುದೂ ಆಗಿದೆ. ವ್ಯೂಹರೂಪಿಯಾದ ಭಗವಂತನ ಕೃತ್ಯಗಳನ್ನು ಹೇಳುವಾಗ ಕಾಲಸೃಷ್ಟಿಯನ್ನು ಅನಿರುದ್ಧರೂಪೀ ಪರಮಾತ್ಮನು ಮಾಡಿದ ಎನ್ನಲಾಗಿದೆ. ನಿತ್ಯವಾದ ಪ್ರಕೃತಿಯನ್ನು ಸೃಷ್ಟಿಸುವುದು ಎಂದರೆ- ಮಹದಾದಿ ರೂಪೇಣ ಪರಿಣಮಿಸುವುದು ಎಂದಂತೆ, ಕಾಲಸೃಷ್ಟಿ ಎಂದರೆ- ನಿಮೇಷ, ಕಾಷ್ಠಾದಿ ರೂಪವಾಗಿ ಪರಿಣಮಿಸುವಂತೆ ಮಾಡುವುದು. ಸತತ ಪರಿಣಾಮಿಯಾದ ಕಾಲಕ್ಕೂ ನಿಮೇಷಾದಿರೂಪೇಣ

ಪರಿಣಾಮವುಂಟಾಗುತ್ತದೆ. ಆ ಮಹದಾದಿಗಳಂತೆ ನಿಮೇಷಾದಿಯಾದ ಇದೂ ಕೂಡ ಉತ್ಪತ್ತಿ ವಿನಾಶಗಳನ್ನು ಹೊಂದುವುದರಿಂದ ಲೀಲಾವಿಭೂತಿಯಲ್ಲಿ ಕಾಲವನ್ನು ಅನಿತ್ಯವೆನ್ನಲಾಗಿದೆ.

ಪರಮಪದದಲ್ಲಿ ಈ ರೀತಿಯಾದ ಪರಿಣಾಮವಿಶೇಷ ಪ್ರಯುಕ್ತವಾದ ಉತ್ಪತ್ತ್ಯಾದಿಗಳ ವ್ಯವಹಾರವಿಲ್ಲದ್ದರಿಂದ ಅಲ್ಲಿ ಇದನ್ನು ನಿತ್ಯ ಎನ್ನಲಾಗಿದೆ.

ಹೀಗೆ ಕಾಲಕ್ಕೆ ಪರಿಣಾಮವನ್ನು ಒಪ್ಪಿಕೊಳ್ಳದೆ ಏಕರೂಪತ್ವವನ್ನು ಅಂಗೀಕರಿಸಿ ಇಂತಹ ಕಾಲವು ನಿಮೇಷ, ಕಾಷ್ಠೆ, ಮುಹೂರ್ತ. ಅಹೋರಾತ್ರ ಮುಂತಾದ ಎರಡು ಪರಾರ್ಧಗಳನ್ನು ಉಳ್ಳ ವಿಶೇಷ ವ್ಯವಹಾರಕ್ಕೆ ಕಾರಣಾವಾದ ನಿಮೇಷೋನ್ಮೇಷಗಳು, ಆದಿತ್ಯಗತಿ ಮೊದಲಾದ ಅವಚ್ಛೇದಗಳೊಡನೆ ಸಂಬಂಧಿಸಿರುತ್ತವೆ. ಆದ್ದರಿಂದ ಕ್ಷಣ, ಲವ, ಇತ್ಯಾದಿ ಭೇದವ್ಯವಹಾರ ಉಂಟಾಗುತ್ತದೆ ಎಂದು ಹೇಳುವ ಪಕ್ಷವೊಂದಿದೆ. ಇದನ್ನು **'ತತ್ವತ್ರಯ ವಿವರಣ'**ದಲ್ಲಿ ಆಚ್ಚಾನ್ ಪಿಳ್ಳೆ ಪ್ರಧಾನವಾಗಿ ವಿವರಿಸಿದ್ದಾರೆ. ಹಾಗಿದ್ದರೆ ಉಭಯವಿಭೂತಿಯಲ್ಲೂ ಕಾಲಸ್ವರೂಪವು ಏಕಪ್ರಕಾರವಾಗಿರುವುದರಿಂದ 'ಪರಮ ಪದದಲ್ಲಿ ನಿತ್ಯ, ಇಲ್ಲಿ ಅನಿತ್ಯ' ಎಂದು ಹೇಳವಂತಿಲ್ಲ. ಆದ್ದರಿಂದ ಈ ಮೇಲಿನ ಸೂತ್ರವು ಪರಿಣಾಮಪಕ್ಷವನ್ನು ಅನುಸರಿಸಿ ಹೇಳಿರುವಂತಹುದು. ನಮ್ಮ ದರ್ಶನದಲ್ಲಿ ಹೀಗೂ ಕೆಲವರು ಹೇಳಿರುವುದರಿಂದ ಅದನ್ನು ಇಲ್ಲಿ ನಿರೂಪಿಸಲಾಗಿದೆ.

## ಸೂ. 49. ಶಿಲರ್ ಕಾಲತ್ತೈ ಇಲ್ಲೈ ಎನ್ನಾರ್‌ಗಳ್.

ಕಾಲವನ್ನು ಬೌದ್ಧಾದಿಗಳು ಇಲ್ಲವೆಂದು ಹೇಳಿರುವುದರಿಂದ 'ಕೆಲವರು ಕಾಲವನ್ನು ಇಲ್ಲ ಎನ್ನುತ್ತಾರೆ' ಎಂದು ಈ ಸೂತ್ರದಲ್ಲಿ ತಿಳಿಸುತ್ತಾರೆ.

## ಸೂ. 50 ಪ್ರತ್ಯಕ್ಷತ್ತಾಲುಂ ಆಗಮತ್ತಾಲುಂ ಸಿದ್ಧಿಕ್ಕೈಯಾಲೇ ಅತು ಶೊಲ್ಲುವೊಣ್ಣಾತು.

ಈ ಸೂತ್ರದಿಂದ ಕಾಲವಿಲ್ಲ ಎಂಬುದನ್ನು ನಿರಾಕರಿಸುತ್ತಾರೆ.

**(ಪ್ರತ್ಯಕ್ಷತ್ತಾಲುಂ)** ಸ್ಥಾವರ ಜಂಗಮಾತ್ಮಕವಾದ ಸಮಸ್ತ ಪದಾರ್ಥವೂ ಕಾಲಕೃತ ಪರಿಣಮವಾಗಿಯೇ ಪ್ರತ್ಯಕ್ಷದಲ್ಲಿ ಕಾಣಲ್ಪಡುವುದರಿಂದಲೂ.

**(ಆಗಮತ್ತಾಲುಂ)**-ಆಗಮವೆಂದರೆ ಶ್ರುತ್ಯಾದಿಗಳು- **'ಕಲಾಮೂಹೂರ್ತಾಃ ಕಾಷ್ಠಾಶ್ಚಾ ಹೋರಾತ್ರಾಶ್ಚ ಸರ್ವಶಃ'**[1] ಎಂಬಂತೆಯೂ **'ಮಧುಶ್ಚಮಾಧವಶ್ಚ ವಾಸಂತಿಕಾವೃತೂ'**[2] ಎಂಬಂತೆಯೂ **'ಶುಕ್ರಶ್ಚ ಶುಚಿಶ್ಚ ಗ್ರೈಷ್ಮಾವೃತೂ'** ಎಂದೂ ಕಾಲಪರಿಣಾಮ ವಿಶೇಷಗಳಾದ ಕಲಾ, ಕಾಷ್ಠಾ, ಮುಹೂರ್ತ, ಅಹೋರಾತ್ರಗಳು ಎಂಬುದಾಗಿ ಋತುವಿಶೇಷಗಳನ್ನು ಶ್ರುತಿ ತಿಳಿಸುತ್ತದೆಯಾದ್ದರಿಂದಲೂ ಕಾಲವಿಲ್ಲ ಎಂದು ಹೇಳುವಂತಿಲ್ಲ.

**'ಕಾಲಸ್ವರೂಪಂ ವಿಷ್ಣೋಶ್ಚ ಯನ್ಮಯೋಕ್ತಂ ತವಾನಘ'**[3] ಮುಂತಾಗಿ ಶ್ರೀ ವಿಷ್ಣುಪುರಾಣದಲ್ಲಿ ವಿಸ್ತರೇಣ ಹೇಳಲ್ಪಟ್ಟಿದೆ. ಪುರಾಣಾಂತರಗಳಲ್ಲೂ ಇತಿಹಾಸಗಳಲ್ಲೂ ಹೀಗೇ ಕಾಣಬಹುದು. ಈ ಕಾಲದ ವಿಷಯವನ್ನೇ ತಿಳಿಸುವುದಕ್ಕಾಗಿ ನಿರ್ಮಿಸಲ್ಪಟ್ಟದ್ದಾಗಿ ಅಧ್ಯಯನಾದಿ ಕಾಲನಿಯಮಗಳನ್ನು ಪ್ರತಿಪಾದಿಸುವ ಜ್ಯೋತಿಶ್ಶಾಸ್ತ್ರವನ್ನು **'ವೇದದ ದೃಷ್ಟಿ'** ಎನ್ನಲಾಗಿದೆ. ಶಾಸ್ತ್ರದಲ್ಲಿ 'ಈ ಕಾಲದಲ್ಲಿ ಇದು ಉಂಟಾಗುತ್ತದೆ' ಎಂದು ಹೇಳಿದರೆ ಪ್ರತ್ಯಕ್ಷಿಸಿ ನೋಡಬಹುದು. ಆದ್ದರಿಂದ ಪ್ರತ್ಯಕ್ಷದಿಂದಲೂ, ಆಗಮದಿಂದಲೂ ಕಾಲವು ಸಿದ್ಧಿಸುವುದರಿಂದ ಕಾಲವಿಲ್ಲ ಎಂಬುದು ನಿರೂಪಿತವಾಗುವುದಿಲ್ಲ.

## ಸೂ. 51. ಪಲರ್ ದಿಕ್ಕೆನ್ನು ತನಿಯೇ ಒರು ದ್ರವ್ಯಂ ಉಂಡೆನ್ನಾರ್‌ಹಳ್.

ವೈಶೇಷಿಕಾದಿಗಳು ಪೃಥಿವ್ಯಾದಿಗಳಂತೆ 'ದಿಕ್ಕು' ಎಂಬುದೊಂದು ದ್ರವ್ಯವು ಉಂಟೆನ್ನುತ್ತಾರೆ. 'ದ್ರವ್ಯಾಣಿ ಪೃಥಿವ್ಯಪ್ತೇಜೋವಾಯು ಆಕಾಶ ಕಾಲದಿಗಾತ್ಮಮನಾಂಸಿ ನವೈವ' [1] ಎನ್ನುತ್ತಾರೆ ಅವರು.

**ಭೂರಾಪೋಜ್ಯೋತಿರನಿಲೋ ನಭಃ ಕಾಲಸ್ತಥಾದಿಶಃ।**
**ಆತ್ಮಾ ಮನ ಇತಿ ಪ್ರಾಹುರ್ ದ್ರವ್ಯಾಣಿ ನವ ತದ್ವಿದಃ।** [2]

ಎಂಬುದು ಪರಮಾತ್ಮನಾದ ವರದರಾಜನ ವಾಣಿಯಾಗಿದೆ.

## ಸೂ. 52 ಪಲಹೇತುಕ್ಕಳಾಲುಮ್ ಆಕಾಶಾದಿಗಳಿಲೇ ಅಂತರ್ಭೂತಮಾಗೈಯಾಲೇ ಅದುವುಂ ಶೇರಾದು.

ದಿಕ್ಕನ್ನು ದ್ರವ್ಯವೆನ್ನುವ ಮತವನ್ನು ಈ ಸೂತ್ರದಲ್ಲಿ ನಿರಾಕರಿಸುತ್ತಾರೆ. ನಾಲ್ಕುಮಂದಿ ನಾಲ್ಕು ದಿಕ್ಕಿನಲ್ಲೂ ನಿಂತರೆ ನಾಲ್ವರಿಗೂ ಮಧ್ಯದ ಪ್ರದೇಶ ಒಬ್ಬನಿಗೆ, ಪೂರ್ವದಿಕ್ಕಾಗಿ ಒಬ್ಬನಿಗೆ ಪಶ್ಚಿಮದಿಕ್ಕಾಗಿ, ಒಬ್ಬನಿಗೆ ಉತ್ತರದಿಕ್ಕಾಗಿ, ಒಬ್ಬನಿಗೆ ದಕ್ಷಿಣದಿಕ್ಕಾಗಿ ತೋರುತ್ತದೆ. ಇದಕ್ಕೆ ಕಾರಣ ಅವನವನಿಗೆ ಅನುಗುಣವಾಗಿ ತೋರುವಿಕೆ.- ಪ್ರತಿಯೋಗ್ಯನುಗುಣಕಲ್ಪನವಾದ್ದರಿಂದ. ನಾಲ್ವರಿಗೂ ನಡುವೆ ಇರುವ ಪೃಥಿವ್ಯಾದಿಗಳು ದ್ರವ್ಯವಾದ್ದರಿಂದ ಹೀಗೆ ಅವರವರಿಗನುಸಾರವಾಗಿ ತೋರುವುದಿಲ್ಲ. ಅಲ್ಲದೆ ಸೂರ್ಯನುದಯಿಸುವುದು ಪೂರ್ವವಾಗಿ, ಸೂರ್ಯನು ಅಸ್ತಮಿಸುವುದೇ ಪಶ್ಚಿಮವಾಗಿ ತಿಳಿಯಲಾಗಿದೆ. ಮಹಾಮೇರು ಪರ್ವತಕ್ಕೆ ನಾಲ್ಕು ಪಾರ್ಶ್ವದಲ್ಲೂ ಹೀಗೇ ಭಿನ್ನ ಭಿನ್ನವಾಗಿದೆ. ಆದ್ದರಿಂದಲೇ ಮೇರುಪರ್ವತದ ನಾಲ್ಕು ಪಾರ್ಶ್ವದಲ್ಲಿರುವವರಿಗೂ ಮಹಾಮೇರು ಉತ್ತರದಲ್ಲಿರುವಂತೆಯೇ ಕಾಣುವುದು.

**ನೈವಾಸ್ತಮಯಮರ್ಕಸ್ಯ ನೋದಯಸ್ಸರ್ವ ದಾಸತಃ ।**
**ಉದಯಾಸ್ತಮಯಾಖ್ಯಾಹಿ ದರ್ಶನಂ ರವೇ।**
**ಸರ್ವೇಷಾಂ ದ್ವೀಪವರ್ಷಾಣಾಂ ಮೇರುರುತ್ತರತೋಯತಃ।** [1]

ಎಂದು ವಿಷ್ಣು ಪುರಾಣ ಇದನ್ನೇ ವರ್ಣಿಸುತ್ತದೆ.

ಹೀಗೆ ಹಲವು ಕಾರಣಗಳಿಂದ ಆಕಾಶಾದಿಗಳಲ್ಲಿ ಅಂತರ್ಭೂತವಾಗಿ ತನಗೆಂದೇ ಪ್ರತ್ಯೇಕವಾಗಿ ಒಂದು ದ್ರವ್ಯವ್ಯವಸ್ಥೆ ಇಲ್ಲದೇ ಇರುವುದರಿಂದ 'ದಿಕ್ಕು' ಎನ್ನುವಂತಹ ಒಂದು ದ್ರವ್ಯವಿದೆ ಎಂಬುದು ಅಂಗೀಕೃತವಲ್ಲ.

**(ಆಕಾಶಾದಿ)**-ಆದಿ ಶಬ್ದದಿಂದ ಭೂಮಿಯು ಹೇಳಲ್ಪಟ್ಟಿದೆ. ಇದರಲ್ಲಿ ದಿಕ್ಕು ಅಂತರ್ಭೂತವಾಗಿರುವಿಕೆ ಎಂದರೆ ಸೂರ್ಯನ ಉದಯಾಸ್ತಮಾನಗಳಿಗೆ ಅನುಗುಣವಾಗಿ ಇವುಗಳಲ್ಲಿ ದಿಕ್ಕಿನ ವಿಭಾಗವನ್ನು ಕಲ್ಪಿಸಿಕೊಳ್ಳಬೇಕೇ ವಿನಃ ಅದನ್ನೇ ಪ್ರತ್ಯೇಕವಾಗಿ ಕಾಣುವಂತಹ ಒಂದು ವಸ್ತು ಇಲ್ಲದಿರುವಿಕೆ.

## ಸೂ. 53 ಶಿಲರ್ ಆವರಣಾಭಾವಮ್ ಆಕಾಶ ಮೆನ್ನಾರ್‌ಗಳ್.

ಪೃಥಿವ್ಯಾದಿ ಚತುಷ್ಟಯಗಳಂತೆ ಆಕಾಶವನ್ನೂ ಭಾವರೂಪ ಪದಾರ್ಥವಾಗಿ ಅಂಗೀಕರಿಸದೆ ಆವರಣ ಅಭಾವ ರೂಪವಾಗಿ ಹೇಳುವ ಬೌದ್ಧಮತವನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ. **'ಆವ್ರಿಯತೇ ಅನೇನ'** ಎಂಬ

ಕರಣ ವ್ಯುತ್ಪತ್ತಿಯಿಂದ ಆವರಣಗಳೆಂದರೆ -ಸ್ಥೂಲ ಪದಾರ್ಥಗಳಾದ ಪೃಥಿವ್ಯಾದಿಗಳು . ಅವುಗಳ ಅಭಾವವೇ ಆಕಾಶವೇ ವಿನಃ, ಆಕಾಶ ಎಂದು ತೋರುವಂತಹಒಂದು ಭಾವರೂಪ ಪದಾರ್ಥವೇ ಇಲ್ಲ ಎಂದು ಅಭಿಪ್ರಾಯ.

'ನ ಚ ಪೃಥಿವ್ಯಾದಿ ಅಭಾವ ಮಾತ್ರಮಾಕಾಶ ಇತಿ ವಕ್ತುಂ ಶಕ್ಯಂ'[1] ಎಂದು ಶ್ರೀ ಭಾಷ್ಯಕಾರರೂ ತಮ್ಮ ಭಾಷ್ಯದಲ್ಲಿ ಸೂಚಿಸಿದ್ದಾರೆ.

## ಸೂ. 54 ಭಾವರೂಪೇಣ ತೋತ್ತುಗ್ಗೈಯಾಲೇ ಅದುವುಂ ಶೇರಾತು.

ಹೀಗೆ ಹೇಳುವ ಬೌದ್ಧಮತವನ್ನು ಈ ಸೂತ್ರದಲ್ಲಿ ನಿರಾಕರಿಸುತ್ತಾರೆ. ಭಾವರೂಪತ್ವೇನ ಅಂಗೀಕರಿಸಲ್ಪಟ್ಟ ಪೃಥಿವ್ಯಾದಿಗಳಂತೆ '**ಅತ್ರಶ್ಯೇನಃ ಪತತಿ, ಅತ್ರಗೃಧ್ರಃ ಪತತಿ**'[1] ಎಂದು ಶ್ಯೇನಾದಿಗಳ (ಹದ್ದು) ಬೀಳುವಿಕೆಗೆ ಜಾಗವಾಗಿ ಆಕಾಶಾದಿಗಳು ತೋರುವುದರಿಂದ, ಇದನ್ನು ಆವರಣ ಅಭಾವರೂಪವಾಗಿ ಹೇಳಲಾಗದು. ಸೂತ್ರದಲ್ಲಿನ 'ಅತ್ತಾವುಂ' ಎಂಬ ಶಬ್ದದಿಂದ ನಿಷಿದ್ಧ ಸಮುಚ್ಚಯವು ಹೇಳಲ್ಪಟ್ಟಿದೆ. '**ಆಕಾಶಾದವಿಶೇಷಾತ್**'[2] ಎಂಬ ಬ್ರಹ್ಮಸೂತ್ರದ ವ್ಯಾಖ್ಯಾನದಲ್ಲಿ '**ಆಕಾಶೇಚ ನಿರೂಪಾಖ್ಯಾತಾನಯುಕ್ತಾ, ಭಾವರೂಪತ್ವೇನಾಽ ಭ್ಯುಪಗತಪೃಥಿವ್ಯಾದಿವದಾಕಾಶ ಸ್ಯಾಪ್ಯಬಾಧಿತ ಪ್ರತೀತಿ ಸಿದ್ಧ ತ್ವಾವಿಶೇಷಾತ್**'; '**ಪ್ರತೀಯತೇ ಹಿ ಆಕಾಶೋತ್ರ, ಶ್ಯೇನಃ ಪತತಿ, ಗೃಧ್ರಃ ಪತತಿ ಇತಿ ಶ್ಯೇನಾದಿ ಪತನದೇಶತ್ವೇನ**'[3] ಎಂದು ಪ್ರಾರಂಭಿಸಿ ಶ್ರೀ ಭಾಷ್ಯಕಾರರು ಇದನ್ನು ವಿವರಿಸಿದ್ದಾರೆ.

## ಸೂ. 55 ವೇರೇ ಶಿಲರ್ ಇತುತನ್ನೈ ನಿತ್ಯಂ, ನಿರವಯವಮ್, ವಿಭು, ಅಪ್ರತ್ಯಕ್ಷ ಮೆನ್ನಾರ್‌ಗಳ್.

'ವೇರೇ ಶಿಲರ್' - ಬೇರೇ ಕೆಲವರು -ಎಂಬುದು ನೈಯಾಯಿಕ ವೈಶೇಷಿಕರನ್ನು. ಅವರು ಆಕಾಶಕ್ಕೆ ನಿತ್ಯತ್ವ, ನಿರವಯವತ್ವ,ವಿಭುತ್ವ, ಅಪ್ರತ್ಯಕ್ಷಗಳನ್ನು ಹೇಳುತ್ತಾರೆ.

## ಸೂ. 56. ಭೂತಾದಿಯಿಲೇ ಪಿರಕ್ಕೈಯಾಲುಂ ಅಹಂಕಾರಾದಿಗಳಿಲಿಲ್ಲಾಮೈಯಾಲುಂ ಕಣ್ಣುಕ್ಕು ವಿಷಯಮಾಕ್ಕೈಯಾಲುಂ ಅವ್ವೈ ನಾಲುಂ ಶೇರಾದು.

ಇಲ್ಲಿ ನೈಯಾಯಿಕ ವೈಶೇಷಿಕ ಮತಗಳನ್ನು ನಿರಾಕರಿಸುತ್ತಾರೆ. ಭೂತಾದಿ ಸಂಜ್ಞಕವಾದ ತಾಮಸಾಹಂಕಾರದಲ್ಲಿ ಉತ್ಪತ್ತಿಯಾಗುವುದರಿಂದಲೂ, ಒಂದರಿಂದ ಉತ್ಪತ್ತಿಯಾದದ್ದಕ್ಕೆ ಸಾವಯವತ್ವವು ಸಿದ್ಧವಾದದರಿಂದಲೂ ಆಕಾಶವು 'ನಿತ್ಯ ನಿರವಯವ' ಎನ್ನುವಂತಿಲ್ಲ.

ಶಬ್ದತನ್ಮಾತ್ರೆಯ ಸ್ಥೂಲಾವಸ್ಥೆಯಾದ್ದರಿಂದ ಅದಕ್ಕೂ ಇದಕ್ಕೂ ಇರುವ ಐಕ್ಯದಿಂದ 'ಭೂತಾದಿಯಿಲೇ ಪಿರಕ್ಕೈಯಾಲುಂ' ಎನ್ನುತ್ತಾರೆ. ವಿಭುವಾದರೆ ಸರ್ವಗತವಾಗಬೇಕು. (ಎಲ್ಲದರೊಳಗೆ ಪ್ರವೇಶಿಸುವಿಕೆ) ತನಗೆ ಕಾರಣವಾದ ಆಹಂಕಾರದಲ್ಲೇ ಇದಕ್ಕೆ ವ್ಯಾಪ್ತಿಯಿಲ್ಲವಾದ್ದರಿಂದ ಇದನ್ನು ವಿಭು ಎನ್ನಲಾಗುವುದಿಲ್ಲ, ಪಂಚೀಕರಣ ಪ್ರಯುಕ್ತವಾದ ರೂಪವತ್ವದಿಂದ ಕಣ್ಣಿಗೆ ವಿಷಯವಾದ್ದರಿಂದ ಅಪ್ರತ್ಯಕ್ಷ ಎನ್ನಲಾಗುವುದಿಲ್ಲ.'ಆಕಾಶಮ್ ಕರುತುತ್ತೋತ್ತು ಕಿರತು ಮತ್ತಾಲೇ' ಎಂದು ಹಿಂದೆಯೇ ಹೇಳಲಾಗಿದೆ. ಇದನ್ನು ಶ್ರೀ ಭಾಷ್ಯಕಾರರು '**ಅಣ್ಣಾನ್ತರ್ಗತಿನಶ್ಚ ಆಕಾಶಸ್ಯ ತ್ರಿವೃತ್ಕರಣೋಪದೇಶ ಪ್ರದರ್ಶಿತ ಪಂಚೀಕರಣೇನ ರೂಪವತ್ವಾತ್ ಚಾಕ್ಷುಷತ್ವೇಪಿ ಅವಿರೋಧಃ**'[1] ಎಂದು ವಿವರಿಸಿದ್ದಾರೆ.

## ಸೂ. 57 ತ್ವಗಿಂದ್ರಿಯತ್ತಾಲೇ ತೋತ್ತುಗ್ಗೈಯಾಲೇ ವಾಯು ಅಪ್ರತ್ಯಕ್ಷ ಮೆನ್ನಿರವದುವುಮ್ ಶೇರಾದು.

ವಾಯುವೂ ಪ್ರತ್ಯಕ್ಷವಲ್ಲ. ಸ್ಪರ್ಶಅನುಮೇಯ -(ಸ್ಪರ್ಶದಿಂದ ಊಹಿಸಬೇಕಾದುದು) ಎಂದು ಅವರುಗಳು ಹೇಳುತ್ತಾರೆ. ಅದನ್ನು ಈ ಸೂತ್ರದಲ್ಲಿ ನಿರಾಕರಿಸುತ್ತಾರೆ.

ಜ್ಞಾನೇಂದ್ರಿಯಗಳಲ್ಲಿಯಾವುದಾದರೂ ಒಂದಕ್ಕೆ ಗೋಚರವಾದರೂ ಅದರ ಪ್ರತ್ಯಕ್ಷತ್ವವು ಸಿದ್ಧವಾಗುತ್ತದೆ. ತ್ವಕ್(ಚರ್ಮ) ಇಂದ್ರಿಯಕ್ಕೆ ಗೋಚರವಾಗುವುದರಿಂದ ವಾಯುವು ಅಪ್ರತ್ಯಕ್ಷವಲ್ಲ.

## ಸೂ. 58 ತೇಜಸ್ಸು ಭೌಮಾದಿ ಭೇದತ್ತಾಲೇ ಬಹುವಿಧಮ್.

ಇನ್ನು ಪರಸ್ಪರ ವಿಲಕ್ಷಣ ಸ್ವಭಾವಗಳನ್ನುಳ್ಳ ಭೂತವಿಶೇಷಗಳ ಬಗ್ಗೆ ತಿಳಿಯಬೇಕಾದ ವಿಷಯಗಳನ್ನು ನಿರೂಪಿಸುತ್ತಾರೆ. 'ಭೌಮಮ್ ದಿವ್ಯಮ್ ಔದರ್ಯಮ್ ಆಕರಜಮ್-ಎಂಬ ಬೇಧದಿಂದ ತೇಜಸ್ಸು ಅನೇಕವಿಧವಾಗಿರುತ್ತದೆ.

ಪಾರ್ಥಿವ ಮಾತ್ರ ಇಂಧನವಾದ ತೇಜಸ್ಸು- ಭೌಮಮ್

ಉದಾ:- ದೀಪಾದಿಗಳು.

ಜಲಮಾತ್ರೇನ್ಧನವಾದದ್ದು-ದಿವ್ಯಮ್

ಉದಾ:-ಆದಿತ್ಯಾದಿಗಳು.

ಪಾರ್ಥಿವಮಾತ್ರೇನ್ಧನವಾದ ತೇಜಸ್ಸು-ಔದರ್ಯಮ್

ಉದಾ:- ಜಾಠರಾಗ್ನಿ.

ನಿರಿನ್ಧನವಾದ ತೇಜಸ್ಸು- ಆಕರಜಮ್.

ಉದಾ:- ಸುವರ್ಣಾದಿಗಳು.

## ಸೂ. 59 ಅದಿಲ್ ಆದಿತ್ಯಾದಿ ತೇಜಸ್ಸು ಸ್ಥಿರಮ್. ದೀಪಾದಿ ತೇಜಸ್ಸು ಅಸ್ಥಿರಮ್.

ಚಿರಕಾಲವಿರುವುದರಿಂದ ಆದಿತ್ಯಾದಿ ತೇಜಸ್ಸು 'ಸ್ಥಿರ ' ಎನಿಸುತ್ತದೆ. ಸ್ವಲ್ಪ ಕಾಲವಿದ್ದು ನಾಶ ಹೊಂದುವುದರಿಂದ ದೀಪಾದಿ ತೇಜಸ್ಸು 'ಅಸ್ಥಿರ' ಎನಿಸುತ್ತದೆ.

## ಸೂ. 60 ತೇಜಸ್ಸುಕ್ಕು ನಿರಮ್ ಶಿವಪ್ಪು, ಸ್ಪರ್ಶಂ ಔಷ್ಣ್ಯಮ್.

'ತೇಜಸ್ಸನ ಬಣ್ಣ ಕೆಂಪು' ಎಂಬುದರಿಂದ ತೇಜಃ ಪದಾರ್ಥಗಳಲ್ಲಿನ ವರ್ಣ ಭೇದ ಪದಾರ್ಥಾಂತರದಿಂದ ಏರ್ಪಡುತ್ತದೆ. ಎನ್ನಲಾಗಿದೆ. 'ಸ್ಪರ್ಶವು ಬಿಸಿ' ಎಂಬುದರಿಂದ ಉಷ್ಣಸ್ಪರ್ಶ, ಶೀತಸ್ಪರ್ಶ ಅನುಷ್ಣಾಶೀತಸ್ಪರ್ಶ ಎಂಬ ತ್ರಿವಿಧಸ್ಪರ್ಶದಲ್ಲೂ ತೇಜಸ್ಸಿನ ಸ್ಪರ್ಶ 'ಔಷ್ಣ್ಯ' ಎಂಬುದಾಗಿದೆ. ಆದರೆ ತೇಜಃಪದಾರ್ಥಗಳಾದ ಸುವರ್ಣಾದಿಗಳಲ್ಲಿ ಬಲವತ್ಸಜಾತೀಯ ದ್ರವ್ಯಗಳಿಂದ ಅಭಿಭೂತವಾದ್ದರಿಂದ (ಮುಚ್ಚಲ್ಪಟ್ಟಿರುವುದರಿಂದ) ಈ ಔಷ್ಣ್ಯವು ತೋರುವುದಿಲ್ಲ.

## ಸೂ. 61 ಜಲತ್ತುಕ್ಕು ನಿರಮ್ ವೆಳುಪ್ಪು, ಸ್ಪರ್ಶಮ್ ಶೈತ್ಯಮ್ ರಸಮ್ ಮಾಧುರ್ಯಮ್.

ಜಲದ ವರ್ಣ ಬಿಳುಪು- ಇದು ಇದರ ಸ್ವಾಭಾವಿಕ ವರ್ಣ. ಆದರೆ ಅದು ಇರುವ ಸ್ಥಳದಕಾರಣ ಬದಲಾಗಬಹುದು. ಸ್ಪರ್ಶವು ಶೈತ್ಯ- ತ್ರಿವಿಧ ಸ್ಪರ್ಶದಲ್ಲೂ ಇದರ ಸ್ಪರ್ಶ 'ಶೈತ್ಯ' ಇದಕ್ಕೆ ಸ್ಪರ್ಶಭೇಧ ಏರ್ಪಡುವುದು ಅನ್ಯಸಂಸರ್ಗದಿಂದ. ರಸವು ಮಾಧುರ್ಯ-ಇದು ಇದರ ಸ್ವಾಭಾವಿಕ ರಸ. ವ್ಯತ್ಯಾಸ ಏರ್ಪಡುವುದು ಬೇರೆ ಪದಾರ್ಥಗಳ ಸಂಸರ್ಗದಿಂದ.

## ಸೂ. 62 ಭೂಮಿಕ್ಕು ನಿರಮುಮ್ ರಸಮುಮ್ ಬಹುವಿಧಮ್.

ಭೂಮಿಗೆ ವರ್ಣವೂ, ರಸವೂ ಬಹುವಿಧವಾಗಿರುತ್ತದೆ. ಲೋಕದಲ್ಲಿ ಕಂಡುಬರುವ ನಾನಾವಿಧ ವರ್ಣರಸಗಳಿಗೆಲ್ಲಾ ಇದು ಉತ್ಪತ್ತಿ ಸ್ಥಾನವಾಗಿದೆ.

## ಸೂ. 63 ಸ್ಪರ್ಶಮ್ ಇತುಕ್ಕುಂ ವಾಯುವುಕ್ಕುಂ ಅನುಷ್ಣಾಶೀತಮ್

ಭೂಮಿಗೂ ವಾಯುವಿಗೂ ಸ್ಪರ್ಶವು ಅನುಷ್ಣಾಶೀತವಾಗಿದೆ. ಸ್ಪರ್ಶಭೇಧವು 'ಔಪಾಧಿಕ' ಎಂದರೆ ಇತರ ಸಂಸರ್ಗದಿಂದ ಉಂಟಾಗುತ್ತದೆ.

## ಸೂ. 64 ಇಪ್ಪಡಿ ಅಚಿತ್ ಮೂನ್ನು ಪಡಿ ಪಟ್ಟಿರುಕ್ಕುಮ್.

ಹೀಗೆ ಅಚಿತ್ ಮೂರು ವಿಧವಾಗಿರುತ್ತದೆ. ಎಂಬುದಾಗಿ ಸಿಂಹಾಲೋಕನ ನ್ಯಾಯದಿಂದ ಹಿಂದೆ ಹೇಳಿದ್ದೆಲ್ಲವನ್ನೂ ಕಟಾಕ್ಷಿಸಿ ಅನುಭಾಷಿಸುತ್ತಾ ಅಚಿತ್ ತತ್ತ್ವೋಪನ್ಯಾಸವನ್ನು ಪೂರ್ಣಮಾಡುತ್ತಾರೆ.

ಮೊದಲಿಗೆ **'ಅಚಿತ್ ಜ್ಞಾನ ಶೂನ್ಯಮಾಯ್ ವಿಕಾರಾಸ್ಪದಮಾಯಿರುಕ್ಕುಂ'** ಎಂದು ಅಚಿತ್ತಿನ ಲಕ್ಷಣವನ್ನು ಹೇಳಿ ಅನಂತರ ಅದು ಶುದ್ಧಸತ್ವಾದಿ ಭೇದಗಳಿಂದ ಮೂರು ವಿಧವಾಗಿರುವುದನ್ನು ತಿಳಿಸಿದರು. ಉದ್ದೇಶ ಕ್ರಮದಲ್ಲಿ ಮೊದಲಿಗೆ ಶುದ್ಧಸತ್ವವಾದ ಅಚಿತ್ತಿನ ಪ್ರಕಾರವನ್ನು ಹೇಳಿ, ನಂತರ ಮಿಶ್ರಸತ್ವವಾದ ಅಚಿತ್ತಿನ ವಿಶೇಷಗಳನ್ನು ತಿಳಿಸಿ, ಅದು 24 ವಿಧವಾಗಿರುವಿಕೆಯನ್ನು ಪ್ರತಿಪಾದಿಸಿದರು. ನಂತರ ಅದರಲ್ಲಿ ಮೊದಲು ಇರುವ ತತ್ವವನ್ನೂ, ಆ ತತ್ವದ ಅವಸ್ಥಾವಿಶೇಷವನ್ನೂ, ಅದರಿಂದ ತತ್ವಾಂತರಗಳು ಉತ್ಪತ್ತಿಯಾಗುವಿಕೆಯನ್ನೂ, ಹಾಗೆ ಉತ್ಪತ್ತಿಯಾಗಲು ಕಾರಣ ಆ ತತ್ವದ ಗುಣವೈಷಮ್ಯವೆಂದೂ, ಆ ಗುಣಗಳು ಇಂತಹವುಗಳೆಂದೂ, ಅವುಗಳು ಆ ತತ್ವಗಳಿಗೆ ಅವಿನಾಭೂತವಾದುದೆಂದೂ, ಅವುಗಳ ಅವಸ್ಥಾಭೇದದಿಂದ ಅನುದ್ಭೂತಗಳಾಗಿಯೂ, ಉದ್ಭೂತಗಳಾಗಿಯೂ ಇರುತ್ತವೆಯೆಂದೂ, ಅವುಗಳನ್ನು ಅವುಗಳ ಕಾರ್ಯಗಳಿಂದ ತಿಳಿಯಬೇಕೆಂಬುದನ್ನೂ ಅವುಗಳ ವೈಷಮ್ಯ ಪ್ರಯುಕ್ತ ಮಹದಾದಿ ತತ್ತ್ವೋತ್ಪತ್ತಿ ಕ್ರಮವನ್ನು ತಿಳಿಸಿದರು. ಅನಂತರ ಹೀಗೆ ಉತ್ಪನ್ನಗಳಾದ ತತ್ವಗಳ ಸಮುದಾಯ ಕಾರ್ಯವಾದ ಅಂಡೋತ್ಪತ್ತಿಯನ್ನೂ ಆ ಅಂಡದೊಳಗೆ ಸಮಷ್ಟಿ ಪುರುಷ ಚತುರ್ಮುಖೋತ್ಪತ್ತಿಯನ್ನೂ, ಈಶ್ವರನು ಸಮಷ್ಟಿ ವ್ಯಷ್ಟಿಪದಾರ್ಥಗಳನ್ನು ಅದ್ವಾರಕವಾಗಿಯೂ ಸದ್ವಾರಕವಾಗಿಯೂ ಸೃಷ್ಟಿಸುವ ಕ್ರಮವನ್ನೂ ನಿರೂಪಿಸಿದರು. ಅನಂತರ ಅಂಡಗಳ ಬಹುತ್ವವನ್ನೂ, ಅವುಗಳ ಕಟ್ಟಳೆಗಳನ್ನೂ ಅವುಗಳು ಈಶ್ವರನಿಗೆ ಲೀಲೋಪಕರಣಗಳೆಂಬುದನ್ನೂ, ಅವುಗಳ ಉತ್ಪತ್ತಿ ಪ್ರಕಾರವನ್ನೂ ತಿಳಿಸಿ, ಆಕಾಶಾದಿ ಭೂತಗಳಿಗೆ ಬಿಡಿ ಬಿಡಿಯಾಗಿ ಇರುವ ವಿನಿಯೋಗವನ್ನೂ, ಜ್ಞಾನಕರ್ಮೇಂದ್ರಿಯಗಳಿಗೂ ಉಭಯಾತ್ಮಕವಾದ ಮನಸ್ಸಿಗೂ ಇರುವ ವೃತ್ತಿಭೇದವನ್ನೂ,

## ಸೂ. 57 ತ್ವಗಿಂದ್ರಿಯತ್ತಾಲೇ ತೋತ್ತುಗ್ಗೆಯಾಲೇ ವಾಯು ಅಪ್ರತ್ಯಕ್ಷಮೆನ್ಗಿರವದುವುಮ್ ಶೇರಾದು.

ವಾಯುವೂ ಪ್ರತ್ಯಕ್ಷವಲ್ಲ. ಸ್ಪರ್ಶಅನುಮೇಯ -(ಸ್ಪರ್ಶದಿಂದ ಊಹಿಸಬೇಕಾದುದು) ಎಂದು ಅವರುಗಳು ಹೇಳುತ್ತಾರೆ. ಅದನ್ನು ಈ ಸೂತ್ರದಲ್ಲಿ ನಿರಾಕರಿಸುತ್ತಾರೆ.

ಜ್ಞಾನೇಂದ್ರಿಯಗಳಲ್ಲಿ ಯಾವುದಾದರೂ ಒಂದಕ್ಕೆ ಗೋಚರವಾದರೂ ಅದರ ಪ್ರತ್ಯಕ್ಷತ್ವವು ಸಿದ್ದವಾಗುತ್ತದೆ. ತ್ವಕ್(ಚರ್ಮ) ಇಂದ್ರಿಯಕ್ಕೆ ಗೋಚರವಾಗುವುದರಿಂದ ವಾಯುವು ಅಪ್ರತ್ಯಕ್ಷವಲ್ಲ.

## ಸೂ. 58 ತೇಜಸ್ಸು ಭೌಮಾದಿ ಭೇದತ್ತಾಲೇ ಬಹುವಿಧಮ್.

ಇನ್ನು ಪರಸ್ಪರ ವಿಲಕ್ಷಣ ಸ್ವಭಾವಗಳನ್ನುಳ್ಳ ಭೂತವಿಶೇಷಗಳ ಬಗ್ಗೆ ತಿಳಿಯಬೇಕಾದ ವಿಷಯಗಳನ್ನು ನಿರೂಪಿಸುತ್ತಾರೆ. 'ಭೌಮಮ್ ದಿವ್ಯಮ್ ಔದರ್ಯಮ್ ಆಕರಜಮ್'-ಎಂಬ ಬೇಧದಿಂದ ತೇಜಸ್ಸು ಅನೇಕವಿಧವಾಗಿರುತ್ತದೆ.

ಪಾರ್ಥಿವ ಮಾತ್ರ ಇಂಧನವಾದ ತೇಜಸ್ಸು- ಭೌಮಮ್

ಉದಾ:- ದೀಪಾದಿಗಳು.

ಜಲಮಾತ್ರೇನ್ಧನವಾದದ್ದು-ದಿವ್ಯಮ್

ಉದಾ:-ಆದಿತ್ಯಾದಿಗಳು.

ಪಾರ್ಥಿವಮಾತ್ರೇನ್ಧನವಾದ ತೇಜಸ್ಸು-ಔದರ್ಯಮ್

ಉದಾ:- ಜಾಠರಾಗ್ನಿ.

ನಿರಿನ್ಧನವಾದ ತೇಜಸ್ಸು- ಆಕರಜಮ್.

ಉದಾ:- ಸುವರ್ಣಾದಿಗಳು.

## ಸೂ. 59 ಅದಿಲ್ ಆದಿತ್ಯಾದಿ ತೇಜಸ್ಸು ಸ್ಥಿರಮ್. ದೀಪಾದಿ ತೇಜಸ್ಸು ಅಸ್ಥಿರಮ್.

ಚಿರಕಾಲವಿರುವುದರಿಂದ ಆದಿತ್ಯಾದಿ ತೇಜಸ್ಸು 'ಸ್ಥಿರ ' ಎನಿಸುತ್ತದೆ. ಸ್ವಲ್ಪ ಕಾಲವಿದ್ದು ನಾಶ ಹೊಂದುವುದರಿಂದ ದೀಪಾದಿ ತೇಜಸ್ಸು 'ಅಸ್ಥಿರ' ಎನಿಸುತ್ತದೆ.

## ಸೂ. 60 ತೇಜಸ್ಸುಕ್ಕು ನಿರಮ್ ಶಿವಪ್ಪು, ಸ್ಪರ್ಶಂ ಔಷ್ಣ್ಯಮ್.

'ತೇಜಸ್ಸಿನ ಬಣ್ಣ ಕೆಂಪು' ಎಂಬುದರಿಂದ ತೇಜಃ ಪದಾರ್ಥಗಳಲ್ಲಿನ ವರ್ಣ ಭೇದ ಪದಾರ್ಥಾಂತರದಿಂದ ಏರ್ಪಡುತ್ತದೆ. ಎನ್ನಲಾಗಿದೆ. 'ಸ್ಪರ್ಶವು ಬಿಸಿ' ಎಂಬುದರಿಂದ ಉಷ್ಣಸ್ಪರ್ಶ, ಶೀತಸ್ಪರ್ಶ ಅನುಷ್ಣಾಶೀತಸ್ಪರ್ಶ ಎಂಬ ತ್ರಿವಿಧಸ್ಪರ್ಶದಲ್ಲೂ ತೇಜಸ್ಸಿನ ಸ್ಪರ್ಶ 'ಔಷ್ಣ್ಯ' ಎಂಬುದಾಗಿದೆ. ಆದರೆ ತೇಜಃಪದಾರ್ಥಗಳಾದ ಸುವರ್ಣಾದಿಗಳಲ್ಲಿ ಬಲವತ್ಸಜಾತೀಯ ದ್ರವ್ಯಗಳಿಂದ ಅಭಿಭೂತವಾದ್ದರಿಂದ (ಮುಚ್ಚಲ್ಪಟ್ಟಿರುವುದರಿಂದ) ಈ ಔಷ್ಣ್ಯವು ತೋರುವುದಿಲ್ಲ.

## ಸೂ. 61 ಜಲತ್ತುಕ್ಕು ನಿರಮ್ ವೆಳುಪ್ಪು, ಸ್ಪರ್ಶಮ್ ಶೈತ್ಯಮ್ ರಸಮ್ ಮಾಧುರ್ಯಮ್.

ಜಲದ ವರ್ಣ ಬಿಳುಪು- ಇದು ಇದರ ಸ್ವಾಭಾವಿಕ ವರ್ಣ. ಆದರೆ ಅದು ಇರುವ ಸ್ಥಳದಕಾರಣ ಬದಲಾಗಬಹುದು. ಸ್ಪರ್ಶವು ಶೈತ್ಯ- ತ್ರಿವಿಧ ಸ್ಪರ್ಶದಲ್ಲೂ ಇದರ ಸ್ಪರ್ಶ 'ಶೈತ್ಯ' ಇದಕ್ಕೆ ಸ್ಪರ್ಶಭೇಧ ಏರ್ಪಡುವುದು ಅನ್ಯಸಂಸರ್ಗದಿಂದ. ರಸವು ಮಾಧುರ್ಯ-ಇದು ಇದರ ಸ್ವಾಭಾವಿಕ ರಸ. ವ್ಯತ್ಯಾಸ ಏರ್ಪಡುವುದು ಬೇರೆ ಪದಾರ್ಥಗಳ ಸಂಸರ್ಗದಿಂದ.

## ಸೂ. 62 ಭೂಮಿಕ್ಕು ನಿರಮುಮ್ ರಸಮುಮ್ ಬಹುವಿಧಮ್.

ಭೂಮಿಗೆ ವರ್ಣವೂ, ರಸವೂ ಬಹುವಿಧವಾಗಿರುತ್ತದೆ. ಲೋಕದಲ್ಲಿ ಕಂಡುಬರುವ ನಾನಾವಿಧ ವರ್ಣರಸಗಳಿಗೆಲ್ಲಾ ಇದು ಉತ್ಪತ್ತಿ ಸ್ಥಾನವಾಗಿದೆ.

## ಸೂ. 63 ಸ್ಪರ್ಶಮ್ ಇತುಕ್ಕುಂ ವಾಯುವುಕ್ಕುಂ ಅನುಷ್ಣಾಶೀತಮ್

ಭೂಮಿಗೂ ವಾಯುವಿಗೂ ಸ್ಪರ್ಶವು ಅನುಷ್ಣಾಶೀತವಾಗಿದೆ. ಸ್ಪರ್ಶಭೇಧವು 'ಔಪಾಧಿಕ' ಎಂದರೆ ಇತರ ಸಂಸರ್ಗದಿಂದ ಉಂಟಾಗುತ್ತದೆ.

## ಸೂ. 64 ಇಪ್ಪಡಿ ಅಚಿತ್ ಮೂನ್ನು ಪಡಿ ಪಟ್ಟಿರುಕ್ಕುಮ್.

ಹೀಗೆ ಅಚಿತ್ ಮೂರು ವಿಧವಾಗಿರುತ್ತದೆ. ಎಂಬುದಾಗಿ ಸಿಂಹಾಲೋಕನ ನ್ಯಾಯದಿಂದ ಹಿಂದೆ ಹೇಳಿದ್ದೆಲ್ಲವನ್ನೂ ಕಟಾಕ್ಷಿಸಿ ಅನುಭಾಷಿಸುತ್ತಾ ಅಚಿತ್ ತತ್ತ್ವೋಪನ್ಯಾಸವನ್ನು ಪೂರ್ಣಮಾಡುತ್ತಾರೆ.

ಮೊದಲಿಗೆ **'ಅಚಿತ್ ಜ್ಞಾನ ಶೂನ್ಯಮಾಯ್ ವಿಕಾರಾಸ್ಪದಮಾಯಿರುಕ್ಕುಂ'** ಎಂದು ಅಚಿತ್ತಿನ ಲಕ್ಷಣವನ್ನು ಹೇಳಿ ಅನಂತರ ಅದು ಶುದ್ಧಸತ್ವಾದಿ ಭೇದಗಳಿಂದ ಮೂರು ವಿಧವಾಗಿರುವುದನ್ನು ತಿಳಿಸಿದರು. ಉದ್ದೇಶ ಕ್ರಮದಲ್ಲಿ ಮೊದಲಿಗೆ ಶುದ್ಧಸತ್ವವಾದ ಅಚಿತ್ತಿನ ಪ್ರಕಾರವನ್ನು ಹೇಳಿ, ನಂತರ ಮಿಶ್ರಸತ್ವವಾದ ಅಚಿತ್ತಿನ ವಿಶೇಷಗಳನ್ನು ತಿಳಿಸಿ, ಅದು 24 ವಿಧವಾಗಿರುವಿಕೆಯನ್ನು ಪ್ರತಿಪಾದಿಸಿದರು. ನಂತರ ಆದರಲ್ಲಿ ಮೊದಲು ಇರುವ ತತ್ವವನ್ನೂ, ಆ ತತ್ವದ ಅವಸ್ಥಾ ವಿಶೇಷವನ್ನೂ, ಅದರಿಂದ ತತ್ವಾಂತರಗಳು ಉತ್ಪತ್ತಿಯಾಗುವಿಕೆಯನ್ನೂ, ಹಾಗೆ ಉತ್ಪತ್ತಿಯಾಗಲು ಕಾರಣ ಆ ತತ್ವದ ಗುಣವೈಷಮ್ಯವೆಂದೂ, ಆ ಗುಣಗಳು ಇಂತಹವುಗಳೆಂದೂ, ಅವುಗಳು ಆ ತತ್ವಗಳಿಗೆ ಅವಿನಾಭೂತ ವಾದುದೆಂದೂ, ಅವುಗಳ ಅವಸ್ಥಾಭೇದದಿಂದ ಅನುದ್ಭೂತಗಳಾಗಿಯೂ, ಉದ್ಭೂತಗಳಾಗಿಯೂ ಇರುತ್ತವೆಯೆಂದೂ, ಅವುಗಳನ್ನು ಅವುಗಳ ಕಾರ್ಯಗಳಿಂದ ತಿಳಿಯಬೇಕೆಂಬುದನ್ನೂ ಅವುಗಳ ವೈಷಮ್ಯ ಪ್ರಯುಕ್ತ ಮಹದಾದಿ ತತ್ವೋತ್ಪತ್ತಿ ಕ್ರಮವನ್ನು ತಿಳಿಸಿದರು. ಅನಂತರ ಹೀಗೆ ಉತ್ಪನ್ನಗಳಾದ ತತ್ವಗಳ ಸಮುದಾಯ ಕಾರ್ಯವಾದ ಅಂಡೋತ್ಪತ್ತಿಯನ್ನೂ ಆ ಅಂಡದೊಳಗೆ ಸಮಷ್ಟಿ ಪುರುಷ ಚತುರ್ಮುಖೋತ್ಪತ್ತಿಯನ್ನೂ, ಈಶ್ವರನು ಸಮಷ್ಟಿ ವ್ಯಷ್ಟಿಪದಾರ್ಥಗಳನ್ನು ಅದ್ವಾರಕವಾಗಿಯೂ ಸದ್ವಾರಕವಾಗಿಯೂ ಸೃಷ್ಟಿಸುವ ಕ್ರಮವನ್ನೂ ನಿರೂಪಿಸಿದರು. ಅನಂತರ ಅಂಡಗಳ ಬಹುತ್ವವನ್ನೂ, ಅವುಗಳ ಕಟ್ಟಳೆಗಳನ್ನೂ ಅವುಗಳು ಈಶ್ವರನಿಗೆ ಲೀಲೋಪಕರಣ ಗಳೆಂಬುದನ್ನೂ, ಅವುಗಳ ಉತ್ಪತ್ತಿ ಪ್ರಕಾರವನ್ನೂ ತಿಳಿಸಿ, ಆಕಾಶಾದಿ ಭೂತಗಳಿಗೆ ಬಿಡಿ ಬಿಡಿಯಾಗಿ ಇರುವ ವಿನಿಯೋಗವನ್ನೂ, ಜ್ಞಾನಕರ್ಮೇಂದ್ರಿಯಗಳಿಗೂ ಉಭಯಾತ್ಮಕವಾದ ಮನಸ್ಸಿಗೂ ಇರುವ ವೃತ್ತಿಭೇದವನ್ನೂ,

ಆಕಾಶಾದಿಗಳಿಗೆ ಶಬ್ದಾದಿಗಳು ಪ್ರತಿನಿಯತ ಗುಣಗಳಾಗಿರುವಿಕೆಯನ್ನೂ, ಅವುಗಳಿಗೆ ಗುಣವಿನಿಮಯ ವಿಷ ಕಾರಣವನ್ನೂ, ಗುಣಾಧಿಕ್ಯಕ್ಕೆ ಕಾರಣವನ್ನೂ ಹೇಳಿ ಹೀಗೆ ಮಿಶ್ರಸತ್ತ್ವದ ಪ್ರಕಾರವನ್ನು ವಿ [illegible]ಪಾದಿಸಿದರು. ಅನಂತರ ಇವುಗಳ ಪರಿಣಾಮಗಳಿಗೆ ಕಾರಣವಾಗಿರುವ ಸತ್ತ್ವಶೂನ್ಯವಾದ ಅಚಿತ್ (ಕಾಲ)ವನ್ನು ಸಂಗ್ರಹೇಣ ನಿರೂಪಿಸಿ ಅನಂತರ ಹೀಗೆ ಪೂರ್ವೋಕ್ತವಾದ ಅಚಿದ್ದ್ವಯದ ವಿನಿ ಪ್ರಕಾರವನ್ನೂ ಅಚಿತ್ತ್ರಯದ ಪರಿಣಾಮಗಳನ್ನೂ ತಿಳಿಸಿ, ಇವುಗಳ ಏಕದೇಶಗಳ ಕಾಲಪ [illegible]ಭೇದವನ್ನು ತೋರಿಸಿ ಅನಂತರ ಹಿಂದೆ ಹೇಳಲ್ಪಟ್ಟ ಬಾಹ್ಯಕುದೃಷ್ಟಿಗಳ ವಿಪ್ರತಿಪತ್ತಿ ಪ್ರಕಾರ [illegible] ಅಯುಕ್ತವೆಂಬುದನ್ನೂ ಅನಂತರ ಪರಸ್ಪರ ವಿಲಕ್ಷಣವಾದ ಭೂತ ವಿಶೇಷಗಳಲ್ಲಿ ಜ್ಞಾತವ್ಯಾಂಶಗ [illegible]ಸಿ ಹೀಗೆ ಅಚಿತ್ತ್ರಯದ ಪ್ರಕಾರವನ್ನು ಪೂರ್ಣವಾಗಿ ಪ್ರತಿಪಾದಿಸಲಾಯಿತು.

**। ಅಚಿತ್ ಪ್ರಕರಣಂ ಸಂಪೂರ್ಣಂ ।**

**॥ ಪಿಳ್ಳೈಲೋಕಾಚಾರ್ಯರ್ ತಿರುವಡಿಗಳೇ ಶರಣಮ್॥**

**॥ ಜೀಯರ್ ತಿರುವಡಿಗಳೇ ಶರಣಮ್॥**

# ಈಶ್ವರ ಪ್ರಕರಣಮ್

**ಸೂ. 1 ಈಶ್ವರನ್ ಅಖಿಲಹೇಯ ಪ್ರತ್ಯನೀಕ ಅನಂತ ಜ್ಞಾನಾನಂದೈಕ ಸ್ವರೂಪನಾಯ್, ಜ್ಞಾನಶಕ್ತ್ಯಾದಿ ಕಲ್ಯಾಣಗುಣಗಣ ಭೂಷಿತನಾಯ್, ಸಕಲ ಜಗತ್ ಸರ್ಗ ಸ್ಥಿತಿ ಸಂಹಾರಕರ್ತಾವಾಯ್, 'ಆರ್ತೋಜಿಜ್ಞಾಸುರರ್ಥಾರ್ಥೀಜ್ಞಾನೀ' ಎನ್ಗಿರ ಚತುರ್ವಿಧಪುರುಷರ್‌ಗಳುಕ್ಕುಂ; ಆಶ್ರಯಣೀಯನಾಯ್, ಧರ್ಮಾರ್ಥ ಕಾಮಮೋಕ್ಷಾಖ್ಯ ಚತುರ್ವಿಧಫಲಪ್ರದನಾಯ್, ವಿಲಕ್ಷಣ ವಿಗ್ರಹಯುಕ್ತನಾಯ್, ಲಕ್ಷ್ಮೀ ಭೂಮಿನೀಳಾ ನಾಯಕನಾಯಿರುಕ್ಕುಮ್.**

ಚಿದಚಿದ್ರೂಪವಾದ ತತ್ತ್ವದ್ವಯಗಳ ಸ್ವರೂಪಸ್ವಭಾವ ವಿಶೇಷಗಳನ್ನು ಸುವ್ಯಕ್ತವಾಗಿ ತಿಳಿಸಿದ ನಂತರ **'ಕ್ಷರಾತ್ಮಾನಾವೀಶತೇ ದೇವ ಏಕಃ'** ಎಂಬಂತೆ ಈ ಎರಡೂ ತತ್ತ್ವಗಳಿಗೆ ನಿಯಂತಾವಾದ ಈಶ್ವರನ ಸ್ವರೂಪಾದಿಗಳನ್ನು ಸಂಶಯ ವಿಪರ್ಯಯಗಳಿಲ್ಲದಂತೆ ಅನುಗ್ರಹಿಸತ್ತಾರೆ. ಈಶ್ವರತ್ವವು ತನ್ನ ಅಸಾಧಾರಣ ಧರ್ಮಗಳಿಂದಲೇ ಈಶ್ವರನಿಗೆ ನಿರೂಪಕವಾದ್ದರಿಂದ **'ಈಶ್ವರನ್'** ಎಂದೇ ಆ ವಸ್ತುವನ್ನು ನಿರ್ದೇಶಿಸಿ ಅದರ ಸ್ವರೂಪಾದಿ ವೈಲಕ್ಷಣವನ್ನು ಸಂಗ್ರಹೇಣ ಈ ಪ್ರಥಮ ಸೂತ್ರದಲ್ಲಿ ನಿರೂಪಿಸುತ್ತಾರೆ.

ಪ್ರಪ್ರಥಮವಾಗಿ ಗುಣಾದಿಗಳಿಗೂ ಆಧಾರಭೂತವಾದ ಸ್ವರೂಪ ವೈಲಕ್ಷಣ್ಯವನ್ನು ವಿವರಿಸುತ್ತಾರೆ.

**(ಅಖಿಲಹೇಯ..... ಸ್ವರೂಪನಾಯ್)** -ಸಮಸ್ತ ಹೇಯ ಪ್ರತಿಭಟನಾಗಿ, ತ್ರಿವಿಧಪರಿಚ್ಛೇದರಹಿತನಾಗಿ (ದೇಶ , ಕಾಲ,ವಸ್ತು ಎಂಬ ಮಿತಿಗಳು ಇಲ್ಲದವನಾಗಿ) ಸ್ವಯಂಪ್ರಕಾಶತ್ವ, ಸುಖರೂಪತ್ವವೇ ಮೂರ್ತಿವೆತ್ತ ಸ್ವರೂಪವುಳ್ಳವನಾಗಿದ್ದಾನೆ. ಉಪನಿಷತ್ತುಗಳಲ್ಲಿ **'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ';**[1] **'ವಿಜ್ಞಾನಂ ಬ್ರಹ್ಮ'; 'ಆನಂದೋಬ್ರಹ್ಮ'** ಎನ್ನಲಾಗಿದೆ. **ಅಖಿಲಹೇಯ ಪ್ರತ್ಯನೀಕ ಕಲ್ಯಾಣೈಕತಾನ ಸ್ವೇತರ ಸಮಸ್ತವಸ್ತು ವಿಲಕ್ಷಣ ಅನಂತ ಜ್ಞಾನಾನಂದೈಕ ಸ್ವರೂಪ**[2] ಎಂದೇ ಭಗವದ್ ಶ್ರೀ ರಾಮಾನುಜರೂ ಅನುಗ್ರಹಿಸಿದ್ದಾರೆ. ಇಲ್ಲಿ ಸೂತ್ರಕಾರರೂ ಹೀಗೆಯೇ ತಿಳಿಸಿದ್ದಾರೆ. ಆದರೆ ಕಲ್ಯಾಣೈಕತಾನತ್ವವನ್ನೂ, ಸ್ವೇತರಸಮಸ್ತವಸ್ತು ವಿಲಕ್ಷಣತೆಯನ್ನು ಇಲ್ಲಿನ ಸೂತ್ರಕಾರರು ಹೇಳದೇ ಇರುವುದಕ್ಕೆ ಕಾರಣ, ಹೇಯಪ್ರತ್ಯನೀಕತೆ ಇದ್ದಡೆ ಕಲ್ಯಾಣೈಕತಾನತೆ ಇದ್ದೇ ಇರುವುದೆಂಬುದರಿಂದಲೂ, ಆನಂದರೂಪತ್ವವು ಹೇಳಲ್ಪಟ್ಟಿರುವುದರಿಂದ ತಾನಾಗಿಯೇ ಅದು ಸಿದ್ಧಿಸುತ್ತದೆ ಎಂಬುದರಿಂದಲೂ ಆಗಿದೆ.

ಉಭಯಲಿಂಗ (ಲಿಂಗ ಎಂದರೆ ಗುರುತು, ಚಿಹ್ನೆ. ಅಖಿಲಹೇಯ ಪ್ರತ್ಯನೀಕತ್ವ ಮತ್ತು ಕಲ್ಯಾಣೈಕ ತಾನತ್ವ- ಎಂಬುದು ಎರಡೂ ಈಶ್ವರನ ಗುರುತುಗಳು) ದೊಡನೆ ಕೂಡಿರುವಿಕೆ ಎಂಬುದರಿಂದಲೇ ಅದು ಏರ್ಪಡುತ್ತವೆಯಾದ್ದರಿಂದ ಸ್ವೇತರ ಸಮಸ್ತವಸ್ತುವಿಲಕ್ಷಣತೆಯು ಹೇಳಲ್ಪಟ್ಟಿಲ್ಲ.

**(ಜ್ಞಾನ ಶಕ್ತ್ಯಾದಿ- ಭೂಷಿತನಾಯ್)**- ಆದಿ ಶಬ್ದದಿಂದ ತಮ್ಮ ಶರಣಾಗತಿಗದ್ಯದ ಗುಣಚೂರ್ಣಿಕೆಯಲ್ಲಿ ಭಗವದ್ರಾಮಾನುಜಾಚಾರ್ಯರು ಅನುಗ್ರಹಿಸಿರುವ ಗುಣಗಳೆಲ್ಲವೂ ಹೇಳಲ್ಪಟ್ಟಿದೆ. ಗುಣಗಳಿಗೆ ಕಲ್ಯಾಣತ್ವವೆಂದರೆ -ಆಶ್ರಿತರಿಗೆ ಪರಮಭೋಗ್ಯವಾಗಿರುವಿಕೆ. 'ಗಣ' ವೆಂದರೆ ಸಮೂಹ. 'ಭೂಷಿತನಾಗಿರುವಿಕೆ' -ಎಂದರೆ ಈ ಗುಣಗಳಿಂದ ಅಲಂಕೃತನಾಗಿರುವಿಕೆ. ದಿವ್ಯಮಂಗಳ ವಿಗ್ರಹಕ್ಕೆ ದಿವ್ಯಾಭರಣಗಳಿರುವಂತೆ ದಿವ್ಯಾತ್ಮ ಸ್ವರೂಪಕ್ಕೆ

ಗುಣಗಳು ಔಜ್ವಲ್ಯಕರವಾಗಿರುವಿಕೆ. 'ಯಃ ಸರ್ವಜ್ಞಃ ಸರ್ವವಿತ್;[3] ಪರಾಸ್ಯಶಕ್ತಿಃ ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾಚ ;[4]' 'ಸಮಸ್ತ ಕಲ್ಯಾಣಗುಣಾತ್ಮಕೋಽಸೌ'[5] ಎಂಬ ಗುಣಗಣಯೋಗಗಳು ಹೇ

**(ಸಕಲಜಗತ್........ ಕರ್ತಾವಾಯ್)**- 'ಜಗತ್' ಶಬ್ದದಿಂದ ಕಾರ್ಯವಸ್ತುವು ಹೇಳಲ್ಪಟ್ಟಿತು ಶಬ್ದದಿಂದ- ಸಮಷ್ಟಿ ವ್ಯಷ್ಟಿರೂಪವಾದ ಸಮಸ್ತ ಪದಾರ್ಥಗಳೂ ಹೇಳಲ್ಪಟ್ಟಿತು. 'ಸರ್ಗ' ವೆಂದರೆ ಸೃ ಸದ್ವಾರಕ (ಚತುರ್ಮುಖ ಬ್ರಹ್ಮ ,ಪ್ರಜಾಪತಿಗಳ ಮೂಲಕವಾಗಿ) ಅದ್ವಾರಕ (ನೇರವಾಗಿ ಭಗ ಮಾಡುವುದು) ರೂಪದಿಂದ ಎರಡು ವಿಧವಾಗಿರುತ್ತದೆ.

'ಸ್ಥಿತಿ' ಎಂದರೆ ರಕ್ಷಣೆ. ಇದೂ ಕೂಡ ಬಾಹ್ಯ, ಆಭ್ಯಂತರ ರೂಪೇಣ ಎರಡು ವಿಧವಾಗಿರುತ್ತ

ಸಂಹಾರ- ವೆಂದರೆ ನಾಶಮಾಡುವಿಕೆ. ಇದೂ ಸದ್ವಾರಕ (ರುದ್ರನ ಮೂಲಕ) ಅದ್ವಾರಕ (ಭಗ ನೇರಾಗಿ ಮಾಡುವಿಕೆ) ಎಂದು ಎರಡು ವಿಧವಾಗಿರುತ್ತದೆ. ಇವೆಲ್ಲವನ್ನು ಮುಂದೆ ಈ ವಿಷಯ ಉಪಪಾದಿಸುವ ಸ್ಥಳಗಳಲ್ಲಿ ಮುಂದೆ ಕಾಣಬಹುದು.

**ಯತೋವಾ ಇಮಾನಿ ಭೂತಾನಿ ಜಾಯಂತೇ।**
**ಯೇನ ಜಾತಾನಿ ಜೀವಂತಿ।**
**ಯತ್ಪ್ರಯಂತ್ಯಭಿಸಂವಿಶಂತಿ।**
**ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ।** [6]

ಇತ್ಯಾದಿ ಶ್ರುತಿ ಗಳಿಂದ ಪರಮಾತ್ಮನು ಮಾಡುವ ಜಗತ್ ಸೃಷ್ಟಿ ಸ್ಥಿತಿಲಯಗಳು ಹೇಳಲ್ಪಟ್ಟಿವೆ. ಇದ ಗುಣ ವಿಶಿಷ್ಟನಾದ ಪರಮಾತ್ಮನ ವ್ಯಾಪಾರ ವಿಶೇಷಗಳು ಹೇಳಲ್ಪಟ್ಟಿತು.

**(ಆರ್ತೋ......... ಆಶ್ರಯಣೀಯನಾಯ್)**- 'ಆರ್ತ' ನೆಂದರೆ ಮೊದಲು ತನಗಿದ್ದ ಐಶ್ವರ್ಯ ಕಳೆದುಕೊಂಡು ಅದನ್ನು ಮತ್ತೆ ಪಡೆಯಲು ಇಚ್ಛಿಸುವವನು.

ಜಿಜ್ಞಾಸು - ವೆಂದರೆ ಜ್ಞಾನಸ್ವರೂಪನಾದ ಆತ್ಮನನ್ನು ಅನುಭವಿಸಲು ಆಶಿಸುವವನು.

ಅರ್ಥಾರ್ಥೀ - ನೂತನವಾದ ಹಿಂದೆಂದೂ ಕಾಣದ ಐಶ್ವರ್ಯವನ್ನು ಆಶಿಸುವವನು.

ಜ್ಞಾನೀ - ಪರಮ ಪುರುಷಾರ್ಥವಾದ ಭಗವತ್ಪ್ರಾಪ್ತಿಯನ್ನು ಅಪೇಕ್ಷಿಸುವವನು.

ಆರ್ತಃ - **ಪ್ರತಿಷ್ಠಾಹೀನಃ ಭ್ರಷ್ಟೈಶ್ವರ್ಯಃ ಪುನಸ್ತತ್ಪ್ರಾಪ್ತಿ ಕಾಮಃ**

ಅರ್ಥಾರ್ಥೀ - **ಅಪ್ರಾಪ್ತ ಐಶ್ವರ್ಯತಯಾ ಐಶ್ವರ್ಯಕಾಮಃ, ತಯೋರ್ಮುಖಭೇದಮಾತ್ರಂ।**

ಜಿಜ್ಞಾಸುಃ - **ಪ್ರಕೃತಿ ವಿಯುಕ್ತಾತ್ಮಾ ಸ್ವರೂಪಾವಾಪ್ತೀಚ್ಛುಃ। ಜ್ಞಾನಮೇವಾಸ್ಯ ಸ್ವರೂಪಮಿತಿ ಜಿಜ್ಞಾಸುರಿತ್ಯುಕ್ತ**

ಜ್ಞಾನೀಚ - **ಇತ ಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್। ಇತ್ಯಾದಿನಾ ಅಭಿಹಿತ ಭಗವಚ್ಛೇಷತ್ವೈಕ ರಸ ಸ್ವರೂಪವಿತ್, ಪ್ರಕೃತಿ, ವಿಯುಕ್ತ ಕೇವಲಾತ್ಮಸ್ಯ ಪರ್ಯವಸ್ಯನ್ ಭಗವಂತಂ ಪ್ರೇಪ್ಸುರ್ಭಗವಂತಮೇವ ಪರಮ ಪ್ರಾ ಮನ್ವಾನಃ।**[7] ಎಂದು ಚತುರ್ವಿಧ ಅಧಿಕಾರಿಗಳ ವಿವರವನ್ನು ಶ್ರೀ ಗೀತಾಭಾಷ್ಯದಲ್ಲಿ ಭಗವದ್ರಾಮಾನುಜಾಚಾರ್ಯ ಅನುಗ್ರಹಿಸಿದ್ದಾರೆ. ಇಂತಹ ನಾಲ್ಕು ವಿಧ ಪುರುಷರಿಂದ ಆಶ್ರಯಿಸಲ್ಪಡುವಿಕೆಯನ್ನು

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿ ನೋಽರ್ಜುನ।**
**ಆರ್ತೋ ಜಿಜ್ಞಾಸುರರ್ಥಾಥೀ ಜ್ಞಾನೀ ಚ ಭರತರ್ಷಭ।**[8] ಎಂದೂ,

**ಚತುರ್ವಿಧಾ ಮಮಜನಾ ಭಕ್ತಾ ಏವ ಹಿ ತೇ ಶ್ರುತಾಃ।**

**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀಚೇತಿ ಪೃಥಕ್ ಪೃಥಕ್** [9] ಎಂದೂ ಭಗವಾನನೇ ನುಡಿದಿದ್ದಾನೆ. ಇದರಿಂದ ಜಗತ್ಕಾರಣ ಭೂತನಾದ ಭಗವಂತನ ಸರ್ವ ಸಮಾಶ್ರಯಣೀಯತ್ವವು ಹೇಳಲ್ಪಟ್ಟಿತು.

**(ಧರ್ಮಾರ್ಥ..... ಫಲಪ್ರದನಾಯ್)** - **'ಧರ್ಮಾರ್ಥಕಾಮಮೋಕ್ಷಾಖ್ಯಃ ಪುರುಷಾರ್ಥ ಉದಾಹೃತಃ'**[10] ಎಂದು ಪುರುಷಾರ್ಥಗಳು ನಾಲ್ಕು ವಿಧವಾಗಿರುತ್ತವೆ.

'ಧರ್ಮ' ವೆಂದರೆ ಇಷ್ಟಾಪೂರ್ತಗಳು-

ಇಷ್ಟವೆಂದರೆ- ಯಾಗಾದಿಗಳು.

ಪೂರ್ತ ವೆಂದರೆ- ಖಾತಾದಿ – ಕೆರೆಕಟ್ಟೆ, ಭಾವಿ, ಅನ್ನಛತ್ರ ಮುಂತಾದವುಗಳನ್ನು ಕಟ್ಟಿಸುವ ಸಾಮಾಜಿಕ ಸೇವಾಕಾರ್ಯಗಳು.

ಅರ್ಥವೆಂದರೆ - ಸುವರ್ಣರಜತಾದಿಗಳು.

ಕಾಮವೆಂದರೆ- ಐಹಿಕ, ಪಾರಲೌಕಿಕ ಭೋಗ ಪದಾರ್ಥಾನುಭವಸುಖ.

ಮೋಕ್ಷ ವೆಂದರೆ - ಆತ್ಮಾನುಭವ, ಭಗವದನುಭವಗಳು.

ಇವುಗಳಲ್ಲಿ ಧರ್ಮವು ಉಳಿದ ಪುರುಷಾರ್ಥಗಳನ್ನು ಹೊಂದುವ ಸಾಧನರೂಪದಿಂದ ಪುರುಷಾರ್ಥವಾಗಿದೆ.

ಅರ್ಥವು ಸಾಧನವಾಗಿಯೂ, ಸ್ವಯಂ ಆಗಿಯೂ ಪುರುಷಾರ್ಥವಾಗಿದೆ.

ಕಾಮವೂ, ಮೋಕ್ಷವೂ ಸ್ವಯಂ ಪುರುಷಾರ್ಥವಾಗಿದೆ.

ಈ ರೀತಿಯಾದ ನಾಲ್ಕು ವಿಧ ಫಲಗಳನ್ನು ಅಧಿಕಾರಾನುಗುಣವಾಗಿ ನೀಡುವವನು ಆ ಭಗವಾನ್ ಎಂಬುದರಿಂದ ಸರ್ವಸಮಾಶ್ರಯಣೀಯನಾದ ಭಗವಂತನ ಸಕಲ ಫಲಪ್ರದತ್ವವು ಹೇಳಲ್ಪಟ್ಟಿತು. ಇದನ್ನೇ **'ದೇವೇಂದ್ರ ಸ್ತ್ರಿಭುವನಮರ್ಥಮೇಕಪಿಙ್ಗ ಸ್ಸರ್ವರ್ಧಿಂ ತ್ರಿಭುವನಗಾಂಚ ಕಾರ್ತವೀರ್ಯಃ। ವೈದೇಹಃ ಪರಮಪದಂ ಪ್ರಸಾದ್ಯ ವಿಷ್ಣುಂ ಸಂಪ್ರಾಪ್ತಸ್ಸಕಲ ಫಲ ಪ್ರದೋಹಿ ವಿಷ್ಣುಃ।'**[11] ಎನ್ನಲಾಗಿದೆ.

**(ವಿಲಕ್ಷಣ ವಿಗ್ರಹಯುಕ್ತನಾಯ್)**- ಪರಮಾತ್ಮನ ದಿವ್ಯಮಂಗಳ ವಿಗ್ರಹವು (ರೂಪವು) ಅವನ ಸ್ವರೂಪ ಗುಣಗಳಿಗಿಂತಲೂ ಅಭಿಮತವಾಗಿರುತ್ತದೆ ಎಂದು ಪ್ರಾರಂಭಿಸಿ ಮುಂದೆ ಹೇಳಲ್ಪಡುವ ವೈಲಕ್ಷಣವುಳ್ಳ ವಿಗ್ರಹದೊಡನೆ ಕೂಡಿದವನು ಎನ್ನುತ್ತಾರೆ. **'ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ'**[13] ಇತ್ಯಾದಿ ಶ್ರುತಿ ವಾಕ್ಯಗಳಲ್ಲಿ ವಿಗ್ರಹ ವೈಲಕ್ಷಣ್ಯವು ಪ್ರಸಿದ್ಧವಾಗಿದೆ. **'ಸ್ವಾಭಿಮತಾನು ರೂಪೈಕರೂಪಾಚಿಂತ್ಯ ದಿವ್ಯಾದ್ಭುತ ನಿತ್ಯನಿರವದ್ಯ ನಿರತಿಶಯ ಔಜ್ವಲ್ಯ ಸೌಂದರ್ಯ ಸೌಗಂಧ್ಯ ಸೌಕುಮಾರ್ಯ ಲಾವಣ್ಯ ಯೌವನಾದ್ಯನಂತ ಗುಣನಿಧಿದಿವ್ಯರೂಪಃ'**[13] ಎಂದು ಶ್ರೀರಾಮಾನುಜರೂ ವಿಗ್ರಹ ವೈಲಕ್ಷಣ್ಯವನ್ನು ಕೊಂಡಾಡಿದ್ದಾರೆ. ಇದರಿಂದ ಹಿಂದೆ ಹೇಳಲ್ಪಟ್ಟ ಸ್ವರೂಪಗಳಿಗೆ ಪ್ರಕಾಶಕವಾಗಿ, ಜಗತ್ಕಾರಣತ್ವಕ್ಕೂ, ಸರ್ವಸಮಾಶ್ರಯಣೀಯತ್ವಕ್ಕೂ, ಸರ್ವಫಲಪ್ರದತ್ವಕ್ಕೂ ಏಕಾಂತವಾದ ದಿವ್ಯ ವಿಗ್ರಹಯೋಗವು ಹೇಳಲ್ಪಟ್ಟಿತು.

**(ಲಕ್ಷ್ಮೀ....... ನಾಯಕನಾಯಿರುಕ್ಕುಮ್)**- **'ಉನಕ್ಕೇರ್ಕುಮ್'** ಎಂದು ಆಳ್ವಾರರು ಹಾಡುವಂತಹ ವೈಲಕ್ಷಣವುಳ್ಳವಳಾಗಿ, ಚೇತನರಿಗೆ ಪುರುಷಕಾರ ಭೂತಳಾಗಿ, ಪ್ರಾಪ್ಯಳಾಗಿಯೂ ಇರುವ ಪ್ರಧಾನ ಮಹಿಷಿಯಾದ ಶ್ರೀಮಹಾಲಕ್ಷ್ಮಿಗೂ, ಅವಳೊಡನೆ ಸಾಮ್ಯವುಳ್ಳವರಾಗಿ ಅವಳೊಡನೆ ಕೂಡಿರುವ ಭೂಮಿ, ನೀಳಾ ಎಂಬ

ಇನ್ನಿಬ್ಬರು ಮಹಿಷಿಯರಿಗೂ ನಾಯಕನಾಗಿರುವವನು. 'ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ'[14] ಎಂದೂ ಲಕ್ಷ್ಮೀ ಭೂಮಿಗಳಿಬ್ಬರನ್ನೂ ವೇದ ಪುರುಷನು ಹೇಳಿರುವುದು ನೀಳಾದೇವಿಗೂ ಉಪಲಕ್ಷಣವಾಗಿದೆ. 'ವೈಕುಂಠೇತು ಪರೇ ಲೋಕೇ ಶ್ರೀ ಸಹಾಯೋ ಜನಾರ್ದನಃ। ಉಭಾಭ್ಯಾಂ ಭೂಮಿ ನೀಳಾಭ್ಯಾಂ ಸೇವಿತಃ ಪರಮೇಶ್ವರಃ।'[15] ಎನ್ನಲಾಗಿದೆ. 'ಸ್ವಾಭಿಮತ ನಿತ್ಯನಿರವದ್ಯಾನುರೂಪ ಸ್ವರೂಪ ರೂಪ ಗುಣ ವಿಭವೈಶ್ವರ್ಯ ಶೀಲಾದ್ಯನವಧಿಕಾತಿಶಯ ಅಸಂಖ್ಯೇಯ ಕಲ್ಯಾಣಗುಣಗಣ ಶ್ರೀ ವಲ್ಲಭ। ಏವಂ ಭೂತ ಭೂಮಿ ನೀಳಾನಾಯಕ'[16] ಎಂದು ಆಚಾರ್ಯರಾಮಾನುಜರು ಅನುಗ್ರಹಿಸಿದ್ದಾರೆ. ಇದರಿಂದ ಭಗವಂತನ ಅಪರಿಮಿತ ವಿಗ್ರಹ ವೈಲಕ್ಷಣ್ಯವು ಕಾಡಿನ ಬೆಳಂದಿಂಗಳಿನಂತಾಗದೆ ಅದನ್ನು ಅನುಭವಿಸುವಂತಹ ದೇವಿಯರೊಡಗೂಡಿರುವಿಕೆಯು ಹೇಳಲ್ಪಟ್ಟಿತು.

## ಸೂ. 2 ಅಖಿಲಹೇಯ ಪ್ರತ್ಯನೀಕನಾಕೈಯಾವತು, ತಮಸ್ಸುಕ್ಕು ತೇಜಸ್ಸುಪ್ಪೋಲೇಯುಮ್, ಸರ್ಪತ್ತುಕ್ಕು ಗರುಡನೈಪ್ಪೋಲೇಯುಂ, ವಿಕಾರಾದಿ ದೋಷಂಗಳುಕ್ಕು ಪ್ರತಿಭಟನಾಯಿರುಕ್ಕೈ.

ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಸ್ವರೂಪಾದಿಗಳನ್ನು ಈ ಸೂತ್ರದಿಂದ ಪ್ರಾರಂಭಿಸಿ ಮುಂದಿನ ಸೂತ್ರಗಳಲ್ಲಿ ವಿಸ್ತರೇಣ ಪ್ರತಿಪಾದಿಸುತ್ತಾರೆ. ಅದರಲ್ಲಿ 'ಅಖಿಲ ಹೇಯ ಪ್ರತ್ಯನೀಕತೆ' ಎಂಬುದನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ.

**(ಅಖಿಲಹೇಯ ಪ್ರತ್ಯನೀಕ ನಾಕೈಯಾವತು)** - ಹೇಯವೆಂದರೆ- ದೋಷ.

'ಅಖಿಲ ಹೇಯ' ವೆಂದರೆ - ತ್ರಿವಿಧ ಚೇತನಾಚೇತನ ದೋಷಗಳು.

(ಸೂ. 145. ತ್ರಿವಿಧ ಚೇತನಾಚೇತನ ದೋಷಮುಂ ಈಶ್ವರನುಕ್ಕು ವಾರಾತು' ಎಂಬ ಮುಂದಿನ ಸೂತ್ರದಲ್ಲಿ ಇದು ವಿವರಿಸಲ್ಪಡುತ್ತದೆ.)

**(ತಮಸ್ಸುಕ್ಕು ತೇಜಸ್ಸುಪ್ಪೋಲೇಯುಮ್..... ಪ್ರತಿಭಟನಾಯಿರುಕ್ಕೈ)** ಕತ್ತಲೆಗೆ ಬೆಳಕು ಪ್ರತಿಭಟವಾಗಿರುವಂತೆ, ಹಾವಿಗೆ ಗರುಡ ಪ್ರತಿಭಟನಾಗಿರುವಂತೆ ಈಶ್ವರನು ಹೇಯ ಪ್ರತಿಭಟನಾಗಿದ್ದಾನೆ.

**(ವಿಕಾರಾದಿ ದೋಷಂಗಳ್)** - 'ವಿಕಾರ' ಶಬ್ದದಿಂದ ತ್ರಿವಿಧ ಅಚಿತ್ತಿನ ಪರಿಣಾಮವು ಹೇಳಲ್ಪಟ್ಟಿದೆ. 'ಆದಿ' ಶಬ್ದದಿಂದ ಬದ್ಧ ಚೇತನರ ಅಜ್ಞಾನ ದುಃಖಗಳೂ, ಮುಕ್ತರು ಕೆಸರಲ್ಲಿ ಮುಳುಗಿದ್ದು ಅದು ತೊಳೆಯಲ್ಪಟ್ಟಂತೆ ಪ್ರಕೃತಿ ಯೊಡಗೂಡಿದ್ದು ಅದರಿಂದ ಬಿಡಲ್ಪಟ್ಟ ಆಕಾರವೂ, ನಿತ್ಯರ ಪರಿಚ್ಛಿನ್ನ ಸ್ವರೂಪತ್ವ, ಪಾರತಂತ್ರ್ಯಗಳೂ ಹೇಳಲ್ಪಟ್ಟವು. ಪಾರತಂತ್ರ್ಯವು ದೋಷವಾ ಎಂದರೆ- ಪುರುಷನಿಗೆ ಸ್ತನೋತ್ಪತ್ತಿಯಾದಂತೆ ಸ್ವತಂತ್ರನಾದ ನಿರಂಕುಶ ಪ್ರಭುವಾದ ಪರಮಾತ್ಮನಿಗೆ ಪಾರತಂತ್ರ್ಯವು ದೋಷವಾಗುತ್ತದೆ. ಈ ದೋಷಗಳಿಗೆ ಪ್ರತಿಭಟನಾಗಿರುವಿಕೆ - ಎಂದರೆ ಇವುಗಳಿಗೆ ವಿರುದ್ಧನಾಗಿರುವಿಕೆ. 'ಪ್ರತಿಭಟ' ಎಂಬುದರಿಂದ **'ಆತ್ಮಾ ಜ್ಞಾನಮಯೋಽಮಲಃ'** ಎಂಬಂತೆ ಸ್ವರೂಪನಿಬಂಧನವಾದ ಮಲ ಸಂಬಂಧವಿಲ್ಲದಿದ್ದರೂ, ಉಪಾಧಿನಿಬಂಧನವಾದ (ಒಂದು ಕಾರಣದಿಂದ) ಮಲ ಸಂಬಂಧ ಉಂಟಾಗುವ ಜೀವಾತ್ಮ ಸ್ವರೂಪಕ್ಕಿಂತ ಭಗವತ್ಸ್ವರೂಪ ಭಿನ್ನವಾಗಿರುವಿಕೆ. **'ತದ್ಬ್ರಹ್ಮ ಪರಮಂ ನಿತ್ಯಮಜಮಕ್ಷಯಮವ್ಯಯಮ್। ಏಕಸ್ವರೂಪಂತು ಸದಾ ಹೇಯಾಭಾವಾಚ್ಚ ನಿರ್ಮಲಮ್'**;[1] **'ಸಮಸ್ತಹೇಯರಹಿತಂ ವಿಷ್ಣ್ವಾಖ್ಯಂ ಪರಮಂ ಪದಂ;**[2] **'ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ'**[3] ಎಂದು ಹೇಳಲಾಗಿದೆ.

ಹೇಯ ಪ್ರತ್ಯನೀಕತ್ವವೆಂದರೆ - ಆಶ್ರಿತರ ಹೇಯತೆಯನ್ನು ದೂರಮಾಡುವುದಕ್ಕೆ ಮೂಲವಾದ ಹೇಯ

ಪ್ರತಿಭಟತ್ವ ಎಂಬ ಒಂದು ಅಭಿಪ್ರಾಯವನ್ನು , ಗದ್ಯ ವ್ಯಾಖ್ಯಾನಗಳಲ್ಲಿ ನಂಜೀಯರ್, ಆಚ್ಚಾನ್ ಪಿಳ್ಳೈ ಮೊದಲಾದ ಆಚಾರ್ಯರುಗಳು ಅನುಗ್ರಹಿಸಿರುವುದಾಗಿದೆ.

'ಸರ್ಪಕ್ಕೆ ಗರುಡನಂತೆ' ಎಂಬ ದೃಷ್ಟಾಂತದಿಂದ ಮೇಲಿನ ಅಭಿಪ್ರಾಯವೂ ಇಲ್ಲಿ ಅರ್ಥವಾಗಬಹುದೇ ಎಂದರೆ 'ವಿಕಾರಾದಿ ದೋಷಗಳಿಗೆ ಪ್ರತಿಭಟನಾಗಿರುವಿಕೆ' ಎಂಬುದರಿಂದ ಈ ಸೂತ್ರದಲ್ಲಿ ಅದು ಸೂತ್ರಕಾರರಿಗೆ ವಿವಕ್ಷಿತವಲ್ಲ' ಎಂಬುದು ಸ್ಪಷ್ಟವಾಗುತ್ತದೆ.

## ಸೂ. 3. ಅನಂತನಾಕೈಯಾವತು- ನಿತ್ಯನಾಯ್, ಚೇತನಾಚೇತನಂಗಳುಕ್ಕು ವ್ಯಾಪಕನಾಯ್, ಅಂತರ್ಯಾಮಿಯಾಯಿರುಕ್ಕೈ.

'ಅನಂತತ್ವ' ವೆಂದರೆ - ದೇಶತಃ, ಕಾಲತಃ, ವಸ್ತುತಃ ಅಪರಿಚ್ಛೇದ್ಯನಾಗಿರುವುದು.

(ಒಂದೇ ಪ್ರದೇಶ, ಕಾಲ, ಮತ್ತು ವಸ್ತುವಿನ ಪರಿಮಿತಿಗೆ ಒಳಪಡದಿರುವಿಕೆ) ವಿಭುತ್ವ (ಎಲ್ಲಾ ಕಡೆ ವ್ಯಾಪಿಸಿರುವುದರಿಂದ) ದಿಂದ ದೇಶ ಪರಿಚ್ಛೇದ್ಯರಾಹಿತ್ಯ. ನಿತ್ಯತ್ವ (ಯಾವಾಗಲೂ ಇರುವಿಕೆ)ದಿಂದ ಕಾಲಪರಿಚ್ಛೇದ್ಯರಾಹಿತ್ಯ. ಸ್ವ ವ್ಯತಿರಿಕ್ತ ವಸ್ತುಗಳಿಗೂ ತಾನೇ ಪ್ರಕಾರಿಯಾದ್ದರಿಂದ (ಎಲ್ಲಾ ವಸ್ತುಗಳ ಶರೀರಿಯೂ ತಾನೇ ಆದ್ದರಿಂದ ತನಗೆ ಬೇರೇ ಪ್ರಕಾರವೇ ಇಲ್ಲದಂತೆ ಇರುವವನಾದ್ದರಿಂದಲೂ, ತನ್ನಂತೆಯೇ ಇನ್ನೊಂದು ವಸ್ತು ಇಲ್ಲದ್ದರಿಂದಲೂ) 'ವಸ್ತು ಪರಿಚ್ಛೇದ್ಯರಾಹಿತ್ಯ' ಎಂಬುದನ್ನು (ನಿತ್ಯನಾಯ್....... ಅಂತರ್ಯಾಮಿಯಾಯಿರುಕ್ಕೈ) ಎಂದು ತಿಳಿಸುತ್ತಾರೆ. ನಿತ್ಯನಾದ್ದರಿಂದ - ಈ ಕಾಲದಲ್ಲಿ ಮಾತ್ರವಿರುತ್ತಾನೆ. ಇನ್ನೊಂದು ಕಾಲದಲ್ಲಿ ಇರುವುದಿಲ್ಲ ಎನ್ನುವಂತಿಲ್ಲದೆ ಇರುವುದರಿಂದ ಕಾಲಪರಿಚ್ಛೇದವಿಲ್ಲ. ಸಕಲ ಚೇತನಾಚೇತನಗಳಲ್ಲಿ ವ್ಯಾಪಕನಾಗಿ ವಿಭುವಾಗಿರುವುದರಿಂದ ಈ ದೇಶದಲ್ಲಿ ಇದ್ದಾನೆ. ಇನ್ನೊಂದು ದೇಶದಲ್ಲಿ ಇಲ್ಲ ಎಂಬ ದೇಶ ಪರಿಚ್ಛೇದವಿಲ್ಲ. ಸರ್ವಾಂತರ್ಯಾಮಿಯಾದ್ದರಿಂದ -ಸರ್ವಕ್ಕೂ ತಾನು ಪ್ರಕಾರಿಯಾಗಿ, ತನಗೆ ಬೇರೆ ಪ್ರಕಾರಿ ಇಲ್ಲದಂತೆ ಇರುವುದರಿಂದ, 'ಈ ವಸ್ತುವಿನಂತೆ' ಎಂಬಂತಹ ವಸ್ತು ಪರಿಚ್ಛೇದವಿಲ್ಲ. **'ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ'**[1] ಎಂದೂ **'ಅಂತಃಪ್ರವಿಷ್ಟ ಶಾಸ್ತಾ ಜನಾನಾಂ ಸರ್ವಾತ್ಮಾ'**;[2] **'ಯಸ್ಯಾತ್ಮಾ ಶರೀರಮ್'**; **'ಯಸ್ಯ ಪೃಥಿವೀಶರೀರಂ'**; **'ನತತ್ ಸಮಶ್ಚಾಭ್ಯಧಿ ಕಶ್ಚ ದೃಶ್ಯತೇ'**[3] ಎಂದು ಭಗವಂತನ ಅನಂತತ್ವವು ಶ್ರುತಿಗಳಲ್ಲಿ ವಿವರಿಸಲ್ಪಟ್ಟಿದೆ.

## ಸೂ. 4. ಅಂತರ್ಯಾಮಿಯಾನಾಲ್ ದೋಷಂಗಳ್ ವಾರಾತೋವೆನ್ನಿಲ್.

ಹೀಗೆ ಎಲ್ಲ ವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದರೆ ಆಯಾಯಾ ವಸ್ತುವಿನ ದೋಷ ಈಶ್ವರನಿಗೆ ಏರ್ಪಡುವುದಿಲ್ಲವೇ ಎಂದರೆ;

## ಸೂ. 5. ಶರೀರಗತಂಗಳಾನ ಬಾಲ್ಯಾದಿಗಳ್ ಜೀವತ್ಮಾವುಕ್ಕು ವಾರಾತಾಪ್ಪೋಲೇ ತ್ರಿವಿಧ ಚೇತನ ದೋಷಮುಮೀಶ್ವರನುಕ್ಕುವಾರಾತು.

'ಇಲ್ಲ' ಎನ್ನುತ್ತಾರೆ ಈ ಸೂತ್ರದಲ್ಲಿ. ಈ ಶರೀರವನ್ನು ಅಧಿಷ್ಠಾನವಾಗುಳ್ಳದ್ದಾಗಿ ತನಗೆ ಅಧೀನವಾಗಿ ನಿರ್ವಹಿಸುತ್ತಿದ್ದರೂ ಶರೀರಗತವಾದ ಬಾಲ್ಯ, ಯೌವನಾದಿ ವಿಕಾರಗಳು ಶರೀರದೊಳಗಿರುವ ಜೀವಾತ್ಮನಿಗೆ ಏರ್ಪಡದೆ ಇರುವಂತೆ, ತ್ರಿವಿಧ ಚೇತನಗಳಿಗೂ ಅಂತರ್ಯಾಮಿಯಾಗಿ, ಇವುಗಳನ್ನು ಶರೀರವಾಗುಳ್ಳದ್ದಾಗಿದ್ದರೂ

ಅವುಗಳ ದೋಷಗಳು ಪರಮಾತ್ಮನಿಗೆ ಏರ್ಪಡುವುದಿಲ್ಲ. 'ಅವಿಶೇರುಯಿರಿನುಳ್ಳಾಲಾತುಮೋರ್ ಪತ್ತಿಲಾದ ಪಾವನ್ನೆಯದನ್ನೈಕ್ಕೊಡಿಲವನ್ನೆಯುಮ್ ಕೂಡಳಾಮೇ'[1] ಎಂದಿದ್ದಾರೆ ಆಳ್ವಾರರು. ಶರೀರಿಯಾದ ಜೀವಾತ್ಮನಿಗೆ ಶರೀರಗತವಾದ ಬಾಲ್ಯಾದಿಗಳು ಏರ್ಪಡದಿದ್ದರೂ (ಜೀವಾತ್ಮ) ಶರೀರಿಯಸಂಬಂಧಿ ನಿಬಂಧನವಾಗಿ ದುಃಖ ಅಜ್ಞಾನಾದಿಗಳು ಏರ್ಪಡುವಂತೆ, ಶರೀರಭೂತವಾದ ಇವುಗಳೊಡನೆ ಸಂಬಂಧದಿಂದ ಭಗವಂತನಿಗೂ ಈ ರೀತಿಯಾದ ಕೆಲವು ದೋಷಗಳು ಏರ್ಪಡುವುದಿಲ್ಲವಾ ಎಂದರೆ 'ಏರ್ಪಡುವುದಿಲ್ಲ' ಎನ್ನುತ್ತಾರೆ. ಇದಕ್ಕೆ ಕಾರಣ **'ಪ್ರವೇಶ ಹೇತು ವಿಶೇಷ'**. ಜೀವಾತ್ಮ ನು ಕರ್ಮವೇ ಕಾರಣವಾಗಿ ಶರೀರದಲ್ಲಿ ಪ್ರವೇಶಿಸುತ್ತಾನೆ. ಆದರೆ ಪರಮಾತ್ಮ ಅನುಗ್ರಹವೇ ಕಾರಣವಾಗಿ ಇವುಗಳಲ್ಲಿ ಪ್ರವೇಶಿಸುತ್ತಾನೆ. ಇದೇ **'ಅನಶ್ನನ್ನನ್ಯಃ'**[2] **'ಏಷ ಸರ್ವಭೂತಾಂತರಾತ್ಮಾऽಪಹತಪಾಪ್ಮ '**;[3] **'ವಿಷ್ಣವೇ ಸರ್ವ ಜಿಷ್ಣವೇ'** ಎಂದು ವರ್ಣಿಸಲ್ಪಟ್ಟಿದೆ.

## ಸೂ. 6. ಜ್ಞಾನಾನಂದೈಕ ಸ್ವರೂಪನಾಕೈಯಾವತು - ಆನಂದ ರೂಪ ಜ್ಞಾನನಾಯಿರುಕ್ಕೈ.

'ಜ್ಞಾನಾನಂದಗಳನ್ನೇ ಸ್ವರೂಪವಾಗುಳ್ಳವನಾಗಿರುವಿಕೆ ' ಎಂದು ಶಬ್ದಕ್ಕೆ ಅರ್ಥ ಹೇಳಬೇಕಾಗಿರುವಾಗ ಜ್ಞಾನ, ಆನಂದ ಎಂದು ಇವುಗಳನ್ನು ಬೇರ್ಪಡಿಸಿ ಹೇಳುವಂತಹ ಎರಡು ಅವಸ್ಥೆಯಿಲ್ಲದೆ, ಜ್ಞಾನವೇ ಸ್ವರೂಪವಾಗಿ ಅದು ತಾನೇ ಅನುಕೂಲವಾಗಿರುವಿಕೆಯೇ ಆನಂದವಾದ್ದರಿಂದ 'ಆನಂದ ರೂಪನಾಗಿರುವಿಕೆ' ಎಂದು ತಿಳಿಸಿದ್ದಾರೆ. ಅನುಕೂಲ ಜ್ಞಾನವೇ ಸ್ವರೂಪವಾಗಿರುವಾಗ ಜ್ಞಾನಾನಂದಗಳೆಂದು ಬೇರ್ಪಡಿಸಿ ಹೇಳುವುದು ಎರಡೂ ಉಂಟಾಗುವುದಕ್ಕಾಗಿ' ಎಂದು ತಮ್ಮ ಗದ್ಯವಾಖ್ಯಾನದಲ್ಲಿ ಅನುಗ್ರಹಿಸಿದ್ದಾರೆ.

## ಸೂ. 7. ಅತಾವತು- ಕಟ್ಟಡಂಗವನುಕೂಲಮಾಯ್ ಪ್ರಕಾಶಮುಮಾಯಿರುಕ್ಕೈ.

'ಆನಂದ ರೂಪಜ್ಞಾನನಾಗಿರುವಿಕೆ ' ಎಂಬುದನ್ನು ಉಪಪಾದಿಸುತ್ತಾರೆ.

'ಕಟ್ಟಡಂಗ'- ಎಂದರೆ ಸ್ವರೂಪವುಳ್ಳ ಎಲ್ಲಡೆಯಲ್ಲಿ ಎಂದರ್ಥ. ಇದರಿಂದ ಸ್ವರೂಪಕ್ಕೆ ಅನನುಕೂಲವಾಗಿರುವುದಾಗಲೀ, ಅಪ್ರಕಾಶಕವಾಗಿರುವುದಾಗಲೀ ಸಾಧ್ಯವಿಲ್ಲ. ಎಂಬುದೇ ಜ್ಞಾನಾನಂದೈಕ ಸ್ವರೂಪವೆಂಬುದರಲ್ಲಿನ 'ಏಕ' ಶಬ್ದದ ಅರ್ಥವಾಗಿದೆ. 'ಅನುಕೂಲತ್ವ'- ವೆಂದರೆ ಆಹ್ಲಾದಕರತ್ವ 'ಪ್ರಕಾಶತ್ವ' ವೆಂದರೆ- ಸ್ವಯಂ ಪ್ರಕಾಶತ್ವ **'ಅನನ್ಯಾಧೀನ ಪ್ರಕಾಶತ್ವಾಹ್ಲಾದಕರತ್ವರೂಪ ಜ್ಞಾನಮೇವ ಯಸ್ಯಸ್ವರೂಪಮ್ ಸಹಿ ಜ್ಞಾನಾನಂದೈಕ ಸ್ವರೂಪಃ'**[1] ಎನ್ನಲಾಗಿದೆ.

## ಸೂ. 8. ಇವನುಡೈಯ ಜ್ಞಾನಶಕ್ತ್ಯಾದಿ ಕಲ್ಯಾಣಗುಣಂಗಳ್ ನಿತ್ಯಂಗಳಾಯ್, ನಿಸ್ಸೀಮಂಗಳಾಯ್, ನಿಸ್ಸಂಖ್ಯಂಗಳಾಯ್ ನಿರುಪಾಧಿಕಂಗಳಾಯ್, ನಿರ್ದೋಷಂಗಳಾಯ್, ಸಮಾನಾಧಿಕ ರಹಿತಂಗಳಾಯಿರುಕ್ಕುಮ್.

ಸ್ವರೂಪಾಶ್ರಿತವಾದ ಈಶ್ವರನ ಗುಣಗಳ ವೈಲಕ್ಷಣ್ಯವನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ. **(ಇವನುಡೈಯ.....ಕಲ್ಯಾಣಗುಣಂಗಳ್)** 'ಆದಿ' ಶಬ್ದದಿಂದ - ಬಲ, ಐಶ್ವರ್ಯ, ವೀರ್ಯ, ತೇಜಸ್ಸುಗಳೂ, ವಾತ್ಸಲ್ಯಾದಿಗಳೂ, ಶೌರ್ಯಾದಿಗಳಾದ ಗುಣಗಳೆಲ್ಲವೂ ಹೇಳಲ್ಪಟ್ಟಿತು. ಈ ಗುಣಗಳು 'ನಿತ್ಯಂಗಳಾಯ್' 'ನಿತ್ಯವಾಗಿ' ಇರುತ್ತವೆ ಎಂದರೆ ಉತ್ಪತ್ತಿ, ವಿನಾಶ ರಹಿತವಾದದ್ದು. ಸ್ವರೂಪಾನುಬಂಧಿಗಳಾದ್ದರಿಂದ (ಸ್ವರೂಪದೊಡನೆ

ಕೂಡಿರುವುದರಿಂದ) ಆ ಸ್ವರೂಪ ಎಷ್ಟು ಕಾಲವಿರುತ್ತದೋ ಅಷ್ಟು ಕಾಲವೂ ಇರುತ್ತದೆ. ಸ್ವರೂಪ ನಿತ್ಯವಾದ್ದರಿಂದ ಇವುಗಳೂ ನಿತ್ಯ ಎಂದರ್ಥ.

**'ತ ಇಮೇ ಸತ್ಯಾಃ ಕಾಮಾಃ'**[1] ಎಂದು ಗುಣಗಳ ನಿತ್ಯತ್ವವು ಶ್ರುತಿಸಿದ್ಧವಾಗಿದೆ. **'ಕಾಮ್ಯಂತ ಇತಿ ಕಾಮಾಃ'**[2]**ಕಲ್ಯಾಣಗುಣಾಃ** – ಎಲ್ಲರಿಂದ ಅಪೇಕ್ಷಿಸಲ್ಪಡುವುದರಿಂದ 'ಗುಣ'ಗಳನ್ನು **'ಕಾಮಾಃ'** ಎನ್ನಲಾಗಿದೆ. **'ತ ಇಮೇ ಸತ್ಯಾಃ'** - ಎಂದರೆ 'ನಿತ್ಯಾಃ' ಎಂದರ್ಥ. **'ಈರಿಲವಣ್‌ಪುಹಳ್'**[3] ಎಂದಿದ್ದಾರೆ ಆಳ್ವಾರರು.

**('ನಿಸ್ಸೀಮಂಗಳಾಯ್')** – ಸೀಮಾತೀತವಾಗಿರುವಿಕೆ, ಒಂದೊಂದು ಗುಣವೇ ಎಲ್ಲೆ ಇಲ್ಲದೆ ಇರುವಿಕೆ. **'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'** [4] ಎಂದು 'ಆನಂದ' ಎಂಬ ಒಂದು ಗುಣದ ಎಲ್ಲೆಯನ್ನೇ ಕಾಣಲಾಗದೆ ವೇದ ಹಿಂತಿರುಗಿತು. ಇದು ಕೇವಲ 'ಆನಂದ ' ಎಂಬ ಒಂದು ಗುಣದ ಲಕ್ಷಣ ಮಾತ್ರವಲ್ಲ . ಸಕಲ ಗುಣಗಳೂ ಹೀಗೆಯೇ ಅವಧಿಯಿಲ್ಲದವುಗಳಾಗಿವೆ.

**ಉಪರ್ಯುಪರ್ಯಬ್ಜ ಭುವೋಽಪಿ ಪೂರುಷಾನ್ಪ್ರಕಲ್ಪ್ಯತೇ ಯೇ ಶತಮಿತ್ಯನುಕ್ರಮಾತ್।**
**ಗಿರಸ್ತ್ವದೇಕೈಕ ಗುಣಾವಧೀಪ್ಸಯಾ ಸದಾಸ್ಥಿತಾನೋದ್ಯಮತೋಽತಿ ಶೇರತೇ।** [5]

ಎಂದು ಆಳವಂದಾರ್ ಇದನ್ನೇ ಅನುಗ್ರಹಿಸಿದ್ದಾರೆ. **'ಉಯರ್‌ನಲಂ'**[6] ಎಂದು ಆಳ್ವಾರರೂ ಈ ಗುಣವೈಭವವನ್ನು ಕೊಂಡಾಡಿದ್ದಾರೆ.

**('ನಿಸ್ಸಂಖ್ಯಂಗಳಾಯ್')** ಇಂತಹ ಗುಣಗಳು ಎಣಿಕೆಯಿಲ್ಲದ್ದಷ್ಟು, ಎಣಿಕೆಯನ್ನು ಮೀರಿದ್ದು. **'ಯಥಾರತ್ನಾನಿ ಜಲಧೇಃ ಅಸಂಖ್ಯೇಯಾನಿ ಪುತ್ರಕ। ತಥಾಗುಣಾಹ್ಯನಂತಸ್ಯ ಅಂಸಖ್ಯೇಯಾ ಮಹಾತ್ಮನಃ'**;[7] **'ವರ್ಷಾಯುತೈರ್ಯಸ್ಯ ಗುಣಾನಶಕ್ಯಾವಕ್ತುಂ ಸಮೇತೈರಪಿ ಸರ್ವಲೋಕೈಃ। ಮಹಾತ್ಮಾನಶ್ಶಂಖಚಕ್ರಾಸಿ ಪಾಣೇಃ ವಿಷ್ಣೋರ್ಜಿಷ್ಣೋಃ ವಸುದೇವಾತ್ಮಜಸ್ಯ'**;[8] **'ಚತುರ್ಮುಖಾಯುರ್ಯದಿಕೋಽಪಿವಕ್ತಾ ಭವೇನ್ನರಃ ಕ್ವಾಪಿ ವಿಶುದ್ಧಚೇತಾಃ। ಸತೇ ಗುಣಾನಾಮಯುತೈಕಮಂಶಂವದೇನ್ನವಾ ದೇವವರ ಪ್ರಸೀದ।'**; **'ನಹಿ ತಸ್ಯ ಗುಣಾಸ್ಸರ್ವೇ ಸರ್ವೈರ್‌ಮ್ನುನಿಗಣೈರಪಿ। ವಕ್ತುಂ ಶಕ್ಯಾ ವಿಯುಕ್ತಸ್ಯ ಸತ್ತ್ವಾದ್ಯೈರಖಿಲೈರ್ಗುಣೈಃ।'**[9] ಎನ್ನಲಾಗಿದೆ.

**'ಎಣ್ಣಲ್ ತೊಲ್‌ಪುಹಳ್'**[10] ಎಂದಿದ್ದಾರೆ ಆಳ್ವಾರರು.

**'ಏಷ್ವೇಕಸ್ಯ ಗುಣಸ್ಯ ವಿಪ್ರುಡಪಿವೈ ಲೋಕೋತ್ತರಂ ಸ್ವಾಶ್ರಯಂ ಕುರ್ಯಾತ್ತಾದೃಶ ವೈಭವೈಃ ಅಗಣಿತೈರ್ನಿಸ್ಸೀಮ ಭೂಮಾನ್ವಿತೈಃ। ನಿತ್ಯೈರ್ದಿವ್ಯಗುಣೈಸ್ತತೋಽಧಿಕ ಶುಭತ್ವೈಕಾಸ್ಪದಾತ್ಮಾಶ್ರಯೈರಿದ್ಧಂ ಸುನ್ದರ ಬಾಹುಮಸ್ಮಿಶರಣಂ ಯಾತೋವನಾದ್ರೀಶ್ವರಂ।'**[11] ಎಂಬ ಶ್ಲೋಕದಲ್ಲಿ ಗುಣಗಳ ನಿತ್ಯತ್ವ, ನಿಸ್ಸೀಮತ್ವ, ನಿಸ್ಸಂಖ್ಯತ್ವಗಳನ್ನು ಕೂರತ್ತಾಳ್ವಾನ್ ಅನುಗ್ರಹಿಸಿದ್ದಾರೆ.

**(ನಿರುಪಾಧಿಕಂಗಳಾಯ್)**- ಸ್ವಾಭಾವಿಕವಾಗಿರುವಿಕೆ. ಪರತಂತ್ರವಾದ ವಸ್ತುಗತ ವಾದ್ದರಿಂದ ಸ್ವೋದಯಾದಿಗಳಲ್ಲಿ (ತಾವು ಏರ್ಪಡುವಾಗ ) ಭಗವದಿಚ್ಛೆಯೆಂಬ ಉಪಾಧಿಯನ್ನು ಅಪೇಕ್ಷಿಸುವುದು ಜೀವಾತ್ಮನ ಗುಣಗಳು. ಅಂತಹ ಉಪಾಧಿಯ ಅಪೇಕ್ಷೆಯೇ ಇಲ್ಲವಾದ್ದರಿಂದ ಈಶ್ವರನ ಗುಣಗಳನ್ನು ನಿರುಪಾಧಿಕ ಎನ್ನಲಾಗುತ್ತದೆ. **'ಸ್ವಭಾವತೋ ನಿರಸ್ತನಿಖಿಲ ದೋಷಾನವಧಿಕ ಅತಿಶಯಾಸಂಖ್ಯೇಯ ಕಲ್ಯಾಣಗುಣಗಣಃ ಪುರುಷೋತ್ತಮೋಭಿಧೀಯತೇ'**[12] ಎಂಬ ಶ್ರೀ ಭಾಷ್ಯವಾಕ್ಯಕ್ಕೆ ವಿವರಣೆ ನೀಡುವಾಗ 'ಅನವಧಿಕಾತಿಶಯ ಪದದಿಂದ ನಿತ್ಯ ಸಿದ್ಧರೊಡನೆ ವ್ಯತ್ಯಾಸ ತೋರುತ್ತದೆ' ಎಂಬ ಯೋಜನೇಯನ್ನು ತೋರಿ **'ಅನುಷಕ್ತೇನ ಸ್ವಭಾವತ ಇತಿ ಪದೇನ ವಾ ನಿತ್ಯಸಿದ್ಧ ವ್ಯಾವೃತ್ತಿಃ; ತೇಷಾಂ ತಾದೃಶ ಗುಣಕತ್ವಂ ಹಿ ಭಗವನ್ನಿತ್ಯೇಚ್ಛಾಧೀನಮ್।'**[13] ಎಂಬುದಾಗಿ ಗುಣಗಳ ಸ್ವಾಭಾವಿಕತ್ವವನ್ನು ಶ್ರುತಿ ತಿಳಿಸುತ್ತದೆ. ಈ ಶ್ರುತಿಯಲ್ಲಿ 'ಕ್ರಿಯೆ' -ಎಂಬುದು 'ನಿಯಮನ'ವನ್ನು ಹೇಳುತ್ತದೆ.

'ಪರಾಸ್ಯೇತಿ-ಸ್ವಾಭಾವಿಕತ್ವಮುಕ್ತಂ' ಕ್ರಿಯಾ-ನಿಯಮನಂ:[14] ಎಂದು ಶ್ರುತ ಪ್ರಕಾಶಿಕಾಚಾರ್ಯರು ವ್ಯಾಖ್ಯಾನಿಸಿದ್ದಾರೆ.

(ನಿರ್ದೋಷಂಗಳಾಯ್)- ಹೇಯಗುಣ ಸಂಸರ್ಗವೆಂಬ ದೋಷವಿಲ್ಲದಿರುವಿಕೆ. 'ಅಪಹತಪಾಪ್ಮಾ ವಿಜ್ವರೋ ವಿಮೃತ್ಯುಃ ; ವಿಶೋಕೋ ವಿಜಿಘಿತ್ಸೋ ಅಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪ;[15] ಸತ್ವಾದಯೋನ ಸನ್ತೀಶೇ ಯತ್ರ ಚ ಪ್ರಾಕೃತ ಗುಣಾಃ;[16] ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯ ತೇಜಾಂಸ್ಯಶೇಷತಃ। ಭಗವಚ್ಛಬ್ದವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ'।;[17] 'ತೇಜೋಬಲೈಶ್ವರ್ಯಮಹಾವಬೋಧ ಸುವೀರ್ಯ ಶಕ್ತ್ಯಾದಿಗುಣೈಕ ರಾಶಿಃ। ಪರಃ ಪರಾಣಾಂ ಸಕಲನಯತ್ರ ಕ್ಲೇಶಾದಯಸ್ಸನ್ತಿ ಪರಾವರೇಶೇ।'[18] ಎಂಬಂತೆ ಆಶ್ರಯವು (ಪರಮಾತ್ಮ ಸ್ವರೂಪವು) ಹೇಯ ಪ್ರತ್ಯನೀಕವಾದ್ದರಿಂದ ಇವುಗಳಿಗೂ ಹೇಯಗುಣ ಸಂಸರ್ಗ ದೋಷಕ್ಕೆ ಆಸ್ಪದವೇ ಇಲ್ಲವಾಗಿದೆ.

(ಸಮಾನಾಧಿಕರಹಿತಂಗಳಾಯ್) - ಚೇತನಾಂತರ ಗುಣಗಳನ್ನು ಸಮವಾಗಿಯೂ, ತನಗಿಂತ ಈಶ್ವರನ ಗುಣಗಳನ್ನು ಅಧಿಕವಾಗಿಯೂ ಉಳ್ಳ ಜೀವಾತ್ಮನ ಗುಣಗಳಂತಲ್ಲದೆ, ತನಗೆ ಸಮನಾದದ್ದೂ ಅಧಿಕವಾದದ್ದೂ ಇಲ್ಲದಿರುವಿಕೆ. 'ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ'-ಎಂಬ ಸಮಾಧಿಕ ವಸ್ತುವಿಲ್ಲದಂತಹ ಪರಮಾತ್ಮನನ್ನು ಆಶ್ರಯವಾಗುಳ್ಳವಾದ್ದರಿಂದ ಈ ಗುಣಗಳೂ ಸಮ ಹಾಗೂ ಅಧಿಕ ರಹಿತವಾಗಿದೆ. 'ದೋಷೋಪಧಾವಧಿ ಸಮಾತಿಶಯಾನ ಸಂಖ್ಯಾ ನಿರ್ಲೇಪ ಮಂಗಳ ಗುಣೌಘದುಘೂಷ್ಷಡೇತಾಃ। ಜ್ಞಾನೈಶ್ವರ್ಯಶಕನ ವೀರ್ಯ ಬಲಾರ್ಚಿಷ ಸ್ತ್ವಾಂ ರಂಗೇಶ ಭಾಸ ಇವ ರತ್ನಮನರ್ಘಯಂತಿ।'[19] ಎಂಬ ಶ್ಲೋಕದಲ್ಲಿ ಇವೆಲ್ಲವನ್ನೂ ಪರಾಶರಭಟ್ಟರು ನಿರೂಪಿಸಿದ್ದಾರೆ.

## ಸೂ. 9 ಇವತ್ತಿಲ್ ವಾತ್ಸಲ್ಯಾದಿಗಳುಕ್ಕು ವಿಷಯಮ್ ಅನುಕೂಲರ್; ಶೌರ್ಯಾದಿಗಳುಕ್ಕು ವಿಷಯಮ್ ಪ್ರತಿಕೂಲರ್; ಇವತ್ತುಕ್ಕು ಕ್ಕಾರಣಮಾನ ಜ್ಞಾನಶಕ್ತ್ಯಾದಿಗಳುಕ್ಕು ಎಲ್ಲಾರುಂ ವಿಷಯಮ್.

ಇಂತಹ ಕಲ್ಯಾಣಗುಣಗಳು ಮೂರು ವಿಧವಾಗಿರುವುದರಿಂದ ಆ ಮೂರನ್ನೂ ವಿಭಾಗಿಸಿ ಇಲ್ಲಿ ತಿಳಿಸುತ್ತಾರೆ.

(ಇವತ್ತಿಲ್ ವಾತ್ಸಲ್ಯಾದಿಗಳುಕ್ಕು) - 'ಆದಿ' ಶಬ್ದದಿಂದ- ಸೌಶೀಲ್ಯ ಸೌಲಭ್ಯ ಮಾರ್ದವ ಆರ್ಜವಗಳಾದಿಯಾದ ಗುಣವಿಶೇಷಗಳೆಲ್ಲವನ್ನೂ ಹೇಳಲಾಗಿದೆ.

(ವಿಷಯಮ್ ಅನುಕೂಲರ್) - ಎಂದರೆ ಈ ಗುಣ ವಿಶೇಷಗಳಿಗೆ ಪಾತ್ರರು 'ಅನುಕೂಲರು' ಎಂದರ್ಥ - ಆಶ್ರಿತರು ಎಂದರ್ಥ.

(ಶೌರ್ಯಾದಿಗಳುಕ್ಕು) - 'ಆದಿ' ಶಬ್ದದಿಂದ ಪರಾಕ್ರಮವು ಹೇಳಲ್ಪಟ್ಟಿದೆ. ಈ ಗುಣಗಳಿಗೆ

(ವಿಷಯಂ ಪ್ರತಿಕೂಲರ್)- ಪಾತ್ರರು ಆಶ್ರಿತ ವಿರೋಧಿಗಳು.

ದ್ವಿಷದನ್ನಂ ನ ಭೋಕ್ತವ್ಯಂ ದ್ವಿಷಂತಂ ನೈವ ಭೋಜ್ಯೇತ್।
ಪಾಂಡವಾನಾಂ ದ್ವಿಷಸೇ ರಾಜನ್ ಮಮ ಪ್ರಾಣಾಹಿ ಪಾಂಡಾವಾಃ।[1]

ಎಂಬಂತೆ ಆಶ್ರಿತ ವಿರೋಧಿಗಳನ್ನು ತನಗೆ ಶತ್ರು ಎನ್ನುತ್ತಾನೆ ಭಗವಾನ್.

(ಇವತ್ತುಕ್ಕು....... ಶಕ್ತ್ಯಾದಿಗಳುಕ್ಕು) - ಆದಿ ಶಬ್ದದಿಂದ ಬಲೈಶ್ವರ್ಯ ವೀರ್ಯ ತೇಜಸ್ಸುಗಳನ್ನು ಹೇಳಲಾಗಿದೆ. ವಾತ್ಸಲ್ಯಾದಿಗಳಿಗೂ ಶೌರ್ಯಾದಿಗಳಿಗೂ ಜ್ಞಾನಶಕ್ತ್ಯಾದಿಗಳು ಕಾರಣವಾಗಿವೆ. ಎಂದರೆ 'ಪ್ರಕೃಷ್ಟಂ ವಿಜ್ಞಾನಂ ಬಲಂ ಅತುಲಮೈಶ್ವರ್ಯಮಖಿಲಂ ವಿಮರ್ಯಾದಂ ವೀರ್ಯಂ ವರದಪರಮಾಶಕ್ತಿರಪಿ ಚ। ಪರಂ ತೇಜಶ್ಚೇತಿ ಪ್ರವರ ಗುಣಷಟ್ಕಂ

ಪ್ರಥಮಜಂ ಗಣಾನಾಂ ನಿಸ್ಸೀಮ್ನಾಂ ಗಣನವಿಗುಣಾನಾಂ ಪ್ರಸವಭೂಃ।'[2] ಎಂದೂ 'ಮಂಗಳ ಗುಣೌಘದುಘೂಷ್ಪಡೇತಾಃ।' ಎಂಬಂತೆ ಅವುಗಳಿಗೂ ಮೂಲವಾಗಿರುವಿಕೆ. ಅವುಗಳು ವಸ್ತುವಾದ ಪರಮಾತ್ಮನಿಗೆ ಉತ್ಕರ್ಷಾಪಾದಕವಾದ, ಷಾಡ್ಗುಣ್ಯಾಯತ್ತ ಗುಣಭಾವವಾಗಿರುವಿಕೆ.

(ಎಂಬೆರುಮಾನುಡೈಯ ದಿವ್ಯಾತ್ಮ ಗುಣಂಗಳಾವನ- ಜ್ಞಾನಶಕ್ತ್ಯಾದಿ ಷಡ್ಗುಣಂಗಳುಂ, ಅದಿಲೇ ಪಿರನ್ದ ಸೌಶೀಲ್ಯಾದಿಗಳುಂ) ಎಂಬ ವಾಕ್ಯಕ್ಕೆ ಅರ್ಥ ಬರೆಯುವಾಗ **'ಅತಿಲೇ ಪಿರಕ್ಕೈಯಾವತು' ವಸ್ತೂತ್ಕರ್ಷಾಪಾದಕ ಷಾಡ್ಗುಣಾಯತ್ತಗುಣ ಭಾವಮಾಕ್ಕೈ'** ಎಂದೇ ವಿವರಣೆಯಲ್ಲಿ ಪೆರಿಯವಾಚ್ಚಾನ್ ಪಿಳ್ಳೆಯವರೂ ಅನುಗ್ರಹಿಸಿದ್ದಾರೆ.

ಈ ಆರುಗುಣಗಳಲ್ಲಿ-

**ಅಜಡಂ ಸ್ವಾತ್ಮ ಸಂಬೋಧಿ ನಿತ್ಯಂ ಸರ್ವಾವಗಾಹನಮ್।**
**ಜ್ಞಾನಂ ನಾಮ ಗುಣಂ ಪ್ರಾಹುಃ ಪ್ರಥಮಂ ಗುಣ ಚಿಂತಕಾಃ।**[3]

ಎಂಬಂತೆ ಸರ್ವವಿಷಯ ಪ್ರಕಾಶಕವಾಗಿ , ಸ್ವ ಪ್ರಕಾಶಕವಾಗಿರುವ ಗುಣ ವಿಶೇಷವೇ 'ಜ್ಞಾನ'. 'ಶಕ್ತಿ' ಎಂದರೆ **'ಜಗತ್ಪ್ರಕೃತಿ ಭಾವೋಯಸ್ಸಾ ಶಕ್ತಿಃ ಪರಿಕೀರ್ತಿತಾ'**[4] ಎಂಬ ಜಗತ್ಪ್ರಕೃತಿ ಭಾವವಾಗಬಹುದು, ಅಘಟಿತಘಟನಾ ಸಾಮರ್ಥ್ಯವಾಗಬಹುದು. 'ಬಲ' ಎಂದರೆ -

**ಶ್ರಮ ಹಾನಿಸ್ತು ಯಾತಸ್ಯ ಸತತಂ ಕುರ್ವತೋ ಜಗತ್।**
**ಬಲಂ ನಾಮ ಗುಣಸ್ತಸ್ಯ ಕಥಿತೋ ಗುಣ ಚಿಂತಕೈಃ।**[5]

ಎಂಬ ಜಗತ್ಕಾರಣತ್ವ ಪ್ರಯುಕ್ತವಾದ ಶ್ರಮವಿಲ್ಲದಿರುವಿಕೆ ಎಂದಾಗಬಹುದು, ಅಥವಾ**'ಬಲಂ ಧಾರಣ ಸಾಮರ್ಥ್ಯಂ'** ಸಮಸ್ತವಸ್ತು ಧಾರಣ ಸಾಮರ್ಥ್ಯವಾಗಬಹುದು. 'ಐಶ್ವರ್ಯ' ವೆಂದರೆ

**'ಕರ್ತೃತ್ವಂ ನಾಮಯತ್ತಸ್ಯ ಸ್ವಾತಂತ್ರ್ಯ ಪರಿಬೃಂಹಿತಮ್।**
**ಐಶ್ವರ್ಯಂ ನಾಮ ತಸ್ಪ್ರೋಕ್ತಂ ಗುಣ ತತ್ತ್ವಾರ್ಥ ಚಿಂತಕೈಃ।**[6]

ಎಂಬ ಕರ್ತೃತ್ವ ಲಕ್ಷಣವಾದ ಸ್ವಾಂತಂತ್ರ್ಯವಾಗಬಹುದು ಅಥವಾ ಸಮಸ್ತ ವಸ್ತು ನಿಯಮನ ಸಾಮರ್ಥ್ಯವಾಗಬಹುದು. 'ವೀರ್ಯ' ವೆಂದರೆ -

**ತಸ್ಯೋ ಪಾಧಾನ ಭಾವೇಪಿ ವಿಕಾರ ವಿರಹೋ ಹಿ ಯಃ।**
**ವೀರ್ಯಂ ನಾಮ ಗುಣಸ್ಯೋಯಮಚ್ಯುತ ತ್ವಾಪರಾಹ್ವಯಃ।**[7]

ಎಂದು ಜಗತ್ತಿಗೆ ಉಪದಾನ ಕಾರಣವಾಗಿರುವಾಗಲೂ ಯಾವ ವಿಕಾರವನ್ನೂ ಹೊಂದದೆ ಅವಿಕಾರನಾಗಿರುವಿಕೆ.

'ತೇಜಸ್ಸು ' ಎಂದರೆ **'ಸಹಕಾರ್ಯನ ಪೇಕ್ಷಾಯಾ ತತ್ತೇಜಸ್ಸಮುದಾಹೃತಮ್'**[8] ಎಂಬಂತೆ ಜಗತ್ಸೃಷ್ಟಿ ಮೊದಲಾದ ಯಾವ ಕಾರ್ಯಕ್ಕೂ ಸಹಕಾರಿಯನ್ನು ಅಪೇಕ್ಷಿಸದೇ ಇರುವಿಕೆ ಎಂದಾಗಬಹುದು. ಅಥವಾ ಪರಾಭಿಭವನ ಸಾಮರ್ಥ್ಯವಾಗಬಹುದು. - (ಇತರರನ್ನು ಸೋಲಿಸುವ, ಮಂಕಾಗಿಸುವ ಸಾಮರ್ಥ್ಯ)

**(ಇವತ್ತುಕ್ಕೆಲ್ಲಾಮ್ ವಿಷಯಮಾಕ್ಕೈಯಾವತು)** - ಅನುಕೂಲ ರಕ್ಷಣಾದಿಗಳನ್ನೂ, ಪ್ರತಿಕೂಲ ನಿರಸನಾದಿಗಳನ್ನೂ ಜ್ಞಾನ ಶಕ್ತ್ಯಾದಿ ವಿಶಿಷ್ಟನಾಗಿದ್ದುಕೊಂಡೇ ನಿರ್ವಹಿಸಬೇಕಾದ್ದರಿಂದ ಈ ಗುಣಗಳಿಗೆ ಸರ್ವರೂ ಪಾತ್ರರು ಎಂಬುದಾಗಿದೆ.

ಸೂ. 10 ಜ್ಞಾನಮಜ್ಞರುಕ್ಕು; ಶಕ್ತಿ ಅಶಕ್ತರ್‌ಕ್ಕು; ಕ್ಷಮೈಸಾಪರಾಧರ್‌ಕ್ಕು; ಕೃಪೈ ದುಃಖಿ;
ವಾತ್ಸಲ್ಯಮ್ ಸದೋಷರ್‌ಕ್ಕು; ಶೀಲಮ್ ಮನ್ದರ್‌ಕ್ಕು; ಆರ್ಜವಮ್ ಕುಟಿಲ
ಸೌಹಾರ್ದಮ್ ದುಷ್ಟ ಹೃದಯರ್‌ಕ್ಕು; ಮಾರ್ದವಮ್ ವಿಶ್ಲೇಷಭೀರುಕ್ಕು
ಸೌಲಭ್ಯಂ ಕಾಣವಾಶೈಪ್ಪಟ್ಟವರ್‌ಗಳುಕ್ಕು; ಇಪ್ಪಡಿ ಎಂಗುಂ ಕಣ್ಡುಕೊಳ್ವತು.

ಗುಣಗಳನ್ನು ಮೂರು ಬಗೆಯಾಗಿ ವಿಂಗಡಿಸಿ, ಅವುಗಳ ವಿಷಯವನ್ನು ತಿಳಿಸಿದ್ದಲ್ಲದೆ, ಆ ಗು ಪ್ರತ್ಯೇಕ ವಿಷಯ ನಿಯಮಗಳುಂಟಾದ್ದರಿಂದ ಅದನ್ನು ನಿರೂಪಿಸುವ ಆಕಾಂಕ್ಷೆಯಿಂದ ಹಿಂದೆ ಹೇ ಕೆಲವು ಗುಣಗಳಿಗೆ ಬಿಡಿ ಬಿಡಿಯಾಗಿ ವಿಷಯಗಳನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ.

(ಜ್ಞಾನಮಾವತು) - ಚೇತನನ ಹಿತಾಹಿತ ನಿರೂಪಣಕ್ಕೆ ಒದಗುವ ಗುಣವಾದ್ದರಿಂದ 'ಕ್ವಾಹಂವ ದುರ್ಬುದ್ಧಿಃ ಕ್ವಚಾತ್ಮ ಹಿತ ವೀಕ್ಷಣಮ್। ಯದ್ಧಿತಂ ಮಮ ದೇವೇಶ ತದಾಜ್ಞಾಪಯ ಮಾಧವ।[1] ಎಂಬಂತೆ : ಯಾವುದು ಹಿತ, ಯಾವುದು ಅಹಿತ ಎಂಬುದರಲ್ಲಿ ಅಜ್ಞರಾಗಿರುವವರಿಗೆ ಒದಗುವ ಗುಣ 'ಜ್ಞಾನ'ವಾಗಿ

(ಶಕ್ತಿ ಅಶಕ್ತರ್‌ಕ್ಕು) -'ಶಕ್ತಿ 'ಎಂದರೆ ಅಘಟಿತಘಟನಾ ಸಾಮರ್ಥ್ಯವಾಗಿದೆ. ಇದು ತಮ್ಮ ಇಷ್ಟ ಪ್ರ ಅನಿಷ್ಟ ನಿವಾರಣೆಯಲ್ಲಿ ಅಶಕ್ತರಾಗಿರುವವರ ಕಾರ್ಯಸಿದ್ಧಿಗೆ ಒದಗುವ ಗುಣವಾಗಿದೆ.

(ಕ್ಷಮೆ ಸಾಪರಾಧರ್‌ಕ್ಕು) -'ಕ್ಷಮೆ' ಎಂದರೆ ಅಪರಾಧ ಸಹತ್ವವಾಗಿದೆ. 'ಅಹಮಸ್ಮಿ ಅಪರಾಧಾ ಆಲಯಃ'[2] ಎಂಬಂತಹ ಅಪರಾಧಿಗಳಿಗೆ ಒದಗುವ ಗುಣ 'ಕ್ಷಮೆ'ಯಾಗಿದೆ. 'ಕ್ಷಮಾ ಸಾಪರಾಧೇ ತಾಪಿನ್ಯುಪೇಯಾ ಕಥಂ ಸಾಪರಾಧೇಽ ಪಿದ್ಯಪ್ತೇ ಮಯಿಸ್ಯಾತ್'।[3] ಎನ್ನುತ್ತಾರೆ ಪರಾಶರಭಟ್ಟರು.

(ಕೃಪೈ ದುಃಖಿಕಳುಕ್ಕು) - 'ಕೃಪೆ 'ಎಂದರೆ ಪರದುಃಖ ಅಸಹಿಷ್ಣುತ್ವವಾದ್ದರಿಂದ (ಸಹಿಸದೇ ಇರುತ 'ಆವಾರಾರ್ ತುಣೈಯೆನ್ರಲೈ ನೀಳ್ ಕಡಲುಳುನ್ದುಮ್ ನಾವಾಯ್ ಪೋಲ್ ಪಿರವಿಕ್ಕಡಲುಳ್ ನಿನ್ರು ತುಳಂಗ ಎಂಬ ಮುಂತಾದ ದುಃಖವನ್ನುಳ್ಳವರಿಗೆ ಒದಗುವ ಗುಣ 'ಕೃಪೆ'ಯಾಗಿದೆ. 'ದಯಾ ಪರವ್ಯಸನಹರಾಭವ ಪ್ವ ಸುಖಾಯತೇ ಮಮತದಹಂದಯಾತಿಗಃ'[4] ಎಂದಿದ್ದಾರೆ. ಶ್ರೀ ಪರಾಶರಭಟ್ಟರು.

(ವಾತ್ಸಲ್ಯಮ್ ಸದೋಷರ್‌ಕ್ಕು) - 'ವಾತ್ಸಲ್ಯ'ವೆಂದರೆ - ಆಗ ತಾನೇ ಪ್ರಸವಿಸಿದ ಕರುವಿನ ಮೈಮೇಲೆ ಮಲವನ್ನು ಆದರಿಂದ ಭುಜಿಸುವ ಹಸುವಿನಂತೆ, ಆಶ್ರಿತರ ದೋಷಗಳನ್ನು ಭೋಗ್ಯವಾಗಿ ಸ್ವೀಕರಿಸು ಗುಣವಾದ್ದರಿಂದ ಅವಿದ್ಯಾಕರ್ಮಾದಿದೋಷಗಳೊಡನೆ ಕೂಡಿದವರಾಗಿದ್ದು ತನ್ನನ್ನು ಅನುಸಂಧಾನ ಮಾಡುವವರಿ ಅವಶ್ಯಕವಾದ ಗುಣ 'ವಾತ್ಸಲ್ಯ' ವಾಗಿದೆ.

(ಶೀಲಮ್ ಮಂದರ್‌ಕ್ಕು)- 'ಶೀಲ'ವೆಂದರೆ- ಉತ್ಕೃಷ್ಟರು - (ದೊಡ್ಡವರು) ನಿಕೃಷ್ಟರಾದವರೊಡನೆ (ಕೆಳಗಿನವರು, ಕಿರಿಯರು) ಯಾವ ಭೇದವೂ ಇಲ್ಲದೆ ಬೆರೆಯತಕ್ಕ ಸ್ವಭಾವವಾದ್ದರಿಂದ ತಮ್ಮ ನೈಚ್ಯವನ್ನು ಅನುಸಂಧಾನ ಮಾಡುವವರಿಗೆ ಉಪಯುಕ್ತವಾಗಿರುವ ಗುಣ 'ಶೀಲ' ಎನ್ನಲಾಗಿದೆ.

(ಆರ್ಜವಮ್ ಕುಟಿಲರ್‌ಕ್ಕು) - 'ಆರ್ಜವ'ವೆಂದರೆ - ತ್ರಿಕರಣ (ಕಾಯೇನ, ವಾಚಾ, ಮನಸಾ)ಗಳಿಂದಲೂ ಕಪಟವಿಲ್ಲದ್ದಾದ್ದರಿಂದ, ತಮ್ಮ ತ್ರಿಕರಣಗಳಲ್ಲಿ ಕಪಟವನ್ನು ಭಾವಿಸುವವರಿಗೆ ಒದಗುವ ಗುಣ ಆರ್ಜವವಾಗಿದೆ.

(ಸೌಹಾರ್ದಂ ದುಷ್ಟಹೃದಯರ್‌ಕ್ಕು) - 'ಸೌಹಾರ್ದ'ವೆಂದರೆ ಸದಾಕಾಲ ಒಳಿತನ್ನೇ ಚಿಂತಿಸುವ ಗುಣವಾದ್ದರಿಂದ, ಸರ್ವದಾ ಕೆಡುಕನ್ನೇ ಚಿಂತಿಸುವವರಾಗಿ ತಮ್ಮನ್ನು ಭಾವಿಸುವರಿಗೆ ಉಪಯುಕ್ತವಾದ ಗುಣವಾಗಿದೆ.

(ಮಾರ್ದವಮ್ ವಿಶ್ಲೇಷ ಭೀರುಕ್ಕಳುಕ್ಕು) - 'ಮಾರ್ದವ'ವೆಂದರೆ ಆಶ್ರಿತರ ವಿರಹವನ್ನು ಸಹಿಸಲಾರದ ಮೃದುಗುಣವಾದ್ದರಿಂದ ಪರಮಾತ್ಮನ ವಿರಹವನ್ನು ನೆನೆದು ಭಯಪಡುವವರಿಗೆ ಒದಗುವ ಗುಣವಾಗಿದೆ.

(ಸೌಲಭ್ಯಮ್ ಕಾಣ ಆಶೈಪ್ಪಟ್ಟವರ್‌ಕಳುಕ್ಕು) - 'ಸೌಲಭ್ಯ'ವೆಂದರೆ- ಅತೀಂದ್ರಿಯವಾದ ತನ್ನ ದಿವ್ಯಮಂಗಳ ರೂಪವನ್ನು ಕಣ್ಣಿಗೆ ತೋರಿಸುವಂತಹ ಗುಣವಾದ್ದರಿಂದ, ತನ್ನನ್ನು ಕಾಣಲು ಆಸೆಪಡುವವರಿಗೆ ಉಪಯುಕ್ತವಾದ ಗುಣವಾಗಿದೆ.

ಇದರಿಂದ, ಭಗವಂತನ ಜ್ಞಾನದಲ್ಲಿ ಅಪೇಕ್ಷೆ -ತಮ್ಮ ತಮ್ಮ ಹಿತ ಅಹಿತಗಳಲ್ಲಿ ಅರಿವಿಲ್ಲದವರಿಗಾದ್ದರಿಂದ ಅಜ್ಞರಿಗೆ ಜ್ಞಾನದಲ್ಲಿ ಅಪೇಕ್ಷೆ; ತಮ್ಮ ಇಷ್ಟಪ್ರಾಪ್ತಿ ಮತ್ತು ಅನಿಷ್ಟನಿವೃತ್ತಿಗಳಲ್ಲಿ ಅಶಕ್ತರಾದವರಿಗಾದ್ದರಿಂದ 'ಶಕ್ತಿ'ಆಶಕ್ತರಿಗೆ; ಕ್ಷಮೆಯಲ್ಲಿ ಅಪೇಕ್ಷೆ ಅಪರಾಧ ಮಾಡಿದವರಿಗಾದ್ದರಿಂದ 'ಕ್ಷಮೆ ಸಾಪರಾಧರಿಗೆ'; 'ಐಯ್ಯೋ' ಎಂದು ಕನಿಕರಿಸಬೇಕಾದದ್ದು ನೋವಿರುವವರಿಗಾದ್ದರಿಂದ 'ಕೃಪೆ' ದುಃಖಿಗಳಿಗೆ; ದೋಷವನ್ನು ಭೋಗ್ಯವಾಗಿ ಭಾವಿಸಬೇಕಾಗಿರುವುದು ದೋಷಿಗಳಾದವರಿಗಾದ್ದರಿಂದ 'ವಾತ್ಸಲ್ಯ' ವು ದೋಷಿಗಳಿಗೆ ; ನೈಚ್ಯವನ್ನು ಪರಿಗಣಿಸದೆ ಬೆರೆಯಬೇಕಾಗಿರುವುದು ನೀಚರ ವಿಷಯದಲ್ಲಾದ್ದರಿಂದ 'ಶೀಲ'ವು ಮಂದರಿಗಾಗಿ ; ಕರಣತ್ರಯಗಳಿಂದಲೂ ನಿಷ್ಕಪಟಿಯಾಗಿರಬೇಕಾದ್ದು ಕಪಟಿಗಳ ವಿಷಯದಲ್ಲಾದ್ದರಿಂದ 'ಅರ್ಜವ' ವುಕುಟಿಲರಿಗೆ; ಯಾವಾಗಲೂ ಒಳಿತನ್ನು ಚಿಂತಿಸುವಿಕೆ ಕೆಡುಕನ್ನೇ ಚಿಂತಿಸುವ ಕೆಟ್ಟವರ ವಿಷಯದಲ್ಲಾದ್ದರಿಂದ 'ಸೌಹಾರ್ದ'ದುಷ್ಟಹೃದಯರಿಗೆ; ವಿರಹವನ್ನು ಸಹಿಸಲಾರದ ಮೃದುತ್ವ ಬೇಕಾಗಿರುವುದು ವಿರಹದಿಂದ ಅಂಜುವವರಿಗಾದ್ದರಿಂದ 'ಮಾರ್ದವ'ವಿಶ್ಲೇಷಭೀರುಗಳಿಗೆ; ಅತೀಂದ್ರಿಯವಾದ ದಿವ್ಯಮಂಗಳ ವಿಗ್ರಹವು ಕಣ್ಣಿಗೆ ಕಾಣಬೇಕಾಗಿರುವುದು ಅದನ್ನು ಕಾಣಲು ಆಸೆಪಡುವವರಿಗಾದ್ದರಿಂದ 'ಸೌಲಭ್ಯ'ವು ಕಾಣಲಾಸೆಪಡುವವರಿಗೆ; ಎಂಬುದಾಗಿ ಗುಣಗಳ ವಿಷಯ ಪ್ರತಿನಿಯತತ್ವವನ್ನು ನಿರೂಪಿಸಲಾಯಿತು.

(ಇಪ್ಪಡಿ ಎಂಗುಂ ಕಂಡುಕೊಳ್ವತು) - ಇದುವರೆವಿಗೂ ಹೇಳಲ್ಪಟ್ಟ ಪ್ರಕಾರದಲ್ಲಿಯೇ ಹೇಳಲ್ಪಡದೇ ಇರುವ ಗುಣಗಳೆಲ್ಲಕ್ಕೂ ಪ್ರತ್ಯೇಕ ವಿಷಯಗಳೆಲ್ಲವನ್ನೂ ತಿಳಿಯಬೇಕು.

**ಸೂ. 11 ಇಪ್ಪಡಿ, ಈಶ್ವರನ್ ಕಲ್ಯಾಣಗುಣಂಗಳೋಡೇಕೂಡಿ ಇರುಕ್ಕೈಯಾಲೇ, ಪಿರರ್ ನೋವು ಕಂಡಾಲ್ 'ಐಯೋ' ಎನ್ನಿರಂಗಿ, ಅವರ್‌ಕಳುಕ್ಕೈಪ್ಪೋದುಮ್‌ಮೊಕ್ಕ ನನ್ಮೈಯೈಚ್ಚಿನ್ದಿತ್ತು, ತನಕ್ಕೇಯಾಯಿರುತ್ತಲ್, ತನಕ್ಕುಂ ಪಿರರ್‌ಕ್ಕುಂ ಪೊದುವಾಯಿರುತ್ತಲ್ ಶೆಯ್ಯಾದೇ, ನಿಲಾ, ತೆನ್ರಲ್, ಚಂದನಮ್, ತಣ್ಣೀರ್ ಪೋಲೇ ಪಿರರ್ಕ್ಕೇಯಾಯ್, ತನ್ನೈ ಆಶ್ರಯಿತ್ತವರ್‌ಕಳ್‌ಪಕ್ಕಲ್ ಜನ್ಮಜ್ಞಾನವೃತ್ತಂಗಳಾಲುಂಡಾನ ನಿಕರ್ಷಮ್‌ಪಾರಾತೇ, ತಾಂಗಳುಂ ಪಿರರುಂ ತಂಜಮಲ್ಲಾತಪೋದು ತಾನ್ ತಂಜಮಾಯ್, ಸಾಂದೀಪಿನೀ ಪುತ್ರನೈಯುಂ, ವೈದಿಕಪುತ್ರರ್‌ಗಳೈಯುಂ ಮೀಟ್ಟುಕ್ಕೊಣ್ಡು ವಂದಾಪ್ಪೋಲೇ ಅರಿಯನಶೆಯ್ಯುದುಮ್, ಅವರ್‌ಗಳ್ ಅಪೇಕ್ಷಿತಂಗಳೈ ತಲೈಕ್ಕಟ್ಟಿಯುಮ್, ಅವರ್‌ಕಳುಕ್ಕು ಧ್ರುವಪದಂ**

**ಪ್ಪೋಲೇ, ಪಣ್ಡಿಲ್ಲಾತವತ್ತೈಯುಂ ಉಣ್ಡಾಕ್ಕಿಯುಂ, ತನ್ನಾದ್ದಮ್ ಸ್ವಮ್, ತ ವಿನಿಯೋಗಮ್ ಕೊಣ್ಡಾಪ್ಪೋಲೇಯಿರುಕ್ಕ, ತನ್ನೈಯುಂ ತನ್ನುಡೈಮೈಯೈ ವಳಂಗಿ, ಅವರ್‌ಗಳ್ ಕಾರ್ಯಂ ತಲೈಕಟ್ಟಿನಾಲ್ ತಾನ್ ಕೃತಕೃತ್ಯನಾಯ್, ತಾ ನನ್ನೈಗಳೊನ್ನೈಯುಂ ನಿನೈಯಾತೇ, ಅವರ್‌ಗಳ್ ಶೆಯ್ದುಸುಕೃತಲವತ್ತೈಯೇ ಅನಾದಿಕಾಲಂ ವಾಸಿತಂಗಳಾನ ರಸಂಗಳೈ ಮರಕ್ಕುಂಪಡಿ ಎಲ್ಲಾ ದಶೈ ಇನಿಯನಾಯ್, ಭಾರ್ಯಾಪುತ್ರರ್‌ಗಳ್ ಕುತ್ತಂಗಳೈ ಕಾಣಾಕ್ಕಣ್ಣಿಟ್ಟ ಪುರುಷನೈಪ್ಪೋಲೇ, ಅವರ್‌ಗಳ್ ಕುತ್ತಂಗಳೈ ತಿರುವುಳ್ಳತ್ತಾಲೇ ನಿನೈ ಕುತ್ತಂಗಳೈ ಪೆರಿಯಪಿರಾಟ್ಟಿಯಾರ್ ಕಾಟ್ಟಿನಾಲುಂ ಅವಳೋಡೇ ಮರು ತ್ತಿಣ್ಣಿಯನಾಯ್ ನಿನ್ರುರಕ್ಷಿತ್ತು , ಕಾಮಿನಿಯುಡೈಯ ಅಳುಕ್ಕ ಕಾಮುಕನೈಪ್ಪೋಲೇ, ಅವರ್‌ಗಳ್ ದೋಷಂಗಳೈಭೋಗ್ಯಮಾಗಕ್ಕೊ ಅವರ್‌ಗಳ್ ಪಕ್ಕಲ್ ಕರಣತ್ರಯತ್ತಾಲುಂ ಶೆವ್ವಿಯಾನಾಯ್ ಪಿರಿ ಅವರ್‌ಗಳ್ ವ್ಯಸನಮ್ ಕುಳಪ್ಪಡಿಯೆನ್ನುಂಪಡಿ ತಾನ್ ಈಡುಪಟ್ಟು, ಅವರ್ ಪ್ಪಾಂಗಾಹ ತನ್ನೈ ತಾಳವಿಟ್ಟು ,ಅವರ್‌ಗಳುಕ್ಕು ಕಟ್ಟವುಂ ಅಡಿಕ್ಕವುಮಾ ಎಳಿಯನಾಯ್, ಅನ್ರೀನ್ರ ಕನ್ರುಕ್ಕು ತಾಯ್ ಇರಂಗಿ, ಮುನ್ನಣೈಕ್ಕನ್ನೈ ಪುಲ್ಲಿಡವಂದವರ್‌ಕಳೈಯುಮ್, ಕೊಮ್ಬಿಲುಮ್ ಕುಳಂಬಿಲುಂ ಏರ್ಕುಮಾಪ್ಪೋ ಪೆರಿಯಪಿರಾಟ್ಟಿಯಾರೈಯುಮ್, ಸೂರಿಕಳೈಯುಂ ವಿಟ್ಟು ಸ್ನೇ ಕ್ಕೊಣ್ಡುಪೋರುಮ್.**

ಈ ರೀತಿಯಾಗಿ ಗುಣವಿಶಿಷ್ಟನಾದ್ದರಿಂದ ಆ ಭಗವಂತನು ಆಶ್ರಿತರ ವಿಷಯದಲ್ಲಿ ನಡೆದುಕೊ ಪ್ರಕಾರಗಳನ್ನು ಈ ಸೂತ್ರದಲ್ಲಿ ವಿಸ್ತರೇಣ ಪ್ರತಿಪಾದಿಸಲಾಗಿದೆ.

**(ಇಪ್ಪಡಿ)** - ಎಂಬುದರಿಂದ ಹಿಂದೆ ಹೇಳಲ್ಪಟ್ಟ ಗುಣಯೋಗವನ್ನು ಪರಾಮರ್ಶಿಸಿದ್ದಾರೆ.

**(ಈಶ್ವರನ್...... ಇರುಕ್ಕೈಯಾಲೇ)** - ಈ ಗುಣಯೋಗವನ್ನು ಕಾರಣವಾಗಿ ಹೇಳಿದ್ದು ಮು ಹೇಳಲ್ಪಡುವ ನಡೆವಳಿಕೆಗಳಿಗೆಲ್ಲಾ ಒಂದೊಂದು ಗುಣದ ಕಾರ್ಯವೆಂದು ನಿರೂಪಿಸುವುದಕ್ಕಾಗಿ.

**(ಪಿರರ್....... ಇರಂಗಿ)** - ಇದು 'ಕೃಪಾ' ಗುಣದ ಕಾರ್ಯವಾಗಿದೆ. ಮತ್ತೊಬ್ಬರ ದುಃಖವನ್ನು ಕಂ 'ಐಯೋ' ಎಂದು ಮರುಗುವುದು 'ಪರದುಃಖ ಅಸಹಿಷ್ಣುವಾದ್ದರಿಂದ'.

**(ಅವರ್....... ಚಿನ್ದಿತ್ತು)** - ಇದು 'ಸೌಹಾರ್ದ' ಗುಣದ ಕಾರ್ಯ. 'ಎಪ್ಪೋದು ಮೊಕ್ಕ'- ಯಾವಾಗಲ ಸದಾಕಾಲವೂ ಎಂಬುದರಿಂದ ಚೇತನನು ಅರಿತಕಾಲ, ಅರಿಯದಕಾಲವೆಂಬ ಭೇಧವಿಲ್ಲದೆ ಸದಾಕಾಲದ ಒಳಿತನ್ನೇ ಬಯಸುವವನಾಗಿರುವುದು. ಸೌಹಾರ್ದದಿಂದಲೇ ಆಗಿದೆ.

**(ತನಕ್ಕೇ...... ಪಿರರ್ಕ್ಕೇಯಾಯ್)** - ಇತು ಆಶ್ರಿತ ಪಾರತಂತ್ರ್ಯವೆಂಬ ಗುಣದ ಕಾರ್ಯವಾಗಿದೆ. ಸ್ವಾರ್ಥ ಪರನಾಗೇ ಇರುವಿಕೆ, ಸ್ವಾರ್ಥ ಪರಾರ್ಥಎರಡೂ ಉಳ್ಳವನಾಗಿರುವಿಕೆ ಎಂಬಂತಲ್ಲದೆ ಬೆಳದಿಂಗಳು, ತಂಪುಗಾಳಿ, ಗಂಧ, ಶೀತಲವಾದ ತೀರ್ಥಗಳೋಪಾದಿ ಅನ್ಯರಿಗಾಗೇ ಮೀಸಲಾಗಿರುವಿಕೆ ಎಂಬುದು ಪಾರತಂತ್ರ್ಯದಿಂದಲೇ ಆಗಿದೆ.

**(ತನ್ನೈ.....ನಿಕರ್ಷಂಪಾರಾದೇ)** - ಇದು ಸಾಮ್ಯಗುಣದ ಕಾರ್ಯವಾಗಿದೆ. ಆಶ್ರಿತರ ವಿಷಯದಲ್ಲಿ ಅವರ ಜನ್ಮಾದಿಗಳಿಂದುಂಟಾದ ಕೀಳ್ಮೆಯನ್ನು ಪರಿಗಣಿಸದೆ ಅವರೊಡನೆ ಒಂದಾಗಿ ಬೆರೆಯುವಿಕೆ. ಎಂಬುದು **'ಸಮೋಹಂ ಸರ್ವಭೂತೇಷು ನಮೇ ದ್ವೇಷ್ಯೋಸ್ತಿ ನ ಪ್ರಿಯಃ'**[1] ಎಂಬಂತೆ ಜನ್ಮಾದಿಗಳಿಂದುಂಟಾದ ಉತ್ಕರ್ಷ ಅಪಕರ್ಷಗಳ ಭೇದವಿಲ್ಲದೆ ಆಶ್ರಿತರ ವಿಷಯದಲ್ಲಿ ಸಮನಾಗಿರುವಿಕೆ ಎಂಬ ಸ್ವಭಾವದಿಂದಲೇ ಆಗಿದೆ.

**(ತಾಂಗಳುಂ..... ತಜ್ಞಮಾಯ್)** - ಇದು ಅಶರಣ್ಯಶರಣ್ಯತ್ವ ಕಾರ್ಯವಾಗಿದೆ. ತಮಗೆ ತಾವೇ ರಕ್ಷಕರಲ್ಲ ಬೇರೆಯವರೂ ತನಗೆ ರಕ್ಷಕರಲ್ಲ ಎಂದು ತಮ್ಮೆಲ್ಲ ಪ್ರವೃತ್ತಿಯನ್ನೂ ಬಿಟ್ಟವರಿಗೆ ಭಗವಂತನು ರಕ್ಷಕನಾಗುವುದು. **'ಪತ್ತಿಲಾರ್ ಪತ್ತ ನಿನ್ರಾನ್'** ಎಂಬ ಗುಣದಿಂದಲೇ ಆಗಿದೆ.

**(ಸಾಂದೀಪಿನಿ ....... ತಲೈಕ್ಕಟ್ಟಿಯುಮ್)** - ಇದು 'ಸತ್ಯಕಾಮತ್ವ' ಎಂಬ ಗುಣದ ಕಾರ್ಯವಾಗಿದೆ.

**'ಮಾತವತೋನ್ ಪುತ್ತಿರನ್ ಪೋಯ್ ಮರಿಕಡಲ್ವಾಯ್ ಮಾಣ್ಡಾನ್ನೈ'**[2] ಎಂಬಂತೆ ಬಹುಹಿಂದೆ ಸಮುದ್ರದವು ಅಡಗಿಸಿಕೊಂಡ ಸಾಂದೀಪಿನಿಯ ಪುತ್ರರನ್ನೂ; **'ಪಿರಪ್ಪಕತ್ತೇ ಮಾಣ್ಡೊಳಿನ್ದ ಪಿಳ್ಳೈಕಳೈ ನಾಲ್ವರೈಯುಮ್'** [3] ಎಂಬಂತೆ ಹುಟ್ಟುವಾಗಲೇ, **'ಎನ್ನುಡೈ ಮನೈವಿ ಕಾತಲ್ ಮಕ್ಕಳೈ ಪಯಿತ್ತಲುಮ್ ಕಾಣಾಳ್'**[4]ಎಂಬಂತೆ ಹೆತ್ತತಾಯಿ ಕೂಡ ಕಾಣಲಾಗದಂತೆ ನಾಲ್ಕು ಶಿಶುಗಳನ್ನು ದೇವಿಯರು ತಮ್ಮ ಸ್ವಾತಂತ್ರ್ಯದಿಂದ ಕೊಂಡೊಯ್ಯಲು **'ತಪ್ಪಿನ ಪಿಳ್ಳೈಕಳೈ'** ಎಂಬಂತೆ ಕೈ ತಪ್ಪಿಹೋಗಿ ತನ್ನ ಜಾಜ್ವಲ್ಯಮಾನವಾದ ಲೋಕದಲ್ಲಿದ್ದ ವೈದಿಕ ಪುತ್ರರನ್ನೂ **'ಉರುವುರುವೇ ಕೊಡುತ್ತಾನ್'** ಎಂಬಂತೆಯೂ **'ಉಡುಲೊಡುಜ್ಗೊಣ್ಡು ಕೊಡುತ್ತವನ್ನೈ'** ಎಂದೂ ಹೇಳುವಂತೆ ಆಯಾಯಾ ರೂಪದಿಂದಲೇ ಮರಳಿತಂದಂತೆ, ಕಷ್ಟಸಾಧ್ಯವಾದ ಕಾರ್ಯಗಳನ್ನು ಮಾಡಿ ಆಶ್ರಿತರ ಅಪೇಕ್ಷಿತಗಳನ್ನು ಪೂರೈಸುವುದು **'ಆಶ್ರಿತರಕ್ಷಣ ವಿಷಯೋಮನೋರಥಃ ಕಾಮಃ; ಸೋಽ ಪ್ರತಿಹತೇ ಭವತೀತಿ ಸತ್ಯಕಾಮಃ'** [5] ಎಂಬಂತೆ ಸತ್ಯಕಾಮತ್ವ' ವೆಂಬ ಗುಣದಿಂದಲೇ ಆಗಿದೆ.

'ಸತ್ಯಕಾಮ ನಾಗಿರುವಿಕೆ ಎಂದರೆ - ಸಾಂದೀಪಿನಿ ಪುತ್ರರನ್ನು ಮರಳಿತಂದಂತೆ ಸಕಲಅಪೇಕ್ಷಿತಗಳನ್ನೂ ಪೂರ್ಣಮಾಡುವವನಾಗಿರುವುದು.' ಎಂದು ನಡುವಿಲ್‌ತಿರುವೀದಿಪ್ಪಿಳ್ಳೈ ತತ್ವತ್ರಯದಲ್ಲಿ ಅನುಗ್ರಹಿಸಿದ್ದಾರೆ.

**(ಅವರ್‌ಕಳುಕ್ಕು ....ಉಣ್ಡಾಕ್ಕಿಯುಮ್)** - ಇದು 'ಸತ್ಯ ಸಂಕಲ್ಪತ್ವ'ದ ಕಾರ್ಯವಾಗಿದೆ. ಉತ್ತಾನಪಾದ ಮಹಾರಾಜನ ಪುತ್ರನಾದ ಧ್ರುವನಿಗೆ ಸ್ವರ್ಗಕ್ಕೂ ಮೇಲಿನ ಸೀಮೆಯಲ್ಲಿ ಮೊದಲು ಇಲ್ಲದಿದ್ದ ಒಂದು ಸ್ಥಾನವನ್ನು ಇವನಿಗಾಗಿಯೇ , ಕಲ್ಪಿಸಿಕೊಟ್ಟಂತೆ. ಆಶ್ರಿತರಿಗಾಗಿ ಹಿಂದೆ ಇಲ್ಲವೇ ಇಲ್ಲದ ಒಂದನ್ನು ಉಂಟುಮಾಡಿಕೊಡುವುದು- ಅಪೂರ್ವಭೋಗ್ಯಗಳನ್ನು ಸೃಷ್ಟಿಸಬಲ್ಲ ಅಮೋಘಸಂಕಲ್ಪವುಳ್ಳವನಾದ್ದರಿಂದಲೇ. 'ಸತ್ಯಸಂಕಲ್ಪನಾಗಿರುವಿಕೆ' - ಎಂದರೆ 'ಧ್ರುವಪದದಂತೆ ಈ ಮೊದಲು ಇಲ್ಲದೇ ಇರುವುದನ್ನು ಉಂಟುಮಾಡುವವನಾಗಿರುವಿಕೆ ' ಎಂದಿದ್ದಾರೆ ನಡುವಿಲ್‌ತಿರುವೀದಿ ಭಟ್ಟರ್.

**(ತನ್ನಾದ್ಮ್.... ವಳಂಗಿ)** - ಇದು 'ಔದಾರ್ಯ' ಕಾರ್ಯವಾಗಿದೆ. **'ವರದ ಸಕಲ ಮೇತತ್ಸ ಶ್ರಿತಾರ್ಥಂ ಚಕರ್ಥ'**[6]ಎಂಬಂತೆ ತಮ್ಮ ವಸ್ತುಗಳನ್ನು ತಾವು ಬಳಸಿಕೊಳ್ಳುವಂತೆ ತನ್ನ ಆತ್ಮ ಆತ್ಮೀಯಗಳನ್ನು ಆಶ್ರಿತರು ಬಳಸಿಕೊಳ್ಳಲು ನೀಡುವಿಕೆ. ನಾನು ಕೊಟ್ಟೆ ಎಂಬ ಅಭಿಮಾನ ಸ್ವಲ್ಪವೂ ತನ್ನ ಮನದಲ್ಲಿಲ್ಲದೆ, ಪಡೆದುಕೊಂಡವರು

ಏನು ಪ್ರತ್ಯುಪಕಾರ ಮಾಡಿ ಋಣ ತೀರಿಸುವುದು, ಎಂದು ವ್ಯಾಕುಲಗೊಳ್ಳದಂತೆ ನೀಡುವುದು ಪರಮಉದಾರನಾದ್ದರಿಂದಲೇ.

**(ಅವರ್‌ಗಳ್ .... ಕೃತಕೃತ್ಯನಾಯ್)** - ಇದು 'ಕೃತಿತ್ವ' ಕಾರ್ಯವಾಗಿದೆ. ಆಶ್ರಿತರ ಕಾರ್ಯವು ಪೂರ್ತಿಯಾದರೆ ಅವರು ಕೃತಕೃತ್ಯರಾಗುವುದಲ್ಲದೆ

**ಅಭಿಷಿಚ್ಯ ಚ ಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಂ।**
**ಕೃತಕೃತ್ಯಸ್ತದಾರಾಮಃ ವಿಜ್ವರಃ ಪ್ರಮುಮೋದ ಹ ।**[7]

ಎಂಬಂತೆ ತಾನು ಕೃತಕೃತ್ಯನಾಗುವಿಕೆ. ವಿಭೀಷಣನಿಗೆ ಲಂಕಾ ರಾಜ್ಯಾಭಿಷೇಕ ಮಾಡಿ ದೀರ್ಘಕಾಲದಿಂದ ಪೀಡಿಸುತ್ತಿದ್ದ ಜ್ವರದಿಂದ ಮುಕ್ತನಾದಂತೆ ತಾನು ಕೃತಕೃತ್ಯನಾದೆ ಎಂದು ಭಾವಿಸುತ್ತಾನೆ.ಇದು ಆಶ್ರಿತ ರಕ್ಷಣೆ ಏರ್ಪಟ್ಟರೆ ಅದರ ಲಾಭ ತನ್ನದು ಎನ್ನುವ ಸ್ವಭಾವದವನಾದ್ದರಿಂದಲೇ ಆಗಿದೆ. 'ಕೃತಿತ್ವ'ವೆಂದರೆ 'ಆಶ್ರಿತರ ಅಪೇಕ್ಷಿತವು ಪೂರ್ಣವಾದರೆ ತಾನು ಕೃತಕೃತ್ಯನಾಗುವಿಕೆ' ಎಂದು ನಡುವಿಲ್ ತಿರುವೀದಿ ಭಟ್ಟರ್ ತಿಳಿಸಿದ್ದಾರೆ.

**(ತಾನ್ ಶೆಯ್ದ..... ನಿನ್ನೈತು)** - ಇದು 'ಕೃತಜ್ಞತಾ' ಕಾರ್ಯವಾಗಿದೆ. ತನ್ನಲ್ಲಿ ಸಮರ್ಪಿಸಲ್ಪಟ್ಟ ಒಂದೇ ಒಂದು ಶರಣೋಕ್ತಿ (ನಾನು ನಿನಗೆ ಶರಣಾಗಿದ್ದೇನೆ ಎಂಬ ಒಂದು ಮಾತು) ಮೊದಲಾದ ಸುಕೃತ ಲವ ಲೇಶವನ್ನು ಮಾಡಿದರೆ ಅವರಿಗೆ ತಾನು ಸಮಸ್ತ ಒಳಿತನ್ನು ಮಾಡಿದರೂ ಅದರಿಂದ ತೃಪ್ತನಾಗದೆ ಅವರು ಮಾಡಿದ ಸುಕೃತಲವಲೇಶವನ್ನೇ ನೆನೆಯುತ್ತಿರುವಿಕೆ 'ಕೃತಜ್ಞ'ನಾದ್ದರಿಂದಲೇ ಆಗಿದೆ. 'ಕೃತಜ್ಞನಾಗಿರುವುದೆಂದರೆ ಆಶ್ರಿತರ ಸುಕೃತಲವವನ್ನೇ ನೆನೆದು ತಾನು ಮಾಡಿದ ಒಳಿತಾವುದನ್ನೂ ಸ್ವಲ್ಪವೂ ಭಾವಿಸದಿರುವಿಕೆ' ಎಂದು ನಡುವಿಲ್ ತಿರುವೀದಿಭಟ್ಟರ್ ವಿವರಿಸಿದ್ದಾರೆ.

**(ಅನಾದಿಕಾಲಮ್....ಇನಿಯನಾಯ್)** - ಇದು 'ಮಾಧುರ್ಯ'ಕಾರ್ಯವಾಗಿದೆ. **'ಊರ್ಧ್ವಮಾಸಾನ್ನಜೀವಿಷ್ಯೇ'**[8] ಒಂದು ತಿಂಗಳಿಗೆ ಮೇಲೆ ಜೀವಿಸಿರಲಾರೆ ಎಂದಳು ಸೀತೆ. **'ನ ಜೀವೇಯಂ ಕ್ಷಣಮಪಿ'**[9] ಒಂದು ಕ್ಷಣವೂ ಜೀವಿಸಿರಲಾರೆ ಎನ್ನುತ್ತಾನೆ ರಾಮ. ಹೀಗೆ ತನ್ನಿಂದ ದೂರಾದ ಆಶ್ರಿತರ ವ್ಯಸನವು. ಇವನ ಸಾಗರದಂತಹ ವ್ಯಸನದ ಮುಂದೆ ಒಂದು ಸಣ್ಣ ಹಳ್ಳದ ನೀರಿನಂತಾಗಿ ಬಿಡುವುದು - ಆಶ್ರಿತರ ವಿರಹವನ್ನು ಸಹಿಸಲಾರದ ಮೃದುತ್ವದಿಂದಲೇ.

**(ಅವರ್‌ಗಳುಕ್ಕು.... ತಾಳವಿಟ್ಟು)** -ಇದು 'ಸೌಶೀಲ್ಯ'ಕಾರ್ಯವಾಗಿದೆ. ಜನ್ಮಾದಿಗಳಿಂದ ನೀಚರಾಗಿರುವವರಿಗೆ ಅನುಕೂಲಕರವಾಗಿ ಸರ್ವೇಶ್ವರನು, ಸರ್ವೋತ್ಕೃಷ್ಟನಾದ ತನ್ನನ್ನು ಅವರ ಮಟ್ಟಕ್ಕೆ ಇಳಿಸಿಕೊಳ್ಳುವುದು ಶೀಲ ಗುಣದಿಂದಲೇ ಆಗಿದೆ.

**(ಅವರ್‌ಗಳಕ್ಕು .... ಎಳಿಯನಾಯ್)** - ಇದು 'ಸೌಲಭ್ಯ'ಕಾರ್ಯವಾಗಿದೆ. ಅವತಾರ ದೆಸೆಯಲ್ಲಿ ನವನೀತ ಚೌರ್ಯ ವ್ಯಾಜದಿಂದ **'ಶಿಕ್ಕೆನವಾರ್‌ತ್ತಡಿಪ್ಪ'** ಎಂಬಂತೆ ಯಶೋದಾದಿಗಳಿಗೆ ಕಟ್ಟಲೂ ಹೊಡೆಯಲೂ ಸಾಧ್ಯವಾಗುವುದು **'ಎಳಿವರುಮಿಯಲ್ವಿನನ್'** ಎಂಬಂತೆ ಸೌಲಭ್ಯದಿಂದಲೇ.

**(ಅನ್ರೀನ್ರ .... ಸ್ನೇಹಿತ್ತುಕ್ಕೊಣ್ಡು ಪೊರುಮ್)**- ಇದು 'ವಾತ್ಸಲ್ಯ' ಕಾರ್ಯವಾಗಿದೆ. ಆಗ ತಾನೇ ಪ್ರಸವಿಸಿದ ಕರುವಿನ ಮೇಲಿನ ಪ್ರೀತಿಯಿಂದ, ಮೊದಲು ತಾನು ಪ್ರಸವಿಸಿ ಪ್ರೀತಿ ತೋರುತ್ತಿದ್ದ ಕರುಗಳನ್ನೂ, ತನಗೆ ಭೋಗ್ಯವಾಗಿ ಹುಲ್ಲುನೀಡಲು ಬಂದವರನ್ನೂ ಕೊಂಬಿನಿಂದ ತಿವಿಯುವುದು, ಕಾಲಿನಿಂದ ಒದೆಯುವುದನ್ನೂ ಹಸು ಮಾಡುವಂತೆ, ಆಲಿಂಗನಾದಿ ಭೋಗೋಪಕಾರಿಗಳಾದ ಶ್ರೀ ಮಹಾಲಕ್ಷ್ಮಿ ಮುಂತಾದವರನ್ನೂ; ಮೊದಲು ತನ್ನ ಪ್ರೇಮಕ್ಕೆ ವಿಷಯವಾದ ನಿತ್ಯ ಸೂರಿಗಳನ್ನೂ ತಳ್ಳಿ ಬಿಟ್ಟು , ಇಂದು ಆಶ್ರಯಿಸಿದವರನ್ನು ಪ್ರೇಮದಿಂದ ಆದರಿಸುವುದು ವತ್ಸಲನಾದ್ದರಿಂದಲೇ ಆಗಿದೆ.

## ಸೂ. 12 ಇವನೇ ಸಕಲಜಗತ್ತುಕ್ಕುಂ ಕಾರಣಭೂತನ್.

'ಸಕಲ ಜಗತ್ ಸರ್ಗಸ್ಥಿತಿ ಸಂಹಾರ ಕರ್ತಾವಾಯ್' ಎಂಬುದನ್ನು ಈಸೂತ್ರದಲ್ಲಿ ವಿವರಿಸುತ್ತಾರೆ. 'ಇವನ್' ಎಂಬುದರಿಂದ ಹಿಂದೆ ಹೇಳಲ್ಪಟ್ಟ ವಿಲಕ್ಷಣಸ್ವರೂಪಗುಣವಿಶಿಷ್ಟನಾದ ಈಶ್ವರನನ್ನು ಸೂಚಿಸುತ್ತಾರೆ. 'ಇವನೇ' ಎಂಬಲ್ಲಿನ 'ಏ' ಕಾರ ಅವಧಾರಣದಿಂದ ವೇದಾಂತಗಳಲ್ಲಿ **'ಸದೇವ ಸೋಮ್ಯೇದಮಗ್ರ ಆಸೀತ್'**[1] ಎಂದು ಛಾಂದೋಗ್ಯದಲ್ಲೂ; **'ಬ್ರಹ್ಮಾ ವಾ ಇದಮೇಕಮೇವಾಗ್ರ ಆಸೀತ್'**[2] ಎಂದು ವಾಜಸನೇಯಕದಲ್ಲೂ, **'ಆತ್ಮಾ ವಾ ಇದ ಮೇಕ ಏವಾಗ್ರ ಆಸೀತ್'**[3] ಎಂದು ಐತರೇಯಕದಲ್ಲೂ, ಸತ್, ಬ್ರಹ್ಮ, ಆತ್ಮ' ಎಂಬ ನಾಮಗಳಿಂದ ಹೇಳಲ್ಪಟ್ಟ ಕಾರಣ ವಸ್ತು ಯಾವುದಿರಬಹುದೆಂಬ ಆಕಾಂಕ್ಷೆಯಿಂದ **'ಏಕೋ ಹ ವೈ ನಾರಾಯಣ ಆಸೀತ್'**[4] ಎಂದು ಮಹೋಪನಿಷತ್ತಿನಲ್ಲಿ ವಿಶೇಷಿಸಲ್ಪಟ್ಟ **'ನಾರಾಯಣನೇ'** ಜಗತ್ಕಾರಣಭೂತನೆಂದು ನಿಶ್ಚಯಿಸಿರುವ ಶ್ರುತಿಗಳನ್ನನುಸರಿಸಿ 'ಇವನೇ' ಎಂದು ಅವಧಾರಣ ಪೂರ್ವಕವಾಗಿ ತಿಳಿಸುತ್ತಾರೆ.

**(ಸಕಲ.... ಭೂತನ್)** - 'ಸಕಲ' ಎಂಬುದರಿಂದ ಸಮಷ್ಟಿ ಸೃಷ್ಟಿರೂಪವಾದ ಎಲ್ಲಕ್ಕೂ ಕಾರಣಭೂತನಾದವನು ಎಂಬುದಾಗಿದೆ. ಇದರಿಂದ ಸಮನ್ವಯ, ಅವಿರೋಧ, ಸಾಧನ, ಫಲ ಎಂಬ ಅರ್ಥ ಚತುಷ್ಟಯಗಳನ್ನೂ ಪ್ರತಿಪಾದಿಸುವ ; ಉತ್ತರ ಮೀಮಾಂಸೆಯಲ್ಲಿನ ಬ್ರಹ್ಮಸೂತ್ರದ ಅಧ್ಯಾಯ ಚತುಷ್ಟಯವನ್ನು ಆಧರಿಸಿ **'ಅಥಾತೋ ಬ್ರಹ್ಮಜಿಜ್ಞಾಸಾ'**[5] ಎಂದು ಜಗತ್ಕಾರಣತ್ವವನ್ನು ತಿಳಿಸಿ, ಜಗತ್ಕಾರಣತ್ವವನ್ನು ಪ್ರತಿಪಾದಿಸುವ ಸಕಲವೇದಾಂತ ವಾಕ್ಯಗಳೂ ಬ್ರಹ್ಮನಲ್ಲಿ ಅನ್ವಯಿಸುತ್ತದೆ ಎಂದು ಪ್ರತಿಪಾದಿಸಿದ ಪ್ರಥಮಾಧ್ಯಾಯದ ಅರ್ಥವು ಈ ಸೂತ್ರದಲ್ಲಿ ನಿರೂಪಿಸಲ್ಪಟ್ಟಿತು.

## ಸೂ. 13 ಶಿಲರ್ ಪರಮಾಣುವೈ ಕಾರಣಮೆನ್ಪಾರ್‌ಗಳ್.

'ಬ್ರಹ್ಮನೇ ಜಗತ್ಕಾರಣ' ಎಂಬುದನ್ನು ವಿರೋಧಿಸುವ ಪರಮಾಣುವಾದಿಗಳ ಅಭಿಪ್ರಾಯವನ್ನು 'ಕೆಲವರು ಪರಮಾಣುವೇ ಜಗತ್ಕಾರಣ'ವೆನ್ನುತ್ತಾರೆ ಎಂದು ತಿಳಿಸುತ್ತಾರೆ.

'ಕೆಲವರು' - ಎಂದರೆ ಬೌದ್ಧ ಅರ್ಹಂತ (ಜೈನರು) ವೈಶೇಷಿಕಾದಿಗಳು. ಇವರಲ್ಲಿ ಬೌದ್ಧ, ಅರ್ಹತರಿಗೆ ಕೇವಲ ಪರಮಾಣುಗಳೇ ಜಗತ್ಕಾರಣವಾಗಿದೆ. ವೈಶೇಷಿಕಾದಿಗಳು 'ಪರಮಾಣುಗಳು ಉಪಾದಾನ ಕಾರಣವಾಗಿದೆ. ಅನುಮಾನದಿಂದ ಅರಿಯಲ್ಪಡುವ ಈಶ್ವರನು ನಿಮಿತ್ತಕಾರಣನಾಗಿದ್ದಾನೆ' ಎಂದು ತಿಳಿಸುತ್ತಾರೆ. ಇವರಲ್ಲಿ ಬೌದ್ಧ ಮತ್ತು ವೈಶೇಷಿಕರು ಪರಮಾಣುಗಳನ್ನು ಪಾರ್ಥಿವ, ಆಪ್ಯ, ತೈಜಸ, ವಾಯವೀಯ ಎಂದು ನಾಲ್ಕು ಬಗೆಯಾಗಿ ನಿರೂಪಿಸುತ್ತಾರೆ. ಅರ್ಹತರು ಏಕರೂಪವಾಗಿಯೇ ನಿರೂಪಿಸುತ್ತಾರೆ. ಹೀಗೆ ಕೆಲವು ಭೇದಗಳಿದ್ದರೂ ಪರಮಾಣುಗಳೇ ಕಾರಣ ಎಂಬುದು ಇವರೆಲ್ಲರ ಮತವಾಗಿದೆಯಾದ್ದರಿಂದ ಇವರೆಲ್ಲರನ್ನೂ 'ಶಿಲರ್' ಎಂದು ಸೂತ್ರಕಾರರು ತಿಳಿಸಿದ್ದಾರೆ.

## ಸೂ. 14 ಪರಮಾಣುವಿಲ್ ಪ್ರಮಾಣ ಮಿಲ್ಲಾಮೈಯಾಲುಮ್ ಶ್ರುತಿ ವಿರೋಧತ್ತಾಲುಮ್ ಅದುಶೇರಾದು.

ಮಹೀಮಹೀಧರಾದಿಗಳೆಲ್ಲವನ್ನೂ (ಭೂಮಿ, ಪರ್ವತ ಇತ್ಯಾದಿ) ಪರಮಾಣುವಿನ ಪರಿಣಾಮವೆಂದು ಇವರುಗಳು ಹೇಳುತ್ತಾರೆ. ಆ ಮತವನ್ನು ಈ ಸೂತ್ರದಲ್ಲಿ ನಿರಾಕರಿಸುತ್ತಾರೆ.

**(ಪರಮಾಣುವಿಲ್ .... ಶೇರಾದು)** - ಜಗತ್ಕಾರಣತಯಾ ಅಂಗೀಕರಿಸಲ್ಪಡುವ ಪರಮಾಣುಗಳು ಪ್ರತ್ಯಕ್ಷ ಸಿದ್ಧವಲ್ಲವಾಗಿ, ಆಗಮಸಿದ್ಧವೂ ಅಲ್ಲವಾಗಿ ಅನುಮಾನದಿಂದ ಅರಿಯಲು ಪ್ರಯತ್ನಿಸಿ, ಅದು ಆಗಮ ವಿರುದ್ಧವಾದ ಅರ್ಥವನ್ನು ಸಾಧಿಸಲಾರದ್ದರಿಂದ, ಅನುಮಾನದಿಂದಲೂ ಸಿದ್ಧಿಸದೆ ಹೋಗುತ್ತದೆ. ಅಲ್ಲದೆ ಪರಮಾಣು ಸದ್ಭಾವಕ್ಕೆ ಒಂದು ಪ್ರಮಾಣವೂ ಇಲ್ಲದ್ದರಿಂದಲೂ, ಈಶ್ವರನೇ ಜಗತ್ಕಾರಣ ಎಂಬುದಕ್ಕೆ ವಿರೋಧವಾದದ್ದರಿಂದಲೂ ಪರಮಾಣುಗಳೇ ಜಗತ್ಕಾರಣ ಎಂಬುದು ನಿರೂಪಿತವಾಗುವುದಿಲ್ಲ.

## ಸೂ. 15 ಕಾಪಿಲರ್ ಪ್ರಧಾನಮ್ ಕಾರಣಮೆನ್ಪಾರ್‌ಗಳ್.

ಜಗತ್ತಿಗೆ ಪ್ರಕೃತಿಯೇ ಸ್ವತಂತ್ರಕಾರಣವೆಂದು ಹೇಳುವ ಕಾಪಿಲ ಮತವನ್ನು ನಿರಾಕರಿಸುವುದಕ್ಕಾಗಿ ಅದನ್ನು ಪ್ರಸ್ತಾಪಿಸುತ್ತಾರೆ.

**(ಕಾಪಿಲ....... ಎನ್ಪಾರ್‌ಗಳ್)** - 'ಕಾಪಿಲರ್' ಎಂದರೆ ಕಪಿಲಮತ ನಿಷ್ಠರಾದ ಸಾಂಖ್ಯರು. ಮೃದಾತ್ಮಕವಾದ ಘಟಕ್ಕೆ ಮೃದ್ದವ್ಯವೇ (ಮಣ್ಣಿನಿಂದಾದ ಮಡಕೆಗೆ ಮಣ್ಣೇ) ಕಾರಣವಾದಂತೆ. ಸತ್ವ,ರಜಸ್ಸು, ತಮೋಮಯ ಸುಖ ದುಃಖ ಮೋಹಾತ್ಮಕವಾದ ಜಗತ್ತಿಗೆ, ಗುಣತ್ರಯಗಳ ಸಾಮ್ಯರೂಪವಾದ 'ಪ್ರಧಾನ' - ಪ್ರಕೃತಿಯೇ ಸ್ವತಂತ್ರಕಾರಣವಾಗಿದೆ. ಮೊಸರಾಗಿ ಪರಿಣಮಿಸುವ ಹಾಲಿಗೆ ಯಾವ ಇತರ ಸಹಾಯವೂ ಇಲ್ಲದೆ ಪ್ರಥಮ ಪರಿಸ್ಪಂದನದಿಂದ ಮೊದಲ್ಗೊಂಡು ಏರ್ಪಡುವ ಪರಿಣಾಮ ಪರಂಪರೆಗಳು ಸ್ವತಃ ಉಂಟಾಗುವಂತೆಯೂ; ಮೋಡದಿಂದ ಬಿಡಲ್ಪಟ್ಟು ಏಕರಸವಾಗಿರುವ ಜಲವು ನಾರಿಕೇಳ, ತಾಳ, ಚೂತ, ಕಪಿತ್ಥ, ನಿಂಬ, ತಿಂತ್ರಿಣೀ ಇತ್ಯಾದಿ ಬಗೆ ಬಗೆಯ ರಸರೂಪದಲ್ಲಿ ಪರಿಣಾಮ ಪ್ರವೃತ್ತಿಗಳು ಕಾಣುವಂತೆಯೂ; ಪರಿಣಾಮ ಸ್ವಭಾವವುಳ್ಳದ್ದಾಗಿ, ಪ್ರತಿಸರ್ಗಾವಸ್ಥೆಯಲ್ಲಿ (ಪ್ರಳಯದಲ್ಲಿ) ಸದೃಶ ಪರಿಣಾಮವುಳ್ಳದ್ದಾಗಿರುವ ಪ್ರಧಾನಕ್ಕೆ ಅನನ್ಯಾಧಿಷ್ಠಿತವಾಗಿಯೇ (ಈಶ್ವರನಿಂದ ಅಧಿಷ್ಠಿತವಾಗದೆಯೇ) ಸರ್ಗಾವಸ್ಥೆಯಲ್ಲಿ ಗುಣವೈಷಮ್ಯ ನಿಮಿತ್ತದಿಂದ ವಿಚಿತ್ರ ಪರಿಣಾಮಗಳು ಉಂಟಾಗುತ್ತವೆಯಾದ್ದರಿಂದ, ಪ್ರಕೃತಿಯೇ ಸ್ವತಂತ್ರವಾಗಿ ಜಗತ್ಕಾರಣವಾಗಿದೆ ಎಂಬುದು ಸಾಂಖ್ಯ ಮತವಾಗಿದೆ.

## ಸೂ. 16 ಪ್ರಧಾನಮ್ ಅಚೇತನಮಾಕೈಯಾಲುಮ್, ಈಶ್ವರನ್ ಅಧಿಷ್ಠಿಯಾದ ಪೋದು ಪರಿಣಮಿಕ್ಕ ಮಾಟ್ಟಾಮೈಯಾಲುಮ್, ಸೃಷ್ಟಿ ಸಂಹಾರ ವ್ಯವಸ್ಥೈ ಕೂಡಾಮೈಯಾಲುಮ್ ಅತುವುಮ್ ಶೇರಾದು.

ಮೇಲಿನ ಸಾಂಖ್ಯಮತವನ್ನು ಈ ಸೂತ್ರದಲ್ಲಿ ನಿರಾಕರಿಸುತ್ತಾರೆ.

**(ಪ್ರಧಾನಂ.... ಶೇರಾದು)**- ವಿಚಿತ್ರ ಜಗದಾಕಾರೇಣ ಪರಿಣಮಿಸುವಾಗ 'ಹೀಗೇ ಪರಿಣಮಿಸಬೇಕು' ಎಂದು ಅರಿಯುವ ಯೋಗ್ಯತೆ ಇಲ್ಲದ, ಪ್ರಧಾನವು ಚೈತನ್ಯ ರಹಿತವಾದ ವಸ್ತುವಾದದ್ದರಿಂದಲೂ;

**ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯಾತ್ಮೇಚ್ಛಯಾ ಹರಿಃ।**

**ಕ್ಷೋಭಯಾಮಾಸ ಸಂಪ್ರಾಪ್ತೇ ಸರ್ಗಕಾಲೇ ವ್ಯಯಾವ್ಯಯೌ।** ಎಂಬಂತೆ ಈಶ್ವರಾಧಿಷ್ಠಿತವಾದ ಹೊರತು ಈ ಪ್ರಧಾನವು ಪರಿಣಮಿಸುವುದು ಸಾಧ್ಯವಿಲ್ಲವಾದ್ದರಿಂದಲೂ; ಹಾಗಿಲ್ಲದೆ ತಾನೇ ಪರಿಣಮಿಸುವುದಾದರೆ ಸದಾಕಾಲವೂ ಸೃಷ್ಟಿಯೇ ಆಗಿ, ಲಯವೆನ್ನುವುದೇ ಇಲ್ಲವಾಗಿ ಬಿಡುವುದರಿಂದಲೂ; ಕಾಲಭೇದೇನ ಸೃಷ್ಟಿ ಸಂಹಾರ ವ್ಯವಸ್ಥೆ ಎಂಬುದು ಹೊಂದುವುದಿಲ್ಲವಾದ್ದರಿಂದಲೂ; ಪ್ರಧಾನವು ಕಾರಣ ಎಂಬುದು ನಿರೂಪಿತವಾಗುವುದಿಲ್ಲ.

## ಸೂ. 17 ಚೇತನನುಮ್ ಕಾರಣಮಾಕಮಾಟ್ಟಾನ್.

ಈ ರೀತಿ ಅಚೇತನವಾದ ಪ್ರಧಾನವನ್ನು ಜಗತ್ಕಾರಣವಾಗಿ ಹೇಳುವ ಪಕ್ಷವನ್ನು ನಿರಾಕರಿಸಿದ ನಂತರ ಚೇತನನ್ನು (ಜೀವಾತ್ಮ) ಜಗತ್ಕಾರಣವಾಗಿ ನಿರೂಪಿಸುವ ಪಾಶುಪತಾದಿಮತವನ್ನು ಈ ಸೂತ್ರದಲ್ಲಿ ನಿರಸನ ಮಾಡುತ್ತಾರೆ.

'ಚೇತನನುಮ್' -ಚೇತನನೂ ಕೂಡ ಎಂದರ್ಥ. 'ಕೂಡ' ಎಂಬುದರಿಂದ ಹಿಂದೆ ಹೇಳಲ್ಪಟ್ಟ ಅಚೇತನ ಸಮುಚ್ಚಯವು ಹೇಳಲ್ಪಟ್ಟಿತು.

ಆಗಮಗಳಿಂದ ಸಿದ್ಧಿಸಲ್ಪಡುವ ಈಶ್ವರನು ನಿಮಿತ್ತ ಕಾರಣನೆಂದೂ;

ಅನುಮಾನಗಳಿಂದ ಸಿದ್ಧಿಸಲ್ಪಡುವ ಈಶ್ವರನು ನಿಮಿತ್ತಕಾರಣನೆಂದೂ;

ಪಾಶುಪತ, ವೈಶೇಷಿಕಾದಿಗಳು ಹೇಳುವ ರುದ್ರನು, ಚೇತನರಲ್ಲಿ ಅನ್ಯತಮನಾಗಿದ್ದಾನೆ. 'ಹಿರಣ್ಯಗರ್ಭಸ್ಸಮವರ್ತತಾಗ್ರೇ' ಇತ್ಯಾದಿ ವಾಕ್ಯಗಳನ್ನು ಆಧರಿಸಿ ಚೇತನರಲ್ಲೊಬ್ಬನಾದ (ಒಬ್ಬನಾಗಿದ್ದಾನೆ) ಚತುರ್ಮುಖಬ್ರಹ್ಮನನ್ನು ಜಗತ್ಕಾರಣವಾಗಿ ಹೇಳುವವರೂ ಇದ್ದಾರೆ. ಇವೆಲ್ಲವನ್ನೂ ಪರಿಗಣಿಸಿ 'ಚೇತನನೂ ಕೂಡ' ಎನ್ನುತ್ತಾರೆ. 'ಕಾರಣವಾಗಲಾರ' ಎಂದರೆ ಕಾರಣನಾಗಲು ಅರ್ಹನಲ್ಲ ಎಂಬ ಅಭಿಪ್ರಾಯವಾಗಿದೆ.

## ಸೂ. 18 ಕರ್ಮಪರತಂತ್ರನು ಮಾಯ್ ದುಃಖಿಯುಮಾಯಿರುಕ್ಕೈಯಾಲೇ.

ಬ್ರಹ್ಮ, ರುದ್ರಾದಿಗಳು ಜಗತ್ಕಾರಣರಾಗಲು ಏಕೆ ಅರ್ಹರಲ್ಲ ಎಂಬುದನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ.

(ಕರ್ಮ.... ಇರುಕ್ಕೈಯಾಲೇ) - ಅಸಂಕುಚಿತ ಜ್ಞಾನಶಕ್ತಿಗಳಿಲ್ಲದವರಾಗಿ ತಾವು ನೆನಸಿದಂತೆಯೇ ಯಾವುದನ್ನೂ ನಡೆಸಲಾರದಂತಹ ಕರ್ಮಾಧೀನರಾದ್ದರಿಂದಲೂ; ಆನಂದಸ್ವರೂಪಿಯಾಗಿ ಜಗದ್ವ್ಯಾಪಾರದಲ್ಲಿ ಮಗ್ನರಾಗುವ ಯೋಗ್ಯತೆಯಿಲ್ಲದೆ ದುಃಖಿಗಳಾಗಿರುವುದರಿಂದಲೂ, ಬ್ರಹ್ಮರುದ್ರಾದಿಗಳು ಜಗತ್ಕಾರಣರಾಗಲು ಅನರ್ಹರಾಗಿದ್ದಾರೆ. 'ಅಪಹತಪಾಪ್ಮಾ' ಎಂಬಂತೆ ಅಕರ್ಮವಶನಾಗಿ, 'ಆನಂದಮಯಃ' ಎಂಬಂತೆ ನಿರತಿಶಯಾನಂದಿಯಾಗಿರುವವನಿಗೆ ಮಾತ್ರವೇ, ಅಪಹತಜ್ಞಾನ ಶಕ್ತಿಕನಾಗಿಯೂ, ಮನಃಪ್ರೀತಿಯಿಂದಲೂ ಮಾಡುವ ಜಗದ್ವ್ಯಾಪಾರವು ಹೊಂದುತ್ತದೆ.

ಬ್ರಹ್ಮಾದ್ಯಾ ಸ್ಸಕಲಾ ದೇವಾ ಮನುಷ್ಯಾಃ ಪಶವಸ್ತಥಾ।
ವಿಷ್ಣೋರ್ಮಾಯಾಮಹಾವರ್ತ ಮೋಹಾಂಧತಮಸಾವೃತಾಃ।
ಆಬ್ರಹ್ಮಸ್ತಂಬ ಪರ್ಯಂತಾ ಜಗದಂತರ್ವ್ಯವಸ್ಥಿತಾಃ।
ಪ್ರಾಣಿನಃ ಕರ್ಮ ಜನಿತಾಃ ಸಂಸಾರವಶವರ್ತಿನಃ।। [1]ಎಂಬಂತೆ ಕರ್ಮವಶರಾಗಿಯೂ;
'ತತಃ ಕ್ರೋಧ ಪರೀತೇನ ಸಂರಕ್ತನಯನೇನ ಚ।
ವಾಮಾಂಗುಷ್ಠ ನಖಾಗ್ರೇಣ ಛಿನ್ನಂ ತಸ್ಯ ಶಿರೋಮಯಾ।
ಯಸ್ಮಾದನ ಪರಾಧಸ್ಯ ಶಿರಶ್ಛಿನ್ನಂ ತ್ವಯಾ ಮಮ।
ತಸ್ಮಾ ಚ್ಛಾಪ ಸಮಾವಿಷ್ಟಃ ಕಪಾಲೀ ತ್ವಂ ಭವಿಷ್ಯಸಿ। [2]

ಎಂಬಂತೆ ತಲೆ ಕಡಿಯುವವರೂ, ಕಡಿಸಿಕೊಳ್ಳುವವರಾಗಿ ದುಃಖಿಗಳಾಗಿಯೂ ಇರುವವರಿಗೆ ಜಗದ್ವ್ಯಾಪಾರವು ಸಾಧ್ಯವಿಲ್ಲ.

## ಸೂ. 19 ಆಕೈಯಾಲ್ ಈಶ್ವರನೇ ಜಗತ್ತುಕ್ಕು ಕಾರಣಮ್.

ಹೀಗೆ ಚೇತನಾಚೇತನಗಳೆರಡೂ ಕಾರಣವಲ್ಲದೇ ಇರುವುದರಿಂದ 'ಈಶ್ವರನೇ ಜಗತ್ಕಾರಣ'ನಾಗಿದ್ದಾನೆ.

## ಸೂ. 20 ಇವನ್ ಕಾರಣಮಾಕಿರತು- ಅವಿದ್ಯಾ ಕರ್ಮಪರನಿಯೋಗಾದಿಗಳಾಲನ್ರಿಕ್ಕೇ ಸ್ವೇಚ್ಛೈಯಾಲೇ.

ಲೋಕದಲ್ಲಿ ಅವಿದ್ಯಾ ಕರ್ಮಗಳೂ, ಮತ್ತೊಬ್ಬರ ನಿಯಮನಾದಿಗಳೂ, ಒಂದು ಕಾರ್ಯವನ್ನು ಮಾಡಲು ಕಾರಣವಾಗುತ್ತದೆ. ಆದರೆ ಈಶ್ವರನ ಜಗತ್ಕಾರಣತ್ವವು ಹಾಗಲ್ಲವೆಂಬುದನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ. ಅವಿದ್ಯಾ ಕರ್ಮನಿಬಂಧನ ಕಾರಣತ್ವವು ಎಲ್ಲಾ ಜಂತುಗಳಿಗೂ ಸಾಮಾನ್ಯವಾದುದು. ಹೇಗೆಂದರೆ, ಲೋಕದಲ್ಲಿ ಒಂದಕ್ಕೊಂದು ಉತ್ಪಾದಕವಾಗಿ ಏರ್ಪಡುವ ಕಾರಣತ್ವವು, ವಿಷಯ ಸುಖ ಪ್ರಾವಣ್ಯಕ್ಕೆ ಮೂಲವಾದ ಅಜ್ಞಾನದಿಂದಲೂ, ಕರ್ಮದಿಂದಲೂ ಉಂಟಾಗುತ್ತದೆ. ಅದರಲ್ಲಿ ಶಾಸ್ತ್ರವಶ್ಯವಾದವುಗಳ ಉತ್ಪಾದಕತ್ವವು ಕರ್ಮ ಪ್ರಧಾನವಾಗಿರುತ್ತದೆ. ಬೇರೆಯವುಗಳು ಅವಿದ್ಯಾಪ್ರಧಾನವಾಗಿರುತ್ತದೆ. ಇವೆರಡೂ ಒಂದನ್ನೊಂದು ಬಿಟ್ಟಿರುವುದಿಲ್ಲ.

ಅಧಿಕಾರಿ ಪುರುಷರುಗಳಾದ (ಒಂದು ಅಧಿಕಾರದಲ್ಲಿರುವ) ಬ್ರಹ್ಮಾದಿಗಳ ಕಾರಣತ್ವವು ಪರನಿಯೋಗ (ಮತ್ತೊಬ್ಬರ ನಿಯಮನ) ಪ್ರಧಾನವಾಗಿದೆ.

**'ಪ್ರಜಾಪತ್ಯಂ ತ್ವಯಾಕರ್ಮ ಪೂರ್ವಂ ಮಯಿ ನಿವೇಶಿತಮ್'**[1] ಎಂಬಂತೆಯೂ,

**ಏಕೌದ್ವಾಪುರುಷ ಶ್ರೇಷ್ಠೌ ಪ್ರಸಾದ ಕ್ರೋಧ ಜೌಸ್ಮೃತೌ।**
**ತದಾದರ್ಶಿತ ಪಂಥಾನೌ ಸೃಷ್ಟಿಸಂಹಾರ ಕಾರಕೌ**[2]

ಎಂಬತೆಯೂ ಇರುವ ಪ್ರಮಾಣಗಳಲ್ಲಿ ಇದನ್ನು ಕಾಣಬಹುದು.ಇವಾವುದೂ ಅಲ್ಲದೆ 'ಸ್ವೇಚ್ಛೆಯಿಂದಲೇ' ಈಶ್ವರನು ಜಗತ್ಕಾರಣನಾಗಿದ್ದಾನೆ. **'ನಿರವದ್ಯಂ ನಿರಂಜನಮ್'**[3] **'ಅಪಹತಪಾಪ್ಮಾ' 'ನತಸ್ಯೈಶೇಕಶ್ಚನ'**[4] ಎಂಬಂತೆ ಅವಿದ್ಯಾದಿ ದೋಷ ಪ್ರತಿಭಟನಾಗಿ ತನಗೊಬ್ಬರು ನಿಯಾಮಕರಿಲ್ಲದಂತೆ ಇರುವವನಾದ್ದರಿಂದ ತನ್ನಿಚ್ಛೆಯ ಹೊರತಾಗಿ ಬೇರಾವ ಕಾರಣವೂ ಇಲ್ಲ. **'ಅಚಿದವಿಶೇಷಿತಾನ್ ಪ್ರಳಯಸೀಮನಿ ಸಂಸರತಃ ಕರಣ ಕಳೇಬರೈಃ ಘಟಯಿತುಂ ದಯಮಾನಮನಾಃ। ವರದ ನಿಜೇಚ್ಛಯೈವ ಪರವಾನಕರೋಃ ಪ್ರಕೃತಿ ಮಹದಭಿಮಾನ ಭೂತ ಕರಣಾವಳಿಕೋರಕಿಣೀಮ್।'**'[5] ಎಂದೂ **'ಪ್ರಳಯ ಸಮಯಸುಪ್ತಂ ಸ್ವಂ ಶರೀರೈಕದೇಶಂ ವರದ ಚಿದಚಿದಾಖ್ಯಂ ಸ್ವೇಚ್ಛಯಾವಿಸೃಣಾನಃ ಖಚಿತಮಿವ ಕಲಾಪಂ ಚಿತ್ರಮಾತತ್ಯಧೂನ್ವನ್ ಅನುಶಿಖಿನಿ ಶಿಖೀವ ಕ್ರೀಡಸಿ ಶ್ರೀ ಸಮಕ್ಷಮಮ್'** ಎಂದೂ ಶ್ರೀ ಪರಾಶರಭಟ್ಟರು ಅನುಗ್ರಹಿಸಿದ್ದಾರೆ.

## ಸೂ. 21 ಸ್ವಸಂಕಲ್ಪತ್ತಾಲೇ ಶೆಯ್‌ಕೈಯಾಲೇ ಇದುತಾನ್ ವರುತ್ತಮತ್ತಿರುಕ್ಕುಮ್.

ಹೀಗೆ ಸ್ವೇಚ್ಛೆಯಿಂದಲೇ ಆದರೂ ಆಯಾಸರೂಪವಾಗಿರುವುದೇ? ಎಂಬುದನ್ನು ಈ ಸೂತ್ರದಲ್ಲಿ ಉತ್ತರಿಸುತ್ತಾರೆ.

ಯತ್ನರೂಪವಾದ ಕಾಯಿಕ ವ್ಯಾಪಾರದಿಂದ ಮಾಡದೆ, ಅಯತ್ನವಾದ ಮಾನಸ ವ್ಯಾಪಾರ ರೂಪ ಸಂಕಲ್ಪದಿಂದ ಮಾಡುವುದರಿಂದ ಜಗತ್‌ಸೃಷ್ಟಿರೂಪವಾದ ಈ ವ್ಯಾಪಾರವು ಈಶ್ವರನಿಗೆ ಅನಾಯಾಸವಾಗಿರುತ್ತದೆ. ಇದನ್ನೇ **'ಸೋಕಾಮಯತ ಬಹುಸ್ಯಾಂ ಪ್ರಜಾಯೇಯೆತಿ'**[1] ಎಂದೂ **' ಮನಸ್ಯೈವ ಜಗತ್ ಸೃಷ್ಟಿಂ ಸಂಹಾರಂ**

ಚಕರೋತಿ ಯಃ ತಸ್ಯಾರಿ ಪಕ್ಷಿಕ್ಷಪಣೇಕಿಯಾನುದ್ಯಮವಿಸ್ತರಃ'[2] ಎಂದೂ 'ನಿನ್ನೈನ್ದವೆಲ್ಲಾ ಪೊರುಳ್ ಕಳುಕ್ಕುಂ ವಿತ್ತಾಯ್ ಮುತಲಿರ್ಚ್ಚಿತ್ತೈ ಯಾಮೇ ಮನಂಶೆಯ್ ಜ್ಞಾನತ್ತುನ್ ಪೆರುಮ್ಮೈ।'[3] ಎಂದೂ ವರ್ಣಿಸಲಾಗಿದೆ.

## ಸೂ. 22 ಇತುಕ್ಕು ಪ್ರಯೋಜನಮ್‌ಕೇವಲ ಲೀಲೈ.

ಅನಾಯಾಸವಾಗಿದ್ದರೂ, ಅವಾಪ್ತಸಮಸ್ತತಯಾ ಪರಿಪೂರ್ಣನಾಗಿರುವವನಿಗೆ ಈ ಜಗದ್ವ್ಯಾಪಾರದಿಂದಾಗುವ ಪ್ರಯೋಜನವೇನು ಎಂಬುದನ್ನು ಈ ಸೂತ್ರದಿಂದ ತಿಳಿಸಲಾಗಿದೆ.

ಈ ಜಗತ್ ಸೃಷ್ಟಿರೂಪವ್ಯಾಪಾರಕ್ಕೆ ಪ್ರಯೋಜನ ಕೇವಲ ಲೀಲೆಯಾಗಿದೆ. 'ಲೀಲೆ' ಎಂದರೆ - ತತ್ಕಾಲಕ್ಕೆ ಏರ್ಪಡುವ ಅನುಭವದ ಹೊರತಾಗಿ ಕಾಲಾಂತರದಲ್ಲಿ ಉಂಟಾಗುವ ಫಲವನ್ನಪೇಕ್ಷಿಸದೆ ಮಾಡುವ ಕಾರ್ಯ. **'ಇದಕ್ಕು ಪ್ರಯೋಜನಮ್'** ಎಂದು ಸೃಷ್ಟಿರೂಪವ್ಯಾಪಾರಕ್ಕೆ ಈ ಲೀಲೆಯನ್ನು ಪ್ರಯೋಜನವಾಗಿ ಹೇಳಿರುವುದರಿಂದ ತಾದಾತ್ವಿಕರಸಾನುಮಾತ್ರವನ್ನೇ(ಆ ಕಾಲಕ್ಕೆಏರ್ಪಡುವ ರಸಾನುಭವ) ಹೇಳಲಾಗಿದೆ.

ಸಾರ್ವಭೌಮರಾದ ರಾಜರುಗಳಿಗೆ ದ್ಯೂತಾದಿಗಳಂತೆಯೂ, ಬಾಲಕರಿಗೆ ಮರಳಿನಮನೆಯಂತೆಯೂ ಈಶ್ವರನಿಗೆ ಈ ಸೃಷ್ಟಿರೂಪವ್ಯಾಪಾರವು ತಾದಾತ್ವಿಕರಸವಾಗಿರುತ್ತದೆ. ಇದರಿಂದ **'ಲೋಕವತ್ತು ಲೀಲಾಕೈವಲ್ಯಮ್'**[1] ಎಂಬ ವೇದಾಂತ ಸೂತ್ರದ ಅರ್ಥವು ಹೇಳಲ್ಪಟ್ಟಿತು. **'ಕ್ರೀಡತೋ ಬಾಲಕಸ್ಯೇವ ಚೇಷ್ಟಾಂತಸ್ಯನಿಶಾಮಯ'** ಎಂದು ಶ್ರೀ ಪರಾಶರಮಹರ್ಷಿಗಳೂ,

**ಅಪ್ರಮೇಯೋಽನಿಯೋಜ್ಯಶ್ಚ ಯತ್ರ ಕಾಮಗಮೋವಶೀ।**
**ಮೋದತೇ ಭಗವಾನ್ ಭೂತೈಃ ಬಾಲಃ ಕ್ರೀಡನಕೈರಿವ।**

ಎಂದು ಶ್ರೀ ವೇದ ವ್ಯಾಸ ಮಹರ್ಷಿಗಳೂ, **'ನಳಿರ್ ಮಾಮಲರುನ್ದಿ ವೀಟ್ಟೈಪ್ಪಣ್ಣಿ ವಿಳೈಯಾಡುಂ'**[2] ಎಂದು ದೇವಿ ಆಂಡಾಳಳೂ, **'ಇನ್ಬುರು ಮಿವ್ವಿಳೈಯಾಟ್ಟುಡೈಯಾನ್'**[3] ಎಂದು ಆಳ್ವಾರರೂ ಇವನ ಜಗದ್ವ್ಯಾಪಾರಕ್ಕೆ ಪ್ರಯೋಜನ ಲೀಲೆಯೇ ಎಂಬುದಾಗಿ ತಿಳಿಸಿದ್ದಾರೆ.

ಆದರೆ **'ಶೆನ್ರು ಶೆನ್ರಾಕಿಲುಂ ಕಂಡು ಶನ್ಮಮ್ ಕಳಿಪ್ಪಾನೆಣ್ಣಿ ಒನ್ರಿ ಒನ್ರಿ ಉಲಕಂ ಪಡೈತ್ತಾನ್'**[4] ಎಂದೂ, **'ಉಯ್ಯವುಲಕುಪಡೈತ್ತು'**[5] ಎಂದೂ **'ವಿಚಿತ್ರಾದೇಹ ಸಂಪತ್ತಿಃ ಈಶ್ವರಾಯನಿವೇದಿತುಂ'। ಪೂರ್ವಮೇವ ಕೃತಾ ಬ್ರಹ್ಮನ್ ಹಸ್ತಪಾದಾದಿ ಸಂಯುತಾ।'** ಎಂದೂ **'ಮಾಯವನ್ ತನ್ನೈ ವಣಂಗವೈತ್ತ ಕರಣಮಿವ್ವೈ'**[6] ಎಂದೂ **'ಅಚಿದವಿಶೇಷಿತಾನ್ ಪ್ರಳಯಸೀಮನಿ ಸಂಸರತಃ ಕರಣಕಳೇಬರೈಃ ಘಟಯಿತುಂ ದಯಾಮಾನಮನಾಃ'** ಎಂದೂ ಹೀಗೆ ಚೇತನರ ಉಜ್ಜೀವನವೇ ಈ ಜಗತ್ ಸೃಷ್ಟಿವ್ಯಾಪಾರಕ್ಕೆ ಪ್ರಯೋಜನವೆಂದು ಹೇಳುವ ವಾಕ್ಯಗಳಿಗೆ ವಿರೋಧವೇರ್ಪಡುವುದಿಲ್ಲವೇ? ಎಂದರೆ - ಇಲ್ಲ. ಹೇಗೆಂದರೆ- ಚೇತನರ ಉಜ್ಜೀವನ ಮತ್ತು ಲೀಲೆ ಹೀಗೆ ಎರಡೂ ಪ್ರಯೋಜನವಾಗಿರುವಾಗ ಲೀಲೆಯೊಂದನ್ನೇ ಪ್ರಯೋಜನ ವೆನ್ನುವುದು ಅದರ ಪ್ರಾಚುರ್ಯದಿಂದಾಗಿದೆ. (ಲೀಲೆಯೇ ಪ್ರಧಾನ ಎನ್ನುವುದಾಗಿದೆ.)

**'ರೂಪ ಪ್ರಕಾರಪರಿಣಾಮಕೃತವ್ಯವಸ್ಥಂ ವಿಶ್ವಂ ವಿಪರ್ಯಸಿತು ಮನ್ಯದಸಚ್ಚ ಕರ್ತುಮ್ ಕ್ಷಾಮ್ಯನ್ ಸ್ವಭಾವನಿಯಮಂ ಕಿಮುದೀಕ್ಷಸೇತ್ವಂ ಸ್ವಾತಂತ್ರ್ಯಮೈಶ್ವರಮಪರ್ಯನು ಯೋಜ್ಯಮಾಹುಃ।'**[7] ಎಂಬಂತೆ ನೆನಸಿದಂತೆಯೇ ನಡೆಸುವ ಶಕ್ತಿಯುಳ್ಳವನಾದ್ದರಿಂದ ಸಕಲಾತ್ಮಗಳನ್ನೂ ಏಕಕಾಲದಲ್ಲೇ ಮುಕ್ತರನ್ನಾಗಿಸುವ ಸಾಮರ್ಥ್ಯವಿದ್ದರೂ, ತನಗೆ ಅಧೀನವಾದ ಸ್ವರೂಪ, ಸ್ಥಿತಿಗಳನ್ನುಳ್ಳ ಆತ್ಮರನ್ನು ಕರ್ಮವೆಂಬ ವ್ಯಾಜದಿಂದ ಕೈಜಾರಿ ಬಿಟ್ಟು ಶಾಸ್ತ್ರ ಮರ್ಯಾದೆಯಿಂದ ಬರಲು ಅಂಗೀಕರಿಸುವೆನೆನ್ನುವುದು ಕೇವಲ ಲೀಲಾರಸ ಇಚ್ಛೆಯಿಂದಲೇ ಆಗಿದೆ.

ಲೀಲಾವಿಭೂತಿಯೆಂದೇ ತಾನೇ ಈ ಲೋಕವೂ ಪ್ರಸಿದ್ಧವಾಗಿದೆ. ಆದ್ದರಿಂದ ಈ ವಿಭೂತಿಯಲ್ಲಿ ಲೀಲೆಯೇ ಅಧಿಕವಾದ ಪ್ರಯೋಜನವಾದ್ದರಿಂದಲೂ, ಸೂತ್ರಕಾರರೆಲ್ಲರೂ ಸೃಷ್ಟಿ ಪ್ರಯೋಜನ ಲೀಲೆ ಎಂದೇ ನಿರೂಪಿಸಿರುವುದರಿಂದಲೂ ಈ ಸೂತ್ರದಲ್ಲಿ 'ಕೇವಲ ಲೀಲೆ' ಎಂದೇ ಪ್ರತಿಪಾದಿಸಲಾಗಿದೆ.

## ಸೂ. 23 ಆನಾಲ್ ಸಂಹಾರತ್ತಿಲ್ ಲೀಲೈ ಕುಲೈಯಾತೋವೆನ್ನಿಲ್.

ಹೀಗೆ ಜಗತ್‌ಸೃಷ್ಟಿ ಲೀಲಾರ್ಥವಾಗಿ ಎನ್ನುವುದಾದರೆ ಸಂಹಾರ ದೆಸೆಯಲ್ಲಿ (ಪ್ರಳಯ) ಈ ಲೀಲೆಗೆ ಭಂಗವೇರ್ಪಡುವುದಿಲ್ಲವೇ? ಎಂದರೆ.

## ಸೂ. 24 ಸಂಹಾರನ್ದಾನುಮ್ ಲೀಲೈಯಾಕೈಯಾಲೇ ಕುಲೈಯಾತು.

'ಇಲ್ಲ' ಎಂದು ಈ ಸೂತ್ರದಲ್ಲಿ ನಿರೂಪಿಸುತ್ತಾರೆ. ಮರಳಿನಲ್ಲಿ ಮನೆಯನ್ನು ಕಟ್ಟಿ ಆಡುವ ಬಾಲಕರಿಗೆ ಅದನ್ನು ಉರುಳಿಸಿ ಬಿಡುವುದೂ ಹೇಗೆ ಆಟವಾಗಿರುತ್ತದೆಯೋ ಆರೀತಿ. ಸಂಹಾರವೂ ಲೀಲೆಯಾದ್ದರಿಂದ ಆಗಲೂ ಲೀಲೆಗೆ ಭಂಗ ಬರುವುದಿಲ್ಲ.

**'ಅಖಿಲ ಭುವನ ಜನ್ಮ ಸ್ಥೇಮ ಭಂಗಾದಿಲೀಲೇ'**[1] ಎಂದೂ **'ನಿಖಿಲ ಜಗದುದಯ ವಿಭವ ಲಯಲೀಲ'**[2] ಎಂದೂ ಸೃಷ್ಟಿಯಂತೆ ಸಂಹಾರವೂ ಅವನಿಗೆ ಲೀಲೆ ಎಂದಿದ್ದಾರೆ ಆಚಾರ್ಯರಾಮಾನುಜರು.

ಹೀಗೆ ಈಶ್ವರನೇ ಜಗತ್ತಿಗೆ ಕಾರಣನೆಂದೂ, ಯಾವ ಹೇತುವಿನಿಂದಲೂ ಅಲ್ಲದೆ ಸ್ವೇಚ್ಛೆಯಿಂದ ಕಾರಣನೆಂದೂ, ಸಂಕಲ್ಪಮಾತ್ರದಿಂದ ಸೃಷ್ಟಿಸುತ್ತಾನಾದ್ದರಿಂದ ಸೃಷ್ಟಿ ಅನಾಯಾಸವಾಗಿರುತ್ತದೆಂದೂ, ಇದಕ್ಕೆ ಪ್ರಯೋಜನ ಲೀಲೆ ಎಂದೂ ಪ್ರತಿಪಾದಿಸಲಾಯಿತು.

## ಸೂ. 25 ಇವನ್ ತಾನೇ ಜಗತ್ತಾಯ್ ಪರಿಣಮಿಕ್ಕೈಯಾಲೇ ಉಪಾದಾನ ಮುಮಾಯಿರುಕ್ಕುಮ್.

ಮಡಕೆ ಮೊದಲಾದುವುಗಳಿಗೆ ಕುಂಬಾರನು ಕೇವಲ ನಿಮಿತ್ತ ಕಾರಣವಾಗಿರುವಂತೆ ಈಶ್ವರನು ಜಗತ್ತಿಗೆ ನಿಮಿತ್ತ ಕಾರಣ ಮಾತ್ರವಾಗಿದ್ದಾನೆಯೇ ಎಂಬ ಸಂಶಯಕ್ಕೆ ಈ ಸೂತ್ರದಲ್ಲಿ ಉತ್ತರಿಸುತ್ತಾರೆ.

ಜಗತ್ತಿನಲ್ಲಿ ಒಂದು ಕಾರ್ಯವಾಗಬೇಕಾದರೆ ಅದರ ಕಾರಣವು ನಿಮಿತ್ತ, ಉಪಾದಾನ, ಸಹಕಾರಿ, ಎಂಬುದಾಗಿ ಮೂರುವಿಧವಾಗಿರುತ್ತದೆ.

ನಿಮಿತ್ತ ಕಾರಣವೆಂದರೆ - ಉಪದಾನ ವಸ್ತುವನ್ನು(ಮೂಲವಸ್ತುವನ್ನು) ಕಾರ್ಯರೂಪವಾಗಿ ಬದಲಾಯಿಸುವ ಕರ್ತಾ (ಉದಾ:- ಮಣ್ಣನ್ನು ಮಡಕೆಯಾಗಿ ಮಾಡುವ ಕುಂಬಾರ)

ಉಪಾದಾನ ಕಾರಣವೆಂದರೆ - ಕಾರ್ಯ ರೂಪವಾಗಿ ಪರಿಣಮಿಸುವ ವಸ್ತು (ಉದಾ:- ಮಡಕೆಯಾಗುವ ಮಣ್ಣು)

ಸಹಕಾರಿಕಾರಣವೆಂದರೆ- ಕಾರ್ಯೋತ್ಪತ್ತಿಗೆ ಸಹಾಯ ಮಾಡುವ ಉಪಕರಣಗಳು. (ಉದಾ:- ಮಡಕೆಮಾಡಲು ಸಹಾಯಕವಾಗಿರುವ ನೀರು, ದಂಡ, ಚಕ್ರ ಮುಂತಾದವು.)

ಈ ರೀತಿಯಲ್ಲದೆ ಜಗದ್ರೂಪ ಕಾರ್ಯೋತ್ಪತ್ತಿಯಲ್ಲಿ ಈಶ್ವರನೇ ತ್ರಿವಿಧ ಕಾರಣನಾಗಿರುತ್ತಾನೆ. **'ಬಹುಸ್ಯಾಂ ಪ್ರಜಾಯೇಯ'** ಎಂಬ ಸಂಕಲ್ಪ ವಿಶಿಷ್ಟನಾಗಿ ನಿಮಿತ್ತ ಕಾರಣನಾಗಿಯೂ; ನಾಮರೂಪ ವಿಭಾಗಾರ್ಹವಾಗಿ ತನ್ನೊಡನೆ ಕೂಡಿರುವ ಸೂಕ್ಷ್ಮ ಚಿತ್, ಅಚಿತ್ ವಿಶಿಷ್ಟನಾಗಿ ಉಪದಾನ ಕಾರಣನಾಗಿಯೂ ; ಜ್ಞಾನಶಕ್ತ್ಯಾದಿ ವಿಶಿಷ್ಟನಾಗಿ ಸಹಕಾರಿಕಾರಣನಾಗಿಯೂ ಆಗಿರುತ್ತಾನೆ. ಆದ್ದರಿಂದ ಉಪದಾನಕಾರಣವೂ ಇವನೇ ಎಂದು ಈ ಸೂತ್ರವು ತಿಳಿಸುತ್ತದೆ.

**'ಇವನ್'** ಎಂಬ ಶಬ್ದ ಹಿಂದೆ ನಿಮಿತ್ತಕಾರಣವಾಗಿ ಹೇಳಲ್ಪಟ್ಟ 'ಈಶ್ವರ'ನನ್ನು ಪರಾಮರ್ಶಿಸುತ್ತದೆ. ಚಿದ್, ಅಚಿತ್ತುಗಳೆರಡೂ ಅಪೃಥಕ್ ಸಿದ್ಧ ವಿಶೇಷಣವಾಗಿ 'ತಾನು' ಎಂಬ ಶಬ್ದದೊಳಗೇ ಅನ್ತರ್ಭೂತವಾಗಿರುವುದರಿಂದ **'ತಾನೇ ಜಗತ್ತಾಗಿ ಪರಿಣಮಿಸುವುದರಿಂದ'** ಎನ್ನಲಾಗಿದೆ **'ಉಪಾದಾನ ಕಾರಣಮುಮಾಯಿರುಕ್ಕುಂ'** ಎಂದು ನಿಮಿತ್ತ ಕಾರಣದೊಡನೆ ಉಪದಾನ ಕಾರಣತ್ವವೂ ಉಂಟು ಎನ್ನುತ್ತಾರೆ. ಇದರಿಂದ ಬ್ರಹ್ಮನ ಜಗತ್ಕಾರಣತ್ವವನ್ನು ಪ್ರತಿಪಾದಿಸುವ ವೇದಾಂತ ಸೂತ್ರಗಳಲ್ಲಿ, ನಿಮಿತ್ತ ಕಾರಣತ್ವವನ್ನು ಪ್ರತಿಪಾದಿಸಿದ ನಂತರ **'ಪ್ರಕೃತಿಶ್ಚ ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್'** ಎಂದು ಉಪದಾನಕಾರಣತ್ವವನ್ನು ತಿಳಿಸಿದಂತೆ ಇಲ್ಲಿಯೂ ತಿಳಿಸಲಾಗಿದೆ.

**'ಪ್ರಕೃತಿಶ್ಚ'** ಎಂಬುದನ್ನು ಗಮನದಲ್ಲಿಟ್ಟು ಕೊಂಡೇ, ಇಲ್ಲಿನ ಸೂತ್ರಕಾರರೂ 'ಉಪದಾನವೂ' ಆಗಿದ್ದಾನೆ ಎಂದಿದ್ದಾರೆ. ವೇದಾಂತ ಸೂತ್ರದಲ್ಲಿ **'ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್'** ಎಂದು ಸಾಧ್ಯವನ್ನು ಮೊದಲು ತಿಳಿಸಿ ಸಾಧನವನ್ನು ಅನಂತರ ಹೇಳಲಾಗಿದೆ. ಇಲ್ಲಿ **'ಇವನ್ ಜಗತ್ತಾಯ್ ಪರಿಣಮಿಕ್ಕೈಯಾಲೇ'** ಎಂದು ಸಾಧನವನ್ನು ಮೊದಲು ಹೇಳಿ ಅನಂತರ ಸಾಧ್ಯವನ್ನು ಹೇಳಲಾಗಿದೆ.

ಅಲ್ಲಿ **'ಯೇನಾ ಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ ಸ್ಯಾತ್'**[1] ಎಂದೂ 'ಏಕವಿಜ್ಞಾನೇನ ಸರ್ವವಿಜ್ಞಾನ' ಪ್ರತಿಜ್ಞೆಯಿಂದಲೂ **'ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್'**[2] ಎಂದು ಅದನ್ನು ಉಪಪಾದಿಸುವ ದೃಷ್ಟಾಂತದಿಂದಲೂ, ಒಂದೇ ವಸ್ತುವಿನ ಪರಿಣಾಮವೇ ಜಗತ್ತು ಎಂದೇ ಹೇಳಲಾಗಿದೆ, ಆ ಒಂದೇ ವಸ್ತುವೇ - ಸೂಕ್ಷ್ಮ ಚಿತ್, ಅಚಿತ್ ವಿಶಿಷ್ಟವಾದ 'ಬ್ರಹ್ಮ'. ಅದನ್ನೇ ಇಲ್ಲಿ ಸೂತ್ರದಲ್ಲಿ **'ತಾನೇ'** ಎಂದು ಹೇಳಲಾಗಿದೆ. ಹೀಗೆ ಆ ವೇದಾಂತಸೂತ್ರವೇ ಇಲ್ಲಿ ಹೀಗೆ ನಿರೂಪಿಸಲ್ಪಟ್ಟಿದೆ. **'ಏಕಾಮೇವಾದ್ವಿತೀಯಮ್'**;[3] **'ತದಾತ್ಮಾನಂ ಸ್ವಯಮಕುರುತ'** ; **'ಸೃಷ್ಟೌಸ್ಸೃಜತಿ ಚಾತ್ಮಾನಂ ವಿಷ್ಣುಃ ಪಾಲ್ಯಂಚ ಪಾತಿಚ । ಉಪಸಂಹ್ರಿಯತೇ ಚಾಂತೇ ಸಂಹರ್ತಾ ಚ ಸ್ವಯಂ ಪ್ರಭುಃ** ;[4] **'ಸ ಏವ ಸೃಜ್ಯಃ ಸಚ ಸರ್ಗ ಕರ್ತಾ ಸ ಏವಪಾತ್ಯತ್ತಿಚಪಾಲ್ಯತೇಚ। ಬ್ರಹ್ಮಾದ್ಯವಸ್ಥಾ ಭಿರಶೇಷ ಮೂರ್ತಿಃ ವಿಷ್ಣುರ್ವರಿಷ್ಠೋ ವರದೋ ವರೇಣ್ಯಃ।** [5] ಇತ್ಯಾದಿಗಳಲ್ಲಿ ಈ ನಿಮಿತ್ತೋ ಪಾದನಗಳ ಐಕ್ಯವನ್ನು ಶ್ರುತಿ ಸ್ಮೃತಿಗಳು ಸುವ್ಯಕ್ತವಾಗಿ ನಿರೂಪಿಸುತ್ತವೆ.

## ಸೂ. 26 ಆನಾಲ್ ನಿರ್ವಿಕಾರನೆನ್ನುಂಪಡಿ ಎನ್ನೆನ್ನಿಲ್.

ಹೀಗೆ ತಾನೇ ಜಗತ್ತಾಗಿ ಈಶ್ವರನು ಪರಿಣಮಿಸುವುದಾದರೆ **'ನಿರ್ಗುಣಂ ನಿರಂಜನಂ ನಿಷ್ಕಳಂಕಂ ನಿಷ್ಕ್ರಿಯಂ ಶಾಂತಮ್'**;[1] **'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'**; **'ಅವಿಕಾರಾಯ ಶುದ್ಧಾಯ'** ಎಂದು ಈಶ್ವರನನ್ನು ನಿರ್ವಿಕಾರನಾಗಿ (ಪರಿಣಾಮವಿಲ್ಲದವನಾಗಿ) ಹೇಳಲಾಗಿದೆಯಲ್ಲ ಎಂದರೆ.

## ಸೂ. 27 ಸ್ವರೂಪತ್ತುಕ್ಕು ವಿಕಾರಮಿಲ್ಲಾಮೈಯಾಲೇ.

ಚಿತ್ ಅಚಿತ್ ರೂಪ ವಿಶೇಷಗಳಿಂದ ವಿಶಿಷ್ಟನಾದ, ತಾನೇ ಜಗತ್ತಾಗಿ ಪರಿಣಮಿಸುವುದರಿಂದ

(ವಿಶೇಷಣದಲ್ಲಿ ಮಾತ್ರ ಪರಿಣಾಮ) ವಿಶೇಷ್ಯವಾದ ಬ್ರಹ್ಮಸ್ವರೂಪದಲ್ಲಿ ವಿಕಾರವಿಲ್ಲದ್ದರಿಂದ 'ನಿರ್ವಿಕಾರ ' ಎನ್ನಲಾಗಿದೆ.

## ಸೂ. 28 ಆನಾಲ್ ಪರಿಣಾಮಮುಣ್ಡಾಪಡಿ ಎನ್ನೆನ್ನಿಲ್.

ಸ್ವರೂಪಕ್ಕೆ ವಿಕಾರವಿಲ್ಲವಾದರೆ, ಇವನು ತಾನೇ ಜಗತ್ತಾಗಿ ಪರಿಣಮಿಸುವ ಪ್ರಕಾರವೇನು ಎಂದರೆ.

## ಸೂ. 29 ವಿಶಿಷ್ಟವೇಷೇಣ ಸದ್ವಾರಕ ಮಾಗ.

**'ವಿಶಿಷ್ಟಂ ಚ ತತ್ ವಿಶೇಷಣಂ ಚೇತಿ ವಿಶಿಷ್ಟ ವಿಶೇಷಣಂ'** ಎಂಬುದಾಗಿ ಕರ್ಮಧಾರಯ ಸಮಾಸವಾಗಿ **'ದ್ವಾರೇಣ ಸಹವರ್ತತ ಇತಿ ಸದ್ವಾರಕಮ್** ಎಂದು ತೃತೀಯಾ ತತ್ಪುರುಷವಾಗಿ ಶಬ್ದಕ್ಕೆ ವ್ಯುತ್ಪತ್ತಿಯನ್ನು ಮಾಡಿಕೊಳ್ಳಬೇಕು.

'ವಿಶಿಷ್ಟ'ವೆಂದರೆ- ವಿಶೇಷದೊಡನೆ ಕೂಡಿರುವುದು .

ವಿಶೇಷಣವೆಂದರೆ - ದಂಡ (ಕೈಯಲ್ಲಿಹಿಡಿದ ಕೋಲು, ಕಿವಿಯಲ್ಲಿ ಧರಿಸುವ ಕುಂಡಲ) ಕುಂಡಲಗಳಂತಲ್ಲದೆ ಶರೀರಭೂತವಾದ್ದರಿಂದ, ಪೃಥಕ್ ಸಿದ್ಧಿಗೆ ಅರ್ಹವಲ್ಲವಾಗಿರುವ (ಈಶ್ವರನನ್ನು ಬಿಟ್ಟು ಬೇರೆ ಇರಲು ಅಶಕ್ಯವಾದ) ಸ್ಥಿತಿಯನ್ನು ಉಳ್ಳ ಚಿತ್, ಅಚಿತ್ ರೂಪವಾದ ವಿಶೇಷಣವನ್ನು ಹೇಳಲಾಗಿದೆ.

ಅಲ್ಲದೆ ವಿಶಿಷ್ಟ ವಿಶೇಷಣವೆಂಬುದಕ್ಕೆ - ಶರೀರಭೂತವಾಗಿ ಎಲ್ಲಡೆಯಲ್ಲಿಯೂ ತನ್ನೊಡನೆ ಕೂಡಿಯಿರುವ ವಿಶೇಷಣವೆಂದೂ ಹೇಳಬಹುದು. ಹೀಗೆ ಹೇಳಿದರೂ ಪೃಥಕ್ ಸ್ಥಿತಿಗೆ ಅರ್ಹವಾದ ದಂಡ ಕುಂಡಲಾದಿಗಳಿಗೂ ಇದಕ್ಕೂ ವ್ಯತ್ಯಾಸವು ಸುವ್ಯಕ್ತವಾಗುತ್ತದೆ. **'ವಿಶೇಷಣದಿಂದ ಸದ್ವಾರಕ'** ವೆಂದರೆ ಹೀಗೆ ಅಪೃಥಕ್ ಸಿದ್ಧ (ಬೇರ್ಪಡಿಸಲಾಗದ) ವಿಶೇಷಣವಾದ ಕಾರಣದಿಂದ ದ್ವಾರ ಸಹಿತವಾಗಿ (ಇವುಗಳ ಮೂಲಕ) ಪರಿಣಾಮವೇರ್ಪಡುವುದು ಎಂದರ್ಥ. ಇದರಿಂದ ಅಪೃಥಕ್ ಸಿದ್ಧವಾದ ಚಿದಚಿದ್ರೂಪ ವಿಶೇಷಣದ್ವಾರಾ (ಈಶ್ವರತತ್ತ್ವದೊಡನೆ ಬೇರ್ಪಡಿಸಲಾಗದಂತಿರುವ ಚಿತ್, ಅಚಿತ್‌ಗಳ ಪರಿಣಾಮವೇರ್ಪಡುವುದು. ಅದು ಶರೀರಿಯಾದ ಈಶ್ವರನಲ್ಲೇ ಹೇಳಲ್ಪಡುವುದು ಎಂದಾಯಿತು.) ಹೀಗೆ ಪರಿಣಾಮವು ಚಿತ್, ಅಚಿತ್‌ನಲ್ಲಿ ಆದರೂ ಅವುಗಳಿಗೆ ಈಶ್ವರನು ಶರೀರಯಾದ್ದರಿಂದ ಈಶ್ವರನಿಗೆ ಪರಿಣಾಮವೇರ್ಪಡುತ್ತದೆ ಎಂದು ಪ್ರತಿಪಾದಿಸಲಾಯಿತು.

## ಸೂ. 30 ಒರು ಶಿಲಿನ್ದಿಕ್ಕುಣ್ಡಾನ ಸ್ವಭಾವಮ್ ಸರ್ವಶಕ್ತಿಕ್ಕು ಕೂಡಾತೊಳಿಯಾತಿರೇ.

ಹೀಗೆ ಸ್ವರೂಪಕ್ಕೆ ವಿಕಾರವಿಲ್ಲದಿರುವಾಗ ಸ್ವಶರೀರ ಭೂತ ವಿಶೇಷಣದ್ವಾರಾ ಕಾರ್ಯಜಾತಕ್ಕೆಲ್ಲಾ (ತನಗೆ ಶರೀರದಂತಿರುವ ಚಿತ್, ಅಚಿತ್‌ಗಳ ಮೂಲಕ ಏರ್ಪಡುವ ಕಾರ್ಯಗಳಿಗೆಲ್ಲಾ) ಇವನೇ ಉಪಾದಾನವಾಗುವನೇ ಎಂಬ ಪ್ರಶ್ನೆಗೆ ಈ ಸೂತ್ರದಲ್ಲಿ ಉತ್ತರಿಸುತ್ತಾರೆ.

ಅಲ್ಪ ಶಕ್ತಿಕವಾದ ಜೇಡರಹುಳುವಿಗೆ ಸ್ವರೂಪ ವಿಕಾರವಿಲ್ಲದೆ, ತನ್ನ ಶರೀರಭೂತ ವಿಶೇಷಣ ದ್ವಾರಾ ತಂತುಜಾತವಾದ (ಎಳೆಗಳ ಬಲೆ) ಕಾರ್ಯ ಜಾತಕ್ಕೆ ತಾನು ಉಪಾದಾನವಾಗುವ ಸ್ವಭಾವವು **''ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ''** ಎಂದು ಸ್ತುತಿಸಲ್ಪಡುವ ಸರ್ವಶಕ್ತನಿಗೆ ಇಲ್ಲವೇ? ಇದನ್ನೇ

**''ಯಥೋರ್ಣನಾಭಿಸ್ಸೃಜತೇ ಗೃಹ್ಣಾತೇಚ ;।''**[1]

**'ಊರ್ಣ ನಾಭಿರ್ಯಥಾ ಸೃಷ್ಟ್ವಾ ಸ್ವಯಂತದ್ ಗ್ರಸತೇ ಪುನಃ।**

ತಥಾಸೃಷ್ಟೇದಮಖಿಲಂ ಸ್ವಯಂ ತದ್ಗ್ರಸತೇ ಹರಿಃ'।[2] ಎನ್ನಲಾಗಿದೆ.

**'ಕಾರ್ಯ್ಯೇऽ ನಂತೇ ಸ್ವತನುಮುಖತ ಸ್ತ್ವನ್ಮುಪಾದಾನ ಮಾಹುಸ್ತಾಸ್ತೇಶಕ್ತಿ ಸ್ಸುಕರಮಿತರಚ್ಚೇತಿ ವೇಲಾಂ ವಿಲಂಘ್ಯ। ಇಚ್ಛಾಯಾವದ್ವಿಹರತಿ ಸದಾರಂದರಾಜಾನಪೇಕ್ಷಾ ಸೈ ವೈಶಾನಾದತಿಶಯ ಕರೀ ಸೋರ್ಣನಾಭೌ ವಿಭಾವ್ಯಾ'**।[3] ಎಂದಿದ್ದಾರೆ ಸ್ವಾಮಿ ಪರಾಶರಭಟ್ಟರ್. ಹೀಗೆ ನಿಮಿತ್ತೋಪಾದನ ಕಾರಣತ್ವಗಳನ್ನು ಹೇಳಿ ಸಹಕಾರಿಕಾರಣತ್ವವು ಹೇಳಲ್ಪಡದೇ ಇರಲು ಕಾರಣ ಸರ್ವಜ್ಞತ್ವಾದಿ ಗುಣಯೋಗವು ಮುಂದೆ ಹೇಳಲ್ಪಡುವುದರಿಂದಲೂ, ನಿಮಿತ್ತೋಪಾದನಗಳಿಗೆ ಐಕ್ಯವು ಹೇಳಲ್ಪಡುವುದರಿಂದಲೂ, ಅದು ತಾನೇ ಸಿದ್ಧಿಸುತ್ತದೆ ಎಂಬುದರಿಂದಾಗಿದೆ. ಆದ್ದರಿಂದಲೇ ವೇದಾಂತಸೂತ್ರದಲ್ಲೂ ಸಹಕಾರಿ ಕಾರಣತ್ವವು ಪ್ರಧಾನವಾಗಿ ಹೇಳಲ್ಪಟ್ಟಿಲ್ಲ.

## ಸೂ. 31 ಈಶ್ವರನ್ ಸೃಷ್ಟಿಕ್ಕೈಯಾವತು-ಅಚಿತ್ತೈ ಪರಿಣಮಿಪ್ಪಿಕ್ಕೈಯುಮ್, ಚೇತನರ್ಕ್ಕು ಶರೀರೇಂದ್ರಿಯಂಗಳೈಕ್ಕೊಡುತ್ತು ಜ್ಞಾನ ವಿಕಾಸತ್ತೈ ಪಣ್ಣುಕ್ಕೈಯುಮ್.

**'ಅಜಾಮೇಕಾಮ್'; 'ಗೌರನಾದ್ಯಂತವತೀ'; 'ತ್ರಿಗುಣಂ ತಜ್ಜಗದ್ಯೋನಿರನಾದಿ ಪ್ರಭವಾಪ್ಯಯಮ್'**;[1] **'ಅಜೋಹ್ಯೇಕಃ'; 'ಜ್ಞಾಜ್ಞೌದ್ವಾವಜಾವೀಶನೀಶೌ';'ಅಜೋನಿತ್ಯಶ್ಶಾಶ್ವತೋऽಯಂ ಪುರಾಣಃ'**; ಇತ್ಯಾದಿ ಶ್ರುತಿ ಸ್ಮೃತಿಗಳಲ್ಲಿ ಹೇಳುವಂತೆ ನಿತ್ಯವಾಗಿರುವ ಅಚಿತ್ತನ್ನೂ, ಚಿತ್ತನ್ನೂ ಈಶ್ವರನು ಸೃಷ್ಟಿಸುತ್ತಾನೆ ಎನ್ನುವುದು ಹೇಗೆ ಹೊಂದುತ್ತದೆ ಎಂಬುದನ್ನು ಈ ಸೂತ್ರದಲ್ಲಿ ವಿವರಿಸುತ್ತಾರೆ.

ಜಗತ್ಕಾರಣಭೂತನಾದ ಈಶ್ವರನು ಚೇತನಾಚೇತನಾತ್ಮಕವಾದ ಜಗತ್ತನ್ನು ಸೃಷ್ಟಿಸುವುದೆಂದರೆ - **'ತಮಃ ಪರೇ ದೇವ ಏಕೀ ಭವತಿ'**[2] ಎಂಬಂತೆ ತನ್ನೊಡನೆ ಅವಿಭಕ್ತವಾಗಿದ್ದ ತಮಃ ಶಬ್ದ ವಾಚ್ಯವಾದ ಅಚಿತ್ತನ್ನು **'ತತಸ್ಸ್ವಯಂಭೂರ್ಭಗವಾ ನವ್ಯಕ್ತೋವ್ಯಞ್ಜಯನ್ನಿದಮ್'**[3] **ಮಹಾಭೂತಾದಿ ವೃತ್ತಚಾಃ ಪ್ರಾದುರಾಸೀತ್ತಮೋನುದಃ।'** ಎಂಬಂತೆ ಸ್ವಪ್ರೇರಣ ವಿಶೇಷದಿಂದ, ಸ್ವಸ್ಮಾದ್ವಿಭಕ್ತವಾಗಿಸಿ ತನ್ನ ಸಂಕಲ್ಪದಿಂದಲೇ (ತನ್ನ ವಿಶೇಷವಾಗಿರುವುದನ್ನು ತನ್ನಿಂದ ಬೇರ್ಪಡಿಸಿ) ಅನಂತರ ಅಕ್ಷರಾವಸ್ಥವಾಗಿಸಿ, ಅವ್ಯಕ್ತಾವಸ್ಥವಾಗಿಸಿ ಅದನ್ನು ವ್ಯಕ್ತ ಶಬ್ದ ವಾಚ್ಯವಾದ ಸಮಷ್ಟಿವ್ಯಷ್ಟಿರೂಪ ಸಮಸ್ತಕಾರ್ಯಗಳೂ ಆಗುವಂತೆ ಪರಿಣಮಿಸುವುದಾಗಿದೆ. **'ಅಚಿದವಿಶೇಷಿತಾನ್ ಪ್ರಳಯಸೀಮನಿ ಸಂಸರತಃ'** ಎಂಬಂತೆ ಕರಣಕಳೇಬರ ರಹಿತನಾಗಿ, ಭೋಗ ಮೋಕ್ಷ ಶೂನ್ಯನಾಗಿ, ಅಚಿದವಿಶೇಷಿತನಾಗಿದ್ದ ಚೇತನನಿಗೆ ಭೋಗಸ್ಥಾನವಾದ ಶರೀರವನ್ನೂ, ಭೋಗೋಪಕರಣಗಳಾದ ಇಂದ್ರಿಯಗಳನ್ನೂ ನೀಡಿದ್ದಲ್ಲದೆ ಭೋಗಮೋಕ್ಷಾನುಭವಕ್ಕೆ ಯೋಗ್ಯವಲ್ಲದ್ದಾಗಿ ಸಂಕುಚಿತವಾಗಿದ್ದ ಜ್ಞಾನವನ್ನು ವಿಕಸನಗೊಳಿಸುವುದೇ ಆಗಿದೆ. 'ಚೇತನನಿಗೆ' -ಎಂಬುದಾಗಿ ಹೇಳಿರುವುದು ಜಾತ್ಯೇಕವಚನ.(ಇಡೀ ಚೇತನ ವರ್ಗಕ್ಕೇ ಅನ್ವಯಿಸುವುದು)

## ಸೂ. 32 ಸ್ಥಿತಿಪ್ಪಿಕ್ಕೈಯಾವತು – ಸೃಷ್ಟಮಾನ ವಸ್ತುಕ್ಕಳಿಲೇ, ಪಯಿರುಕ್ಕು ನೀರ್ ನಿಲ್ಕೈಪೋಲೇ, ಅನುಕೂಲಮಾಕ ಪ್ರವೇಶಿತ್ತು ನಿನ್ರು, ಸರ್ವರಕ್ಷೈಗಳೈಯುಂ ಪಣ್ಣುಕ್ಕೈ.

ಸೃಷ್ಟಿಪ್ರಕಾರವನ್ನು ವಿವರಿಸಿದ ನಂತರ ಈ ಸೂತ್ರದಲ್ಲಿ 'ಸ್ಥಿತಿ'ಯ ಬಗ್ಗೆ ತಿಳಿಸುತ್ತಾರೆ. 'ಸ್ಥಿತಿಕ್ಕೈಯಾವದು' (ಇರುವಿಕೆ) ಎನ್ನದೆ, ಸ್ಥಿತಿಪ್ಪಿಕ್ಕೈಯಾವದು-'(ಇರಿಸುವಿಕೆ) ಎನ್ನಲು ಕಾರಣ ಸೃಷ್ಟಿ ಸಂಹಾರಗಳಂತೆ ಕರ್ತೃಗತವಲ್ಲದೆ (ಮಾಡುವವನದ್ದೇ ಅಲ್ಲದೆ) ಕರ್ಮೀಭವಿಸುವ ವಸ್ತುಗತವಾಗಿರುವುದರಿಂದಲೂ; ( ಸೃಷ್ಟ್ಯಾದಿಗಳಿಗೆ ಒಳಪಡಿಸುವ ವಸ್ತುಗತ) ಸ್ಥಿತಿಯನ್ನುಂಟುಮಾಡುವುದೇ ಕರ್ತಾವಿನ ಕಾರ್ಯವಾದ್ದರಿಂದಲೂ ಹೀಗೆ ಹೇಳುತ್ತಾರೆ.

(ಸೃಷ್ಟಮಾನ) - 'ತತ್ಸೃಷ್ಟ್ವಾ' ಎಂಬಂತೆ ತನ್ನಿಂದಲೇ ಸೃಷ್ಟವಾದ ವಸ್ತುಗಳಲ್ಲಿ ಪೈರಿಗೆ ರಕ್ಷಕವಾಗಿ ಇರುವ ನೀರಿನಂತೆ 'ತದೇವಾನುಪ್ರಾವಿಶತ್' ಎಂಬಂತೆ ತದ್ರಕ್ಷಣಾನುಕೂಲವಾಗಿ ಒಳಗೆ ಪ್ರವೇಶಿಸಿ ಆಯಾಯಾ ವಸ್ತುಗಳಿಗನುಗುಣವಾದ ಸರ್ವರಕ್ಷೆಗಳನ್ನೂ ಮಾಡುವುದಾಗಿದೆ. ಅನುಪ್ರವೇಶ ಶಬ್ದಕ್ಕೆ 'ಅನುಕೂಲತಯಾ ಪ್ರವೇಶಿಸುವುದು' ಎಂಬುದು ಈ ಸೂತ್ರಕಾರರ ಅಭಿಪ್ರಾಯವಾಗಿದೆ. ಇದರಿಂದ ಸ್ಥಿತಿಪ್ಪಿಕ್ಕೈ ಎಂದರೆ- ಇರಿಸುವುದು. ಎಂದರೆ ಅವುಗಳ ರಕ್ಷಣೆಯನ್ನು ಮಾಡುವುದು ಎಂದಾಗಿದೆ.

## ಸೂ. 33 ಸಂಹರಿಕ್ಕೈಯಾವದು - ಅವಿನೀತನಾದ ಪುತ್ರನ್ನೈ ಪಿತಾ ವಿಲಂಗಿಟ್ಟು ವೈಕ್ಕುಮಾಪ್ಪೋಲೇ, ವಿಷಯಾಂತರಂಗಳಿಲೇ ಕೈವಳರುಕಿರ ಕರಣಂಗಳ್ಳೈ ಕ್ಕುಲೈತ್ತಿಟ್ಟು ವೈಕ್ಕೈ.

ಈ ಸೂತ್ರದಲ್ಲಿ ಸಂಹಾರ (ಪ್ರಳಯದ) ಪ್ರಕಾರವನ್ನು ತಿಳಿಸಲಾಗಿದೆ. 'ವಿಚಿತ್ರಾ ದೇಹಸಂಪತ್ತಿಃ ಈಶ್ವರಾಯ ನಿವೇದಿತುಂ' ಎಂಬಂತೆ ಭಗವಂತನನ್ನು ಆಶ್ರಯಿಸಿ ಉಜ್ಜೀವಿಸುವುದಕ್ಕಾಗಿ ನೀಡಿದ ಕರಣ (ಇಂದ್ರಿಯ) ಗಳಿಂದ ಒಳಿತನ್ನು ಹೊಂದದೆ ಇರುವುದಲ್ಲದೆ, ಬಾಹ್ಯ ವಿಷಯಪ್ರವಣನಾದಾಗ; ಶಾಸ್ತ್ರಗಳಲ್ಲಿನ ವಿಧಿ ನಿಷೇಧಗಳಿಗೆ ಒಳಪಡದೆ ಸ್ವೇಚ್ಛಾಚಾರಿಯಾದ ಮಗನನ್ನು ಹಿತಪರನಾದ ತಂದೆ ಯಾವ ಕಾರ್ಯವನ್ನೂ ಮಾಡಲಾಗದಂತೆ ಬಂಧನದಲ್ಲಿ ಅಡಗಿಸಿಡುವಂತೆ, ಭಗವದ್ವಿಷಯದ ಹೊರತಾಗಿ ಇತರ ವಿಷಯಗಳಲ್ಲಿ ಅತಿ ಪ್ರವಣನಾಗಿ ವರ್ತಿಸುವ ಇಂದ್ರಿಯಗಳನ್ನು ಅಳಿಸಿ ಅಡಗಿಸಿಡುವುದೇ 'ಸಂಹಾರ' ವಾಗಿದೆ.

## ಸೂ. 34 ಇಮ್ಮೂನ್ರುಮ್ ತನಿತ್ತನಿಯೇ ನಾಲುಪ್ರಕಾರ ಮಾಯಿರುಕ್ಕಮ್.

ಈ ಸೃಷ್ಟಿ ಸ್ಥಿತಿ, ಸಂಹಾರಗಳು ಪ್ರತ್ಯೇಕವಾಗಿ ನಾಲ್ಕು ವಿಧವಾಗಿರುತ್ತವೆ.

**ಚತುರ್ವಿಭಾಗ ಸ್ಸಂಸೃಷ್ಟೌ ಚತುರ್ಧಾಸಂಸ್ಥಿತಸ್ಸ್ಥಿತೌ।**

**ಪ್ರಳಯಂಚ ಕರೋತ್ಯನ್ತೇ ಚತುರ್ಭೇಧೋ ಜನಾರ್ದನಃ।**[1] ಎನ್ನಲಾಗಿದೆ.

## ಸೂ. 35 ಸೃಷ್ಟಿಯಿಲ್ ಬ್ರಹ್ಮಾವುಕ್ಕುಮ್, ಪ್ರಜಾಪತಿಗಳುಕ್ಕುಮ್, ಕಾಲತ್ತುಕ್ಕುಮ್, ಸಕಲಜಂತುಕ್ಕಳುಕ್ಕುಮ್ ಅಂತರ್ಯಾಮಿಯಾಯ್, ರಜೋಗುಣತ್ತೋಡೇ ಕೂಡಿ ಸೃಷ್ಟಿಕ್ಕುಮ್.

ಸೃಷ್ಟಿಯಲ್ಲಿ ಚತುರ್ದಶ ಭುವನಗಳ ಸೃಷ್ಟಾವಾಗಿ, ಸಮಷ್ಟಿ ಪುರುಷನಾದ ಚತುರ್ಮುಖ ಬ್ರಹ್ಮನಿಗೂ, ಅವನಿಂದ ಸೃಷ್ಟರಾದ ನಿತ್ಯ ಕರ್ತಾಗಳಾದ ಪ್ರಜಾಪತಿಗಳಿಗೂ, ಸೃಷ್ಟಿಗೆ ಅವಶ್ಯಕವಾದ ಕಾಲಕ್ಕೂ, ಒಂದಕ್ಕೊಂದು ಉತ್ಪಾದಕಗಳಾದ ಜಂತುಗಳಿಗೂ, ತತ್ತತ್ ಪ್ರವೃತ್ತಿಗಳೆಲ್ಲವೂ ತನ್ನಲ್ಲಿ ಪರ್ಯವಸನವಾಗುವಂತೆ ಅಂತರಾತ್ಮಾವಾಗಿ ಪ್ರವೃತ್ತಿಗೆ ಕಾರಣವಾದ 'ರಜೋಗುಣ ವಿಶಿಷ್ಟವಾಗಿ' ಸೃಷ್ಟಿಸುತ್ತಾನೆ.

**ಏಕೇನಾಂಶೇನ ಬ್ರಹ್ಮಾsಸೌ ಭವತ್ಯವ್ಯಕ್ತ ಮೂರ್ತಿಮಾನ್।**

**ಮರೀಚಿ ಮಿಶ್ರಾಪತಯಃ ಪ್ರಜಾನಾಮನ್ಯಭಾಗತಃ ।**

ಕಾಲಸ್ತೃತೀಯಸ್ತಸ್ಯಾಂಶಸ್ಸರ್ವ ಭೂತಾನಿ ಚಾ ಪರಃ ।
ಇತ್ಥಂ ಚತುರ್ಧಾಸಂಸೃಷ್ಟೌ ವರ್ತತೇऽಸಾ ರಜೋಗುಣಃ।[1] ಎನ್ನಲಾಗಿದೆ.

## ಸೂ. 36 ಸ್ಥಿತಿಯಿಲ್-ವಿಷ್ಣ್ವಾದಿರೂಪೇಣ ಅವತರಿತ್ತುಮನ್ವಾದಿ ಮುಖೇನ ಶಾಸ್ತ್ರಂಗಳೈ ಪ್ರವರ್ತಿಪ್ಪಿತ್ತು, ನಲ್ವಳಿಕಾಟ್ಟಿ ಕಾಲತ್ತುಕ್ಕುಂ ಸಕಲ ಭೂತಂಗಳುಕ್ಕುಮ್ ಅಂತರ್ಯಾಮಿಯಾಯ್, ಸತ್ವಗುಣತ್ತೋಡೇ ಕೂಡಿ ಸ್ಥಿತಿಪ್ಪಿಕ್ಕುಮ್.

ಸ್ಥಿತಿಯಲ್ಲಿ 'ಮಧ್ಯೇ ವಿರಿಂಚ ಗಿರಿಶಃ' 'ಪ್ರಥಮಾವತಾರಃ'[1] ಎಂಬ ವಿಷ್ಣು ಅವತಾರದಿಂದ ಪ್ರಾರಂಭಿಸಿ 'ಸುರನರತಿರಶ್ಚಾಮವತರನ್';[2] 'ಎನ್ನಿನ್ರಯೋನಿಯುಮಾಯ್ಪಿರಂದಾಯ್'[3] ಎಂಬಂತೆ ಅವತಾರಗಳನ್ನು ಮಾಡಿ 'ಯದ್ವೈಕಿಂಚಮನುರವದತ್ ತದ್ಭೇಷಜಮ್'[4] ಎಂದು ಆಪ್ತತಮನಾದ ಶ್ರುತಿ ಪ್ರಸಿದ್ಧನಾದ ಮನು , ಯಾಜ್ಞವಲ್ಕ್ಯ ಪರಾಶರ, ವಾಲ್ಮೀಕಿ, ಶೌನಕಾದಿಗಳ ಮುಖೇನ ಸ್ಮೃತಿ ಇತಿಹಾಸ ಪುರಾಣರೂಪ ಶಾಸ್ತ್ರಗಳನ್ನು ಪ್ರವರ್ತಿಸಿ ಚೇತನರು ದುರ್ಮಾರ್ಗದಲ್ಲಿ ಪ್ರವೃತ್ತರಾಗದೆ ಉಜ್ಜೀವಿಸುವುದಕ್ಕೆ ಅವಶ್ಯಕವಾದ ಸನ್ಮಾರ್ಗಗಳನ್ನು ತೋರಿ, ರಕ್ಷಣೋಪಯೋಗಿಯಾದ ಕಾಲಕ್ಕೂ ಅಂತರಾತ್ಮನಾಗಿ ಜ್ಞಾನಪ್ರಕಾಶಾದಿ ಹೇತುವಾದ 'ಸತ್ವಗುಣ ವಿಶಿಷ್ಟನಾಗಿ' ಸ್ಥಿತಿಯನ್ನುಂಟು ಮಾಡಿಸುತ್ತಾನೆ.

ಏಕಾಂಶೇನ ಸ್ಥಿತೋವಿಷ್ಣುಃ ಕರೋತಿ ಪರಿಪಾಲನಮ್।
ಮನ್ವಾದಿರೂಪೀ ಚಾನ್ಯೇನ ಕಾಲ ರೂಪೇಣ ಚ।
ಸರ್ವ ಭೂತೇಷುಚಾನ್ಯೇನ ಸಂಸ್ಥಿತಃ ಕುರುತೇ ಸ್ಥಿತಿಮ್।
ಸತ್ವಂ ಗುಣಂ ಸಮಾಶ್ರಿತ್ಯ ಜಗತಃ ಪುರುಷೋತ್ತಮಃ।[5]

ಎಂದು ಪುರಾಣವು ತಿಳಿಸುತ್ತದೆ. 'ಏಕಾಂಶೇನ ಸ್ಥಿತೇ ವೀಷ್ಣುಃ' ಎಂದು 'ವಿಷ್ಣು' ಅವತಾರವೊಂದನ್ನು ಹೇಳಿರುವುದು, ಎಲ್ಲ ಅವತಾರಗಳಿಗೂ ಉಪಲಕ್ಷಣವಾಗಿದೆ. ಆದ್ದರಿಂದಲೇ 'ವಿಷ್ಣ್ವಾದಿರೂಪೇಣ' ಎಂದು ಹೇಳಿದ್ದಾರೆ.

## ಸೂ. 37 ಸಂಹಾರತ್ತಿಲ್ ರುದ್ರನುಕ್ಕುಮ್, ಅಗ್ನ್ಯನ್ತಕಾದಿಗಳುಕ್ಕುಮ್, ಕಾಲತ್ತುಕ್ಕುಮ್, ಸಕಲ ಭೂತಂಗಳುಕ್ಕುಮ್ ಅಂತರ್ಯಾಮಿಯಾಯ್ ತಮೋಗುಣತ್ತೋಡೇ ಕೂಡಿ ಸಂಹರಿಕ್ಕುಮ್.

ಸಂಹಾರದಲ್ಲಿ ಸಂಹರ್ತಾಗಳಲ್ಲಿ ಪ್ರಧಾನನಾದ ರುದ್ರನಿಗೂ, ಅವಾಂತರ (ಮಧ್ಯಂತರ) ಸಂಹಾರ್ತಗಳಾದ ಅಗ್ನಿ, ಯಮಾದಿಗಳಿಗೂ,ಸಂಹಾರೋಪಯೋಗಿಯಾದ ಕಾಲಕ್ಕೂ, ಒಂದಕ್ಕೊಂದು ನಾಶಕವಾದ ಸಕಲ ಭೂತಗಳ ತತ್ತತ್ ಪ್ರವೃತ್ತಿಗಳೆಲ್ಲವೂ ತನ್ನದಾಗುವಂತೆ ಅಂತರಾತ್ಮನಾಗಿ, ಏನನ್ನೂ ಕಾಣದೆ ಇರುವುದಕ್ಕೆ ಹೇತುವಾದ ತಮೋಗುಣ ವಿಶಿಷ್ಟನಾಗಿ ಸಂಹಾರ ಮಾಡುತ್ತಾನೆ.

ಆಶ್ರಿತ್ಯತಮಸೋವೃತ್ತಿಮನ್ತಕಾಲೇ ತಥಾಪ್ರಭುಃ ।
ರುದ್ರ ಸ್ವರೂಪೋ ಭಗವಾನೇಕಾಂಶೇನ ಭವತ್ಯಜಃ ।

ಅಗ್ನ್ಯನ್ತಕಾದಿ ರೂಪೇಣ ಭಾಗೇನಾಽನ್ಯೇನವರ್ತತೇ।
ಕಾಲಸ್ವರೂಪೋ ಭಾಗೋಽನ್ಯ ಸ್ಸರ್ವಭೂತಾನಿಚಾಪರಃ ।
ವಿನಾಶಂ ಕುರ್ವತಸ್ತಸ್ಯ ಚತುರ್ಧೈವ ಮಹಾತ್ಮನಃ । [1]

ಎನ್ನಲಾಗಿದೆ. ಸೃಷ್ಟ್ಯಾದಿಗಳಲ್ಲಿ ಚತುರ್ವಿಭಾಗಗಳು ಹೇಳಲ್ಪಡುವೆಡೆಯಲ್ಲಿ 'ಅಂಶ' ಶಬ್ದದಿಂದ-ಬ್ರಹ್ಮಾದಿಗಳು ಹೇಳಲ್ಪಟ್ಟಿದ್ದಾರೆ. ಅವರುಗಳಿಗೆ ಭಗವಾನ್ ಪ್ರಕಾರಭೂತನಾದ್ದರಿಂದ ಎಂಬುದನ್ನು ಅನಂತರ

ಬ್ರಹ್ಮದಕ್ಷಾದಯಃ ಕಾಲಸ್ತಥೈವಾಖಿಲ ಜಂತವಃ ।
ವಿಭೂತಯೋಹರೇತಾಜಗತ್ ಸೃಷ್ಟಿ ಹೇತವಃ ॥
ವಿಷ್ಣುರ್ಮನ್ವಾದಯಃ ಕಾಲಸ್ಸರ್ವಭೂತಾನಿದ್ವಿಜ ।
ಸ್ಥಿತೇರ್ನಿಮಿತ್ತ ಭೂತಸ್ಯ ವಿಷ್ಣೋಃ ರೇತಾ ವಿಭೂತಯಃ ॥
ರುದ್ರಃಕಾಲಾಂತಕಾದ್ಯಾಶ್ಚ ಸಮಸ್ತಾಶ್ಚೈವ ಜಂತವಃ ।
ಚತುರ್ಧಾಪ್ರಳಯೇಹ್ಯೇ; ಜನಾರ್ದನ ವಿಭೂತಯಃ ॥ [2]

ಎಂದು ಮೂರು ಶ್ಲೋಕಗಳಲ್ಲಿ ಸ್ಫುಟವಾಗಿ ಶ್ರೀ ಪರಾಶರ ಮಹರ್ಷಿಗಳು ಶ್ರೀ ವಿಷ್ಣು ಪುರಾಣದಲ್ಲಿ ಪ್ರತಿಪಾದಿಸಿದರು. ಇದನ್ನು ಪರಿಗಣಿಸಿಯೇ ಇಲ್ಲಿ 'ಅಂತರ್ಯಾಮಿಯಾಯ್' ಎನ್ನಲಾಗಿದೆ. 'ವಿಷ್ಣೋರ್ಮನ್ವಾದಯಃ' ಎಂಬ ಶ್ಲೋಕದಲ್ಲಿ ವಿಷ್ಣುವನ್ನೂ ಭಗವಂತನ ವಿಭೂತಿಯಾಗಿ ಹೇಳಿದ್ದು, ಅವತಾರ ಪ್ರಯುಕ್ತವಾದ ವಿಗ್ರಹಪರವಾದದ್ದಾಗಿದೆ.

## ಸೂ. 38 ಶಿಲರೈ ಸುಖಿಗಳಾಗವುಮ್, ಶಿಲರೈ ದುಃಖಿಗಳಾಗವುದು, ಸೃಷ್ಟಿತ್ತಾಲ್ ಈಶ್ವರನುಕ್ಕು ವೈಷಮ್ಯ ನೈ ರ್ಘಣ್ಯಂಗಳ್ ವಾರಾದೋವೆನ್ನಿಲ್.

ವಿಷಮಸೃಷ್ಟಿಯನ್ನು ಕಂಡು ಪರಮಾತ್ಮನ ವಿಷಯದಲ್ಲಿ ಏರ್ಪಡುವ ಶಂಕೆಯನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ. ಸೃಷ್ಟಿಸುವಾಗ ಸರ್ವಾತ್ಮಗಳನ್ನೂ ಏಕ ಪ್ರಕಾರವಾಗಿ ಸೃಷ್ಟಿಸಿಲ್ಲ. ದೇವಮನುಷ್ಯಾದಿ ವಿಭಾಗೇನ ಕೆಲವು ಆತ್ಮಗಳನ್ನು ಸುಖಿಗಳಾಗಿಯೂ ಕೆಲವು ಆತ್ಮಗಳನ್ನು ದುಃಖಿಗಳಾಗಿಯೂ ಸೃಷ್ಟಿಸಿದರೆ, ಸರ್ವಸಮವಾಗಿಯೂ, ಪರಮದಯಾವಾನಾಗಿರುವ ಈಶ್ವರನಿಗೆ 'ವೈಷಮ್ಯ'ವೂ (ಪಕ್ಷಪಾತ) ದುಃಖಿಗಳಾಗಿ ಸೃಷ್ಟಿಸುವುದರಿಂದ (ಪರರ ದುಃಖವನ್ನು ಸಹಿಸದ) 'ಕೃಪೆ' ಇಲ್ಲದಿರುವಿಕೆಯೂ ಏರ್ಪಡುವುದಿಲ್ಲವೇ ಎಂದರೆ

## ಸೂ. 39 ಕರ್ಮಮಡಿಯಾಕಚ್ಚೆಯ್‌ಕೈಯಾಲುಮ್, ಮಣ್‌ತಿನ್ರ ಪ್ರಜೈಯೈ ನಾಕ್ಕಿಲ್ ಕುರಿಯಿಟ್ಟು ಅಂಜಪ್ಪಣ್ಣುಮ್ ಮಾತಾವೈಪ್ಪೋಲೇ; ಹಿತ ಪರನಾಯ್ ಶೆಯ್‌ಕೈಯಾಲುಮ್ ವಾರಾತು.

ಇಲ್ಲ ಎನ್ನುತ್ತಾರೆ. ಕೆಲವರನ್ನು ಸುಖಿಗಳಾಗಿಯೂ, ಕೆಲವರನ್ನು ದುಃಖಿಗಳಾಗಿಯೂ ಸೃಷ್ಟಿಸುವುದು ಎಂಬ ವಿಷಮಸೃಷ್ಟಿಯನ್ನು ಚೇತನರ ಕರ್ಮಾನುಸಾರವಾಗಿ ಮಾಡುವುದರಿಂದ ವೈಷಮ್ಯವು ಬರುವುದಿಲ್ಲ.

ದುಃಖಿಗಳಾಗಿ ಸೃಷ್ಟಿಸುವುದು ಏಕೆಂದರೆ; - ತನಗೆ ರೋಗವನ್ನುಂಟುಮಾಡುವ ಮಣ್ಣನ್ನು ಆಸೆಯಿಂದ ತಿನ್ನುವ ಮಗುವನ್ನು ಇನ್ನೂ ಅಧಿಕವಾಗಿ ತಿನ್ನದಂತೆ ನಾಲಿಗೆಯಲ್ಲಿ ಬರೆ ಇಟ್ಟು ಮಣ್ಣು ತಿನ್ನಲು ಅಂಜುವಂತೆ ಮಾಡುವ

ಹಿತ ಪರಳಾದ ತಾಯಿಯಂತೆ, ಈ ಚೇತನನು ಇನ್ನು ದುಃಖ ಹೇತುವಾದ ಕರ್ಮಗಳನ್ನು ಮಾಡಲು ಅಂಜುವಂತೆ ಹಿತಪರನಾಗಿ ದುಃಖಗಳನ್ನಾಗಿ ಸೃಷ್ಟಿಸುವುದರಿಂದ 'ನೈರ್ಘೃಣ್ಯ' ವು (ಕ್ರೌರ್ಯ) ಈಶ್ವರನಿಗೆ ಉಂಟಾಗುವುದಿಲ್ಲ. ಇದರಿಂದ 'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್'[1] ಎಂಬ ವೇದಾಂತ ಸೂತ್ರದ ಅರ್ಥವನ್ನು ವಿವರಿಸಲಾಯಿತು.

**ನಿಮ್ನೋನ್ನತಂ ಚ ಕರುಣಂ ಚ ಜಗದ್ವಿಚಿತ್ರಂ ಕರ್ಮವ್ಯಪೇಕ್ಷ್ಯ ಸೃಜತಸ್ತವ ರಂಗಶೇಷಿನ್।**
**ವೈಷಮ್ಯ ನಿರ್ಘೃಣತಯೋರ್ಖಲು ಪ್ರಸಕ್ತಿ ಸ್ತದ್ಬ್ರಹ್ಮ ಸೂತ್ರ ಸಚಿವಾ ಶ್ಶ್ರುತ ಯೋ ಗೃಣಂತಿ।** [2]

ಎಂದು ಇದನ್ನೇ ಶ್ರೀ ಪರಾಶರಭಟ್ಟರೂ ತಿಳಿಸಿದ್ದಾರೆ.

## ಸೂ. 40 ಇವನ್ನಾನ್- 'ಮುನ್ನೀರ್‌ಞಾಲಮ್ ಪಡೈತ್ತ ಮುಕಿಲ್‌ವಣ್ಣನೇ' ಎನ್ಗಿರಪಡಿಯೇ ಸವಿಗ್ರಹನಾಯ್‌ಕ್ಕೊಂಡು ಸೃಷ್ಟ್ಯಾದಿಗಳೈಪ್ಪಣ್ಣುಮ್

'ಸಕಲ ಜಗತ್ಸರ್ಗಸ್ಥಿತಿ ಸಂಹಾರಕರ್ತಾವಾಯ್' (ಈ .ಪ್ರ. ಸೂ1) ಎಂಬುದನ್ನು ಹಿಂದಿನ ಸೂತ್ರಗಳಲ್ಲಿ ವಿವರಿಸಿ 'ವಿಲಕ್ಷಣ ವಿಗ್ರಹಯುಕ್ತನಾಯ್' ಎಂಬುದನ್ನು ವಿವರಿಸಲು ಇಲ್ಲಿಂದ ಪ್ರಾರಂಭಿಸುತ್ತಾರೆ. ಆದರೆ ಇವೆರಡರ ನಡುವೆ ಹೇಳಿದ **'ಆರ್ತಾದಿ ಚತುರ್ವಿಧ ಪುರುಷ ಸಮಾಶ್ರಯಣೀಯತ್ವವೂ, ಧರ್ಮಾದಿಚತುರ್ವಿಧ ಫಲ ಪ್ರದತ್ವ'** ಎಂಬೀ ಎರಡನ್ನೂ ವಿವರಿಸದೇ ಇರುವುದೇಕೆಂದರೆ, **'ಕಾರಣಂತು ಧ್ಯೇಯಃ'**;[1] **'ಯೋಬ್ರಹ್ಮಾಣಂ ವಿದಧಾತಿ ಪೂರ್ವಮ್'**[2] ಇತ್ಯಾದಿಗಳಲ್ಲಿ ಹೇಳುವಂತೆ ಕಾರಣವಸ್ತುವೇ ಉಪಾಸ್ಯವೂ ಆಶ್ರಯಣೀಯವೂ ಆದ್ದರಿಂದಲೂ; **'ಫಲಮತ ಉಪಪತ್ತೇಃ'** [3] ಎಂಬಂತೆ ಫಲಪ್ರದ ಹೇತುವಾದ ಸರ್ವಶಕ್ತಿಯೋಗವು ಹಿಂದೆ ಹೇಳಲ್ಪಟ್ಟಿತೆಂಬುದರಿಂದಲೂ; ಧರ್ಮಾದಿ ಚತುರ್ವಿಧ ಫಲಪ್ರದತ್ವವು ಅರ್ಥಾತ್ ಹೇಳಲ್ಪಟ್ಟಿತೆಂಬುದರಿಂದಲೂ, ಅವುಗಳಲ್ಲಿ ಉಪ ಪಾದನೀಯಾಂಶವು ಅಧಿಕವಾಗಿಲ್ಲದಿರುವುದರಿಂದಲೂ, ಅವೆರಡನ್ನೂ ವಿವರಿಸಿಲ್ಲ. ಆದ್ದರಿಂದ ಕಾರಣತ್ವದೊಡನೆ ವಿಗ್ರಹಯೋಗವನ್ನು ಅನ್ವಯಿಸಿ ಈ ಸೂತ್ರದಿಂದ ವಿವರಣೆಯನ್ನು ಪ್ರಾರಂಭಿಸುತ್ತಾರೆ.

**(ಇವನ್ನಾನ್..... ಪ್ಪಣ್ಣುಮ್)** ಹೀಗೆ ಜಗತ್‌ಸೃಷ್ಟಿಕರ್ತಾವಾಗಿ ಹೇಳಲ್ಪಟ್ಟ ಇವನೇ,'ನದಿನೀರು **(ಆತ್ತುನೀರ್)** ಉಕ್ಕುವನೀರು **(ಊತ್ತುನೀರ್)** ವರ್ಷಜಲ **(ಮಳೀ ನೀರು)** ಎಂಬ ಮೂರು ವಿಧವಾದ ನೀರನ್ನೊಳಗೊಂಡ ಸಮುದ್ರದೊಡನೆ ಕೂಡಿದ ಜಗತ್ತನ್ನು ಸೃಷ್ಟಿಸಿದ. ಮಳೆತರುವ ಮೋಡದಂತೆ ಇರುವ ದಿವ್ಯಮಂಗಳ ವಿಗ್ರಹ ಉಳ್ಳವನು.' ಎಂದು ಆಳ್ವಾರರ ದಿವ್ಯ ಪ್ರಬಂಧವು ಹೇಳುವಂತೆ ವಿಗ್ರಹ ಸಹಿತನಾಗಿಯು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಾನೆ. 'ಮುಕಿಲ್ ವಣ್ಣನ್' ಎಂಬುದನ್ನು ಔದಾರ್ಯಗುಣಪರವಾಗಿ ಹಲವು ವ್ಯಾಖ್ಯಾತಾಗಳು ವ್ಯಾಖ್ಯಾನ ಮಾಡಿದರೂ, ವಿಗ್ರಹ ಪರವಾಗಿ ಇಲ್ಲಿ ಇವರು ಹೇಳಿರುವುದರಿಂದ ಹೀಗೂ ಒಂದು ಅಭಿಪ್ರಾಯವುಟೆಂದು ಭಾವಿಸಬೇಕು. ಒಂದು ವಾಕ್ಯಕ್ಕೆ ಹಲವು ಯೋಜನೆಗಳಿರುವುದರಿಂಧ ಇದು ಉಪಪನ್ನವಾಗುತ್ತದೆ.

## ಸೂ. 41 ವಿಗ್ರಹನ್ನಾನ್ ಸ್ವರೂಪಗುಣಂಗಳಿಲುಂ ಕಾಟ್ಟಿಲ್ ಅತ್ಯನ್ತಾಭಿಮತಮಾಯ್, ಸ್ವಾನುರೂಪಮಾಯ್, ನಿತ್ಯಮಾಯ್. ಏಕರೂಪಮಾಯ್, ಶುದ್ಧ ಸತ್ವಾತ್ಮಕಮಾಯ್, ಚೇತನದೇಹಮ್ಪೋಲೇ, ಜ್ಞಾನಮಯಮಾನ ಸ್ವರೂಪತ್ತೈ ಮರೈಕ್ಕೈಯನ್ರಿಕ್ಕೇ, ಮಾಣಿಕಚ್ಚೆಪ್ಪಿಲೇ ಪೊನ್ನೈಯಿಟ್ಟು ವೈತ್ತಾಪ್ಪೋಲೇಯಿರುಕ್ಕ

**ಪೊನ್ನುರುವಾನ ದಿವ್ಯಾತ್ಮಸ್ವರೂಪತ್ತುಕ್ಕು ಪ್ರಕಾಶಕಮಾಯ್, ನಿರವಧಿಕ ತೇಜೋರೂಪ ಮಾಯ್, ಸೌಕುಮಾರ್ಯಾದಿಕಲ್ಯಾಣಗುಣಗಣ ನಿಧಿಯಾಯ್, ಯೋಗಿಧ್ಯೇಯಮಾಯ್, ಸಕಲ ಜನ ಮೋಹನಮಾಯ್, ಸಮಸ್ತ ಭೋಗ ವೈರಾಗ್ಯಜನಕಮಾಯ್, ನಿತ್ಯಮುಕ್ತಾನು ಭಾವ್ಯಮಾಯ್, 'ವಾಶತ್ತಡಂ ಪೋಲೇ ಸಕಲತಾಪ ಹರಮಾಯ್, ಅನಂತಾವತಿ ಗಂಧಮಾಯ್, ಸರ್ವರಕ್ಷಕಮಾಯ್, ಸರ್ವಾಶ್ರಯಮಾಯ್, ಅಸ್ತ್ರಭೂಷಣ ಭೂಷಿತಮಾಯಿರುಕ್ಕುಮ್.**

ಭಗವಾನನ ದಿವ್ಯಮಂಗಳ ವಿಗ್ರಹ ವೈಲಕ್ಷಣ್ಯವನ್ನು ವಿಸ್ತರೇಣ ಈ ಸೂತ್ರದಿಂದ ಉಪಪಾದಿಸುತ್ತಾರೆ.

**(ವಿಗ್ರಹನ್ದಾನ್...... ಅಭಿಮತಮಾಯ್)** - ಪರಮಾತ್ಮನ 'ದಿವ್ಯಮಂಗಳ ವಿಗ್ರಹವು' ಸ್ವರೂಪಗುಣಗಳಿಗಿಂತ ಅತ್ಯಂತ ಅಭಿಮತವಾಗಿರುವುದೆಂದರೆ, ಆನಂದಮಯವಾದ ಸ್ವರೂಪವೂ, ಆನಂದಾವಹವೂ ಆದ ಗುಣಗಳಂತಲ್ಲದೆ, ನಿರತಿಶಯಾನಂದವಹವಾಗಿರುವುದರಿಂದ ಅದಕ್ಕಿಂತಲೂ ಅಭಿಮತವಾಗಿರುತ್ತದೆ ಎಂದರ್ಥ. 'ಇಚ್ಛಾಗೃಹೀತಾಭಿಮತೋರುದೇಹಃ'[1] ಸ್ವೇಚ್ಛೆಯಿಂದ ಪರಿಗ್ರಹಿಸಿದ ದಿವ್ಯಮಂಗಳವಿಗ್ರಹ- ಎನ್ನಲಾಗಿದೆ. (ಸ್ವರೂಪ ಗುಣಗಳಿಗಿಂತ ರೂಪವು ಅತ್ಯಧಿಕವಾಗಿ ಅಭಿಮತ ಎಂಬುದಾಗಿದೆ.)

**(ಸ್ವಾನುರೂಪಮಾಯ್)**- ಅನನುರೂಪವಾಗಿದ್ದರೂ, ಅಭಿಮತವಾಗಿರುವಂತಲ್ಲದೆ ತನಗೆ ಅನುರೂಪವಾಗಿರುವಿಕೆ.

**(ನಿತ್ಯಮಾಯ್)** - ಸ್ವರೂಪಗುಣಗಳಂತೆ ಅನಾದಿನಿಧನವಾಗಿರುವಿಕೆ. ಲೋಕದಲ್ಲಿ ಅವಯವವುಳ್ಳವರಲ್ಲಿ ಅನಿತ್ಯತ್ವವು ಕಂಡು ಬರುವುದರಿಂದ, ಪರಮಾತ್ಮನ ದಿವ್ಯಮಂಗಳವಿಗ್ರಹಕ್ಕೂ ಅವಯವಿತ್ವೇನ ಅನಿತ್ಯತ್ವವು ಏರ್ಪಡುವುದಿಲ್ಲವೇ ಎಂದರೆ ಇಲ್ಲ, 'ಅವಯವ ಸಂಬಂಧ ಮಾತ್ರವೇ ಅನಿತ್ಯತ್ವದ ಕಾರಣವಲ್ಲ. ಅವಯವ ಆರಬ್ಧತೆ (ಪ್ರಾರಂಭ) ಅನಿತ್ಯತ್ವದ ಕಾರಣ. ಅವಯವ ಸಂಬಂಧವೇ ಅನಿತ್ಯತ್ವದ ಕಾರಣವಾಗಿದ್ದರೆ ಆ ಅವಯವ ಸಂಬಂಧವಿರುವ ಆತ್ಮನಿಗೂ ಅನಿತ್ಯತ್ವ ಬರಬೇಕಿತ್ತು ;ಆದರೆ ಪರಮಾತ್ಮನ ದಿವ್ಯಮಂಗಳವಿಗ್ರಹದಲ್ಲಿ ಅವಯವದ ಆರಬ್ಧತೆಯ ಬಗ್ಗೆ ಪ್ರಮಾಣವಿಲ್ಲದೇ ಇರುವುದರಿಂದ ಅವಯವಗಳೊಡನೆ ಕೂಡಿದ್ದರೂ ನಿತ್ಯವಾಗಿರುತ್ತದೆ. ಎಂದೂ ವಿವರಣೆಯಲ್ಲಿ ಪೆರಿಯವಾಚ್ಚಾನ್ ಪಿಳ್ಳೈ ಅನುಗ್ರಹಿಸಿದ್ದಾರೆ.

**(ಏಕರೂಪಮಾಯ್)** -ವೃದ್ಧಿ (ಹಿಗ್ಗುವಿಕೆ) ಕ್ಷಯಾದಿ (ಕುಗ್ಗುವಿಕೆ) ವಿಕಾರ ರಹಿತವಾಗಿರುವಿಕೆ. **'ಸದೈಕರೂಪರೂಪಾಯ'** ಎನ್ನಲಾಗಿದೆ.

**(ಶುದ್ಧಸತ್ವಾತ್ಮಕಮಾಯ್)**- ಗುಣಾಂತರ (ರಜಸ್ಸು, ತಮಸ್ಸುಗಳ) ಸಂಸರ್ಗವಿಲ್ಲದ ಶುದ್ಧ ಸತ್ವಕ್ಕೇ ಆಶ್ರಯ ವಾಗಿರುವ ಅಪ್ರಾಕೃತ ದ್ರವ್ಯವೇ ಶರೀರವಾಗಿರುವಿಕೆ. ಇದನ್ನೇ 'ನ ತಸ್ಯ ಪ್ರಾಕೃತಾ ಮೂರ್ತಿಃ'[2] ಎನ್ನಲಾಗಿದೆ.

**(ಚೇತನ..... ಪ್ರಕಾಶಕಮಾಯ್)** - ಶುದ್ಧ ಸತ್ವಾತ್ಮಕವಾದ್ದರಿಂದ ಗುಣತ್ರಯಗಳಿಗೆ ಆಶ್ರಯವಾದ ಜೀವಾತ್ಮನ ದೇಹದಂತಲ್ಲದೆ,ಜ್ಞಾನಮಯವಾದ್ದರಿಂದ ತೇಜೇರೂಪವಾದ ಸ್ವರೂಪವನ್ನು ಮರೆಸದೆ, ಮಾಣಿಕ್ಯದಿಂದ ಚಿಮಿಣಿಯನ್ನು ಮಾಡಿ ಅದರಲ್ಲಿ ಬಂಗಾರವನ್ನಿಟ್ಟರೆ ಒಳಗಿರುವ ಬಂಗಾರದ ಪ್ರಕಾಶವನ್ನು ಅದು ಹೊರಗೆ ಪ್ರಸರಿಸುವ ಹಾಗೆ **'ಎಣ್ಣುಮ್ ಪೊನ್ನುರುವಾಯ್'** ಎಂಬಂತೆ ಸ್ಪೃಹಣೀಯವಾದ್ದರಿಂದ 'ಬಂಗಾರ ರೂಪ' ವೆಂದು ಹೇಳಲ್ಪಡುವಂತೆ ದಿವ್ಯಾತ್ಮ ಸ್ವರೂಪಕ್ಕೆ ಪ್ರಕಾಶಕವಾಗಿರುವಿಕೆ.

**(ನಿರವಧಿಕ ತೇಜೋ ರೂಪಮಾಯ್)** - ನಿತ್ಯಮುಕ್ತರ ವಿಗ್ರಹವೂ,(ಶರೀರವೂ) ಭಗವಂತನ ದಿವ್ಯಮಂಗಳ ವಿಗ್ರಹವೂ ಒಂದೇ ದ್ರವ್ಯವಾಗಿದ್ದರೂ, ಒಂದೇ ದ್ರವ್ಯಾತ್ಮಕವಾದ ಖದ್ಯೋತಶರೀರಗಳ (ಆಕಾಶದಲ್ಲಿರುವ ಇತರ ಗ್ರಹ ತಾರೆಗಳು) ತೇಜಸ್ಸಿಗಿಂತಲೂ, ಸೂರ್ಯನ ಶರೀರಕ್ಕುಂಟಾದ ತೇಜೋತಿಶಯದಂತೆ, ನಿತ್ಯಮುಕ್ತರದು ಸಾವಧಿಕವಾಗುವಂತೆ ತಾನು ನಿರವಧಿಕ ತೇಜಸ್ಸನ್ನುಳ್ಳವನಾಗಿರುವಿಕೆ.

**(ಸೌಕುಮಾರ್ಯಾದಿ ಕಲ್ಯಾಣ ಗುಣಗಣ ನಿಧಿಯಾಯ್)** - ಸೌಕುಮಾರ್ಯ, ಸೌಂದರ್ಯ ,ಲಾವಣ್ಯ , ಸೌಗಂಧ್ಯ, ಯೌವನ ಮೊದಲಾದ ಕಲ್ಯಾಣಗುಣ ಸಮೂಹಕ್ಕೆ ಉಚಿತ ಆಶ್ರಯ ವಾಗಿರುವಿಕೆ. **'ಸೌಂದರ್ಯ ಸೌಗಂಧ್ಯ ಸೌಕುಮಾರ್ಯ ಲಾವಣ್ಯ ಯೌವನಾದ್ಯನಂತ ಗುಣನಿಧಿದಿವ್ಯರೂಪ'** ಎಂದು ಸ್ವಾಮಿ ಎಂಬೆರುಮಾನಾರ್ ಗದ್ಯತ್ರಯದಲ್ಲಿ ಅನುಗ್ರಹಿಸಿದ್ದಾರೆ.

**(ಯೋಗಿಧ್ಯೇಯಮಾಯ್)** - ಭಗವದ್ಧ್ಯಾನಪರರಾದ ಪರಮಯೋಗಿಗಳಿಗೆ ಶುಭಾಶ್ರಯವಾಗಿ ಸದಾಕಾಲ ಧ್ಯಾನ ವಿಷಯವಾಗಿರುವಿಕೆ.

**ಕಾಚಾನ್ಯಾತ್ವಾಮೃತೇ ದೇವಿ ಸರ್ವಯಜ್ಞಮಯಂ ವಪುঃ।**
**ಅಧ್ಯಾಸ್ತೇ ದೇವದೇವಸ್ಯ ಯೋಗಿಚಿಂತ್ಯಂ ಗದಾಭೃತಃ'।** [3]
ಎಂದು ಈ ಅಸಾಧಾರಣ ವಿಗ್ರಹವನ್ನೇ ಯೋಗಿ ಚಿಂತ್ಯವಾಗಿ ಹೇಳಲಾಗಿದೆ.

**(ಸಕಲಜನ ಮೋಹನಮಾಯ್)** -ಜ್ಞಾನಿಗಳು, ಅಜ್ಞಾನಿಗಳೆಂಬ ವಿಭಾಗವಿಲ್ಲದೆ ತನ್ನ ವೈಲಕ್ಷಣ್ಯದಿಂದ ಹುಚ್ಚು ಹಿಡಿಸುವಂತೆ ಇರುವಿಕೆ. **'ಪುಂಸಾಂ ದೃಷ್ಟಿ ಚಿತ್ತಾ ಪಹಾರಿಣಮ್'** ;[4] **'ಸರ್ವಸತ್ವಮನೋಹರಃ'**।;[5] **'ಕಂಡವರ್ ತಂ ಮನಮ್ ವಳಂಗುಮ್'**;[6] ಎಂಬಂತೆ.

**(ಸಮಸ್ತ ಭೋಗ ವೈರಾಗ್ಯಜನಕ ಮಾಯ್)** - ತನ್ನ ವೈಲಕ್ಷಣ್ಯವನ್ನು ಕಂಡವರಿಗೆ ಸ್ವ, ಇತರ, ಸಕಲ ವಿಷಯಾನುಭವಗಳಲ್ಲೂ ಆಸೆ ಇಲ್ಲವಾಗುವಂತೆ ಮಾಡುವಿಕೆ. **'ಪೇರಿನ್ಬಮೆಲ್ಲಾಮ್ ತುರನ್ದಾರ್ ತೊಳುತಾರತ್ತೋಳ್'**[7] ಎನ್ನುವಂತೆ.

**(ನಿತ್ಯಮುಕ್ತಾನುಭಾವ್ಯಮಾಯ್)** - ಅಪರಿಚ್ಛಿನ್ನ ಜ್ಞಾನಾದಿಗುಣಕವಾದ ನಿತ್ಯರಿಂದಲೂ, ಮುಕ್ತರಿಂದಲೂ, **'ಸದಾಪಶ್ಯಂತಿ'** ಎಂಬಂತೆ ಅನವರತ ಅನುಭವಿಸುವಂತಿರುವಿಕೆ.

**(ವಾಶತ್ತಡಮ್ಬೋಲೇ ಸಕಲತಾಪಹರಮಾಯ್)** - **'ಕಣ್ಣೈಕ್ಕಾಲ್‌ತೂಯ ಶೆಯ್ಯಮಲರ್‌ಕಳ್'**[8] ಎಂದು ಪ್ರಾರಂಭಿಸಿ ಆಳ್ವಾರ್ ವರ್ಣಿಸಿದಂತೆ ದಿವ್ಯಾಯುಧಗಳೊಡನೆ ಕೂಡಿದ ದಿವ್ಯಮಂಗಳ ವಿಗ್ರಹವು; ಎಲ್ಲೆಡೆ ಹರಡಿ ಪರಿಮಳವನ್ನು ಸುತ್ತಲೂ ಬೀರುತ್ತಿರುವ ಅರಳಿದ ತಾವರೆಗಳನ್ನುಳ್ಳ ತಟಾಕದಂತೆ ಇರುವುದರಿಂದ, ತನ್ನನ್ನು ಸಮೀಪಿಸಿದವರ ಸಾಂಸಾರಿಕ ತಾಪ, ವಿರಹತಾಪಗಳೆಂಬಂತೆ ಸಕಲತಾಪಗಳನ್ನೂ ನೀಗುವಂತಿರುವಿಕೆ.

**(ಅನಂತಾವತಾರಗಂಧಮಾಯ್)** - **'ಅಜಾಯಮಾನೋ ಬಹುಧಾವಿಜಾಯತೇ'**[9] **'ಬಹೂನಿ ಮೇ ವ್ಯತೀತಾನಿ'** ಎಂದು ಹೇಳಲ್ಪಡುವ ಅಸಂಖ್ಯಾತವಾದ ಅವತಾರಗಳೂ ಕೂಡ ಅಪ್ರಾಕೃತ ದಿವ್ಯಸಂಸ್ಥಾನವನ್ನು (ತನ್ನ ಪ್ರಾಕೃತವಲ್ಲದ ದಿವ್ಯಮಂಗಳ ವಿಗ್ರಹವನ್ನು) ಇತರ ಸಜಾತೀಯವಾಗಿಸಿ ದೀಪದಿಂದ ಉತ್ಪನ್ನವಾದ ಪ್ರದೀಪ (ದೀವಟಿಗೆ) ದಂತೆ ಉಂಟಾಗುವುದರಿಂದ ಆ ಅವತಾರಗಳೆಲ್ಲಕ್ಕೂ ಮೂಲವಾಗಿರುವಿಕೆ. ಇದನ್ನೇ **'ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮಿ'**;[10] **'ಕಲ್ಪೇ ಕಲ್ಪೇ ಜಾಯಮಾನಸ್ಸ್ವಮೂರ್ತ್ಯಾಃ'** ;[11] **'ಆದಿಯಂ ಶೋದಿಯುರುವ್ವೈ ಅಂಗುವೈತ್ತು ಇಂಗು ಪ್ಪಿರಂದ'**[12] ಎನ್ನಲಾಗಿದೆ.

(ಸರ್ವರಕ್ಷಕಮಾಯ್) - ಐಶ್ವರ್ಯಾರ್ಥಿಗಳಿರಲಿ, ಕೇವಲರಾಗಿರಲಿ, ಭಗವಚ್ಛರಣಾರ್ಥಿಗಳಲ್ಲಿ ಉಪಾಸಕರುಗಳಿರಲಿ, ಪ್ರಪನ್ನರಿರಲಿ, ಅನುಭವಕೈಂಕರ್ಯಪರರಾದ ನಿತ್ಯ ಮುಕ್ತರಿರಲಿ, ಯಾರಲ್ಲೂ ಯಾವ ಭೇದವೂ ಇಲ್ಲದೆ ಸರ್ವರ ಅನಿಷ್ಟನಿವೃತ್ತಿ, ಇಷ್ಟ ಪ್ರಾಪ್ತಿಗಳನ್ನು ಉಂಟುಮಾಡುವುದು ದಿವ್ಯಮಂಗಳವಿಗ್ರಹೋಪೇತನಾಗಿರುವುದರಿಂದಲೇ, ಹೀಗೆ ಎಲ್ಲರಿಗೂ ರಕ್ಷಕನಾಗಿರುವಿಕೆ.

(ಸರ್ವಾಶ್ರಯಮಾಯ್) - ಉಭಯವಿಭೂತಿಗೂ ಆಶ್ರಯವಾಗಿರುವಿಕೆ.

(ಅಸ್ತ್ರಭೂಷಣಭೂಷಿತನಾಯ್) - ಹೀಗೆ ಸರ್ವಾಶ್ರಯ ಸೂಚಕವಾಗುವಂತೆ ಅಸ್ತ್ರಭೂಷಣಾಧ್ಯಾಯದಲ್ಲಿ ಹೇಳುವಂತೆ, ವಿಭೂತ್ಯಭಿಮಾನಿಗಳಾದ ದಿವ್ಯಾಯುಧಗಳಿಂದಲೂ ದಿವ್ಯಾಭರಣಗಳಿಂದಲೂ, ಅಲಂಕೃತವಾಗಿರುವಿಕೆ.

**ಆತ್ಮಾನಮಸ್ಯ ಜಗತೋ ನಿರ್ಲೇಪಗುಣಾಮಲಮ್ ।**
**ಬಿಭರ್ತಿಕೌಸ್ತುಭಮಣಿಂ ಸ್ವರೂಪಂ ಭಗವಾನ್ ಹರಿಃ।**
**ಶ್ರೀ ವತ್ಸ ಸಂಸ್ಥಾನಧರಮನನ್ತೇ ಚ ಸಮಾಶ್ರಿತಮ್।**
**ಪ್ರಧಾನಂ ಬುದ್ಧಿರ ಪ್ಯಾಂತೇ ಗದಾರೂಪೇಣ ಮಾಧವೇ।**
**ಭೂತಾದಿ ಮಿಂದ್ರಿಯಾದಿಂ ಚ ದ್ವಿಧಾऽ ಹಂಕಾರ ಮಿಶ್ವರಃ।**
**ಬಿಭರ್ತಿ ಶಬ್ದ ರೂಪೇಣ ಶಾಂರ್ಙ್ಗರೂಪೇಣ ಚ ಸ್ಥಿತಮ್।**
**ಚಲ ಸ್ವರೂಪಮತ್ಯಂತ ಜವೇನಾಂತರಿತಾನಿಲಮ್।**
**ಚಕ್ರ ಸ್ವರೂಪಂ ಚ ಮನೋಧತ್ತೇ ವಿಷ್ಣುಃ ಕರೇಸ್ಥಿತಮ್।**
**ಪಂಚರೂಪಾತು ಯಾ ಮಾಲಾವೈಜಯಂತೀ ಗದಾಭೃತಃ।**
**ಸಾಭೂತ ಹೇತು ಸಂಘಾತೋ ಭೂತ ಮಾಲಾಚ ವೈದ್ವಿಜ।**
**ಯಾನೀಂದ್ರಿಯ ವಿಶೇಷಾಣಿ ಬುದ್ಧಿಕರ್ಮಾತ್ಮಕಾನಿವೈ।**
**ಶರರೂಪಾಣ್ಯಶೇಷಾಣಿತಾ ನಿಧತ್ತೇ ಜನಾರ್ದನಃ।**
**ಬಿಭರ್ತಿಯಚ್ಚಾಸಿ ರತ್ನ ಮಚ್ಯುತೋऽ ತ್ಯನ್ತ ನಿರ್ಮಲಮ್।**
**ವಿದ್ಯಾಮಯಂತು ತತ್‌ಜ್ಞಾನಮವಿದ್ಯಾ ಕರ್ಮಸಂಸ್ಥಿತಮ್॥** [13] ಎನ್ನಲಾಗಿದೆ.

## ಸೂ. 42 ಈಶ್ವರ ಸ್ವರೂಪನ್ದಾನ್, ಪರತ್ವಮ್, ವ್ಯೂಹಮ್, ವಿಭವಮ್, ಅನ್ತರ್ಯಾಮಿತ್ವಮ್ ಅರ್ಚಾವತಾರಮೆನ್ರು ಅಂಜುಪ್ರಕಾರ ತ್ತೋಡೇ ಕೂಡಿಯಿರುಕ್ಕಮ್.

ದಿವ್ಯಮಂಗಳ ವಿಗ್ರಹಯೋಗ ಪ್ರಯುಕ್ತವಾದ ಈಶ್ವರನ ಪರತ್ವಾದಿ ಪಂಚ ಪ್ರಕಾರವನ್ನು ಬಿಡಿಬಿಡಿಯಾಗಿ ಸುವ್ಯಕ್ತವಾಗಿ ನಿರೂಪಿಸಲು ಈ ಸೂತ್ರದಿಂದ ಆರಂಭಿಸುತ್ತಾರೆ. 'ಲಕ್ಷ್ಮೀ ಭೂಮಿನೀಳಾನಾಯಕನಾಯ್' ಎಂದು ಉಪಪಾದಿಸಿ ಅದನ್ನು ವಿವರಿಸದೆ ಬಿಟ್ಟದ್ದು ಏಕೆಂದರೆ ಅದರಲ್ಲಿ ವಿವರಿಸಬೇಕಾದ್ದು ಅಧಿಕವಾಗಿ ಇಲ್ಲದ್ದರಿಂದಲೂ

**ವೈಕುಂಠೇತು ಪರೇ ಲೋಕೇ ಶ್ರೀಸಹಾಯೋ ಜನಾರ್ದನಃ।**
**ನೀಳಾಭ್ಯಾಂ ಸೇವಿತಃ ಪರಮೇಶ್ವರಃ।'**

ಎಂಬುದರಿಂದ ಮುಂದೆ ಹೇಳಲ್ಪಡುವ ಪರತ್ವದಲ್ಲಿ ಅರ್ಥಾದುಕ್ತವಾಗುವುದರಿಂದಲೂ, ಪ್ರತ್ಯೇಕವಾಗಿ ವಿವರಿಸಿಲ್ಲ. ಆದ್ದರಿಂದ ವಿರೋಧವಿಲ್ಲ.

'ಈಶ್ವರ ಸ್ವರೂಪಮ್' ಎಂಬಲ್ಲಿ ಸ್ವರೂಪ ಶಬ್ದದಿಂದ ಹೇಳಲ್ಪಡುವುದು ಸ್ವಸಾಧಾರಣ ವಿಗ್ರಹವೂ ಆಗಬಹುದು ಅಥವಾ ವಿಗ್ರಹ ವಿಶಿಷ್ಟವಾದ ಸ್ವರೂಪವೂ ಆಗಬಹುದು. ಸಂಗ್ರಹವಾಗಿ ನಿರೂಪಿಸಿದ ಎರಡು 'ತತ್ವತ್ರಯಪ್ಪಡಿ' ಗ್ರಂಥಗಳಲ್ಲಿ ಒಂದರಲ್ಲಿ,

'ತಿರುಮೇನಿಯುಮ್ ಅಂಜುಪಡಿಯಾಯಿರುಕ್ಕುಮ್. ಅತಾವತು ಪರತ್ವಮುಮ್, ವ್ಯೂಹಮುಮ್, ಅಂತರ್ಯಾಮಿತ್ವಮುಂ, ವಿಭವಮುಮ್, ಅರ್ಚಾವತಾರಮುಮ್' ಎಂದಿದ್ದಾರೆ. ಮತ್ತೊಂದರಲ್ಲಿ 'ಈಶ್ವರ ಸ್ವರೂಪಮ್ ಹೇಯ ಪ್ರತಿಭಟಮಾಯ್' -ಎಂದಾರಂಭಿಸಿ 'ಪತ್ನೀ ಪರಿಜನ ವಿಶಿಷ್ಟಮಾಯಿರುಕ್ಕುಮ್' ಎಂಬವರೆಗೆ ಉಪಪಾದಿಸಿ ಅನಂತರ 'ಇತು ತಾನ್ ಅಂಜುಪಡಿಯಾಯಿರುಕ್ಕುಮ್' ಎಂದು 'ಇದು' ಎಂಬ ಶಬ್ದದಿಂದ ಪ್ರಸ್ತುತವಾದ ಈಶ್ವರ ಸ್ವರೂಪವನ್ನು ಪರಾಮರ್ಶಿಸಿ ಅದು ಪರತ್ವಾದಿರೂಪೇಣ ಐದು ಪ್ರಕಾರವಾಗಿರುತ್ತದೆಂದು ಇವರೇ ಅನುಗ್ರಹಿಸಿದ್ದಾರೆ. ಹೀಗೆ ಪರತ್ವಾದಿ ಪಂಚ ಪ್ರಕಾರ ವಿಶಿಷ್ಟನಾಗಿರುತ್ತಾನೆಂಬುದನ್ನು

**ಮಮಪ್ರಕಾರಾಃ ಪಂಚೇತಿ ಪ್ರಾಹುರ್ವೇದಾನ್ತಪಾರಗಾಃ।**
**ಪರೋವ್ಯೂಹಶ್ಚ ವಿಭವೋನಿಯನ್ತಾ ಸರ್ವ ದೇಹಿನಾಮ್।**
**ಅರ್ಚಾವತಾರಶ್ಚ ತಥಾದಯಾಳುಃ ಪುರುಷಾ ಕೃತಿಃ।**
**ಇತ್ಯೇವಂ ಪಂಚಧಾಪ್ರಾಹುರ್ಮಾಂ ವೇದಾಂತವಿದೋಜನಾಃ।**

ಎಂದು ವಿಷ್ವಕ್ಸೇನಸಂಹಿತೆಯಲ್ಲಿ ಭಗವಂತನೇ ಅನುಗ್ರಹಿಸಿದ್ದಾನೆ.

## ಸೂ. 43 ಅತಿಲ್ ಪರತ್ವಮಾವತು - ಅಕಾಲ್ಯಮಾನ 'ನಲಮನ್ದಮಿಲ್ಲತೋರ್ ನಾಟ್ಟಿಲೇ ನಿತ್ಯಮುಕ್ತರ್ಕ್ಕು ಭೋಗ್ಯನಾಯ್‌ಕೊಂಡೆಳುಂದರುಳಿಯಿರುಕ್ಕುಮಿರುಪ್ಪು.

ಈ ಐದೂ ಪ್ರಕಾರಗಳನ್ನೂ ವಿವರಿಸುವ ಆಕಾಂಕ್ಷೆಯಿಂದ ಮೊದಲಿಗೆ ಪರತ್ವವನ್ನು ಉಪಪಾದಿಸುತ್ತಾರೆ.

'ನಕಾಲಸ್ತತ್ರವೈ ಪ್ರಭುಃ'[1] ಎಂದೂ 'ಕಲಾಮುಹೂರ್ತಾದಿ ಕಲೋನಯದ್ವಿಭೂತೇಃ ಪರಿಣಾಮ ಹೇತುಃ'[2] ಎಂದೂ 'ಯೋವೈನ ಜಾತು ಪರಿಣಾಮ ಪದಾಸ್ಪದಂ ಸಾಕಾಲಾತಿಗಾ ತವ ಪರಾಮಹಾವಿಭೂತಿಃ'[3] ಎಂದೂ 'ಯತ್ಕಾಲಾದಾಪಚೇಲಿಮಂ' ಎಂದೂ ಹೇಳಲ್ಪಡುವಂತೆ ಕಾಲಕೃತ ಪರಿಣಾವಿಲ್ಲದ ದೇಶವಾದ್ದರಿಂದ ಕಾಲಕಾಲ್ಯವಲ್ಲದೇ ಇರುವುದರಿಂದ 'ನಲಮನ್ದಮಿಲ್ಲದೋರ್‌ನಾಡು'[4] ಎಂಬಂತೆ ಆನಂದ ಎಲ್ಲೆಯಿಲ್ಲದ್ದಾಗಿ ಅದ್ವಿತೀಯವಾಗಿರುವ ಶ್ರೀ ವೈಕುಂಠದಲ್ಲಿ 'ಯತ್ರಪೂರ್ವೇ ಸಾಧ್ಯಸ್ಸಂತಿ ದೇವಾಃ'[5] ಎಂದೂ 'ಯತ್ರರ್ಷಯಃ ಪ್ರಥಮಜಾಯೇ ಪುರಾಣಾಃ'[6] ಎಂದೂ 'ಅವಯರ್ವರುಮಮರರ್‌ಗಳ್' ಎಂದೂ ಹೇಳಲ್ಪಡುವಂತೆ ನಿತ್ಯ ಅಸಂಕುಚಿತ ಜ್ಞಾನರಾದ ಅನಂತ ಗರುಡ ವಿಷ್ವಕ್ಸೇನಾದಿಗಳಾದ ನಿತ್ಯ ಸೂರಿಗಳಿಗೂ 'ಸೂರ್ಯಕೋಟಿ ಪ್ರತೀಕಾಶಾಃ ಪೂರ್ಣೇನ್ದ್ವಯುತ ಸನ್ನಿಭಾಃ। ಯಸ್ಮಿನ್ ಪದೇ ವಿರಾಜಂತೇ ಮುಕ್ತಾಸ್ಸಂಸಾರ ಬಂಧನೈಃ'[7] ಎಂಬಂತೆ ನಿವೃತ್ತ ಸಂಸಾರಿಗಳಾಗಿ, ಅಸಂಕುಚಿತ ಜ್ಞಾನರಾದ ಮುಕ್ತರಿಗೂ ಅನುಭವ ವಿಷಯಭೂತನಾಗಿ ಬಿಜಯ ಮಾಡಿಸಿರುವಿಕೆಯೇ 'ಪರತ್ವ' ಪ್ರಕಾರವಾಗಿದೆ.

## ಸೂ. 44 ವ್ಯೂಹಮಾವತು - ಸೃಷ್ಟಿಸ್ಥಿತಿ ಸಂಹಾರಾರ್ಥಮಾಕವುಮ್. ಸಂಸಾರಿಸಂರಕ್ಷಣಾರ್ಥಮಾಕವುಮ್, ಉಪಾಸಕಾನುಗ್ರಹಾರ್ಥಮಾಕವುಮ್, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೂಪೇಣ ನಿರ್ಕುಮ್ ನಿಲೈ.

ಈ ಸೂತ್ರದಲ್ಲಿ ವ್ಯೂಹವನ್ನು ವಿವರಿಸುತ್ತಾರೆ.

ವ್ಯೂಹಕ್ಕೆ ವಿನಿಯೋಗವು ಲೀಲಾವಿಭೂತಿಯಾದ್ದರಿಂದ, ಈ ವಿಭೂತಿಯ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ನಿರ್ವಹಿಸುವುದಕ್ಕಾಗಿಯೂ, ಬುಭುಕ್ಷುಗಳಾದ ಸಂಸಾರಿಗಳ ಅನಿಷ್ಟ ನಿವೃತ್ತ್ಯಾದಿಗಳನ್ನು ಮಾಡಿ ರಕ್ಷಿಸುವುದಕ್ಕಾಗಿಯೂ, ಮುಮುಕ್ಷುಗಳಾಗಿ ಉಪಾಸಿಸುವವರಿಗೆ ಸಂಸಾರನಿವೃತ್ತಿಪೂರ್ವಕವಾಗಿ ತನ್ನನ್ನು ಹೊಂದಲು ಅನುಗ್ರಹಿಸುವುದಕ್ಕಾಗಿಯೂ, 'ಸಂಕರ್ಷಣ', 'ಪ್ರದ್ಯುಮ್ನ', 'ಅನಿರುದ್ಧರು'ಗಳಾಗಿರುವುದೇ 'ವ್ಯೂಹ' ವೆನಿಸುತ್ತದೆ. ಯಾವ ಕಾರ್ಯವನ್ನು ಯಾವ ವ್ಯೂಹರೂಪ ನಿರ್ವಹಿಸುತ್ತದೆ ಎಂಬುದನ್ನು ಮುಂದೆ ವಿವರಿಸಲಾಗುತ್ತದೆ.

ಚತುರ್ವಿಧ ಸ್ಸಭಗವಾನ್ ಮುಮುಕ್ಷೂಣಾಂ ಹಿತಾ ಯವೈ।
ಅನ್ಯೇಶಾಮಪಿಲೋಕಾನಾಂ ಸೃಷ್ಟಿಸ್ಥಿತ್ಯಂತ ಸಿದ್ಧಯೇ।[1] ಎಂದೂ
ಅನಂತ್ಯಾತ್ತವ ಸೇನಾವ್ಯೂಹ ಆದ್ಯೋಮಯೇರಿತಃ।
ಅನಾದಿ ಕರ್ಮವಶ್ಯಾನಾಂ ಸಂಸಾರೇ ಪತತಾಧಮಃ।[2] ಎಂದಾರಂಭಿಸಿ
ಉಪಾಸಕಾನುಗ್ರಹಾರ್ಥಂ ಜಗತೋರಕ್ಷಣಾಯಚ।[3] ಎಂದೂ
'ಅವಿರಾಸೀದ್ಭಗವತಃ ಪಂಚಾಯುಧಪರಿಷ್ಕೃತಃ।
ರುಕ್ಮಾಭಸ್ಸೋಽ ಯಮಮಲ ಸ್ಸರ್ವಶಾಸ್ತ್ರೇಷು ಶಬ್ದಿತಃ।
ಸೋಯಂ ಪ್ರದ್ಯುಮ್ನ ನಾಮ್ನಾಽ ಭೂತ್ತದೇಕಾನ್ತವಪುರ್ಧರಃ।
ಸೋಯಂ ಸಂಕರ್ಷಣಾಖ್ಯೋಽ ಭೂತ್ತದೇಕಾಂತವಪುರ್ಧರಃ।
ಇಂದ್ರನೀಲ ಪ್ರತೀಕಾಶ ಏಷಶಾಸ್ತ್ರೇಷು ಶಬ್ದಿತಃ।
ತತೋ ನಾಮ್ನಾಽ ನಿರುದ್ಧೋಽಯಂ ಸ್ವಯ ಮೇವಾಭವನ್ಮುನೇ।
ತದೇಕಾನ್ತವಪುರ್ಯುಕ್ತಸ್ತಾದಾತ್ವಿ ಕಘನಪ್ರಭಃ।[4]

ಎಂದೂ ಭಗವಚ್ಛಾಸ್ತ್ರದಲ್ಲಿ ಸೃಷ್ಟ್ಯಾದಿಗಳೂ ಸಂಸಾರಿ ರಕ್ಷಕವೂ ಉಪಸಕಾನುಗ್ರಹಕಾರಕವೂ ಆದ ವ್ಯೂಹಕೃತ್ಯಗಳೂ, ಸಂಕರ್ಷಣಾದಿ ವ್ಯೂಹಗಳೂ ಹೇಳಲ್ಪಟ್ಟಿವೆ. 'ಚತುರ್ವಿಧಸ್ಸಭಗವಾನ್' ಎಂಬಲ್ಲಿ ನಾಲ್ಕು ವಿಧವಾಗಿ ಹೇಳಿದ್ದು 'ವಾಸುದೇವ' ನನ್ನೂ ಸೇರಿಸಿಕೊಂಡದ್ದರಿಂದಾಗಿದೆ.

## ಸೂ. 45 ಪರತ್ವತ್ತಿಲ್ ಜ್ಞಾನಾದಿಗಳ್ ಆರುಮ್ ಪೂರ್ಣಮಾಯಿರುಕ್ಕುಮ್, ವ್ಯೂಹತ್ತಿಲಿವ್ವಿರಣ್ಣು ಗುಣಮ್ ಪ್ರಕಟಮಾಯಿರುಕ್ಕುಮ್.

ಈ ಪರವ್ಯೂಹಗಳ ವಿಶೇಷವನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ. 'ಸಂಪೂರ್ಣಷಡ್ಗುಣ್ಯೇಷು ವಾಸುದೇವೋ ಜಗತ್ಪತಿಃ'[1] ಎಂದೂ

ಪೂರ್ಣಸ್ತಿಮಿತ ಷಾಡ್ಗುಣ್ಯೋ ನಿಸ್ತರಂಗಾರ್ಣವೋಪಮಃ।
ಷಣ್ಣಾಂಯುಗಪದುನ್ಮೇಷಾತ್ ಗುಣಾನಾಂ ಸ್ವಪ್ರಚೋದಿತಾತ್।
ಅನಂತ ಏವ ಭಗವಾನ್ವಾಸುದೇವಸ್ಸನಾತನಃ। [2]

ಎಂದೂ ಹೇಳುವಂತೆ ವಾಸುದೇವ ರೂಪವಾದ ಪರತ್ವದಲ್ಲಿ ಜ್ಞಾನ ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸುಗಳೆಂಬ ಆರುಗುಣಗಳೂ ಪರಿಪೂರ್ಣವಾಗಿರುತ್ತವೆ. ಸಂಕರ್ಷಣಾದಿ ರೂಪವಾದ ವ್ಯೂಹದಲ್ಲಿ

ತತ್ರತತ್ರಾವಶಿಷ್ಟಂ ಯದ್ಗುಣಾನಾಂ ದ್ವಿಯುಗಂ ಮುನೇ।
ಅನುವೃತ್ತಿಂ ಭಜತ್ಯೇವ ತತ್ರ ತತ್ರ ಯಥಾ ತಥಮ್।[3]

ಎಂಬಂತೆ ಉಳಿದ ನಾಲ್ಕು ಗುಣಗಳೂ ಆಯಾಯ ರೂಪದಲ್ಲಿ ಅನುವೃತ್ತವಾಗಿ, ಅವುಗಳ ಕಾರ್ಯಗಳಿಗೆ ಅನುಗುಣವಾದ ಎರಡೆರಡು ಗುಣಗಳು ಪ್ರಕಾಶಕವಾಗಿರುತ್ತದೆ.

**ಗುಣೈಷಡ್ಭಿಸ್ತ್ವೈತೈಃ ಪ್ರಥಮತರ ಮೂರ್ತಿಸ್ತವ ಬಭೌತತಸ್ತಿಸ್ರಸ್ತೇಷಾಂ ತ್ರಿಯುಗ ಯುಗಳೈರ್ವಿತ್ರಿಭಿರಭೂಃ।**
**ವ್ಯವಸ್ಥಾಯಾಚೈಷಾ ನನುವರದ ಸೋಽಽವಿಷ್ಕೃತಿವಶಾದ್ಭವಾನ್ ಸರ್ವತ್ರೈವತ್ವಗಣಿತ ಮಹಾಮಂಗಳ ಗುಣಾಃ।[8]**

ಎಂದು ಇದನ್ನೇ ಕೂರತ್ತಾ ಆಳ್ವಾನ್ ಅನುಗ್ರಹಿಸಿದ್ದಾರೆ.

## ಸೂ. 46 ಅತಿಲ್ ಸಂಕರ್ಷಣರ್, ಜ್ಞಾನ ಬಲಂಗಳಿರಂಡೋಡುಂ ಕೂಡಿ ಜೀವತತ್ವತ್ತೈ ಅಧಿಷ್ಠಿತ್ತು, ಅತ್ತೈ ಪ್ರಕೃತಿಯಿಲ್ ನಿನ್ರುಮ್ ವಿವೇಕಿತ್ತು, ಪ್ರದ್ಯುಮ್ನಾವಸ್ಥೈಯುಮ್ ಭಜಿತ್ತು, ಶಾಸ್ತ್ರಪ್ರವರ್ತನತ್ತೈಯುಂ ಜಗತ್ಸಂಹಾರತ್ತೈಯುಮ್ ಪಣ್ಣಕ್ಕಡವರಾಯಿರುಪ್ಪಾರ್.

ಈ ಸಂಕರ್ಷಣಾದಿಗಳು ಮೂವರಲ್ಲೂ ಪ್ರಕಾಶಿಸುವ ಗುಣವಿಶೇಷಗಳನ್ನೂ, ಅವರ ಕೃತ್ಯಗಳನ್ನೂ ಪ್ರತ್ಯೇಕವಾಗಿ ವಿವರಿಸುವುದಕ್ಕೆ ಪ್ರಾರಂಭಿಸಿ ಪ್ರಥಮತಃ ಸಂಕರ್ಷಣನ ವಿವರಗಳನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ.

ವ್ಯೂಹತ್ರಯದಲ್ಲಿ ಸಂಕರ್ಷಣನು - **'ತತ್ರ ಜ್ಞಾನ ಬಲ ದ್ವಂದ್ವಾದ್ರೂಪಂ ಸಂಕರ್ಷಣಂ ಹರೇಃ'**[1] ಎಂದೂ **'ಭಗವಾನಚ್ಯುತೋಽ ಪೀತ್ಥಂ ಷಡ್ಗುಣೇನ ಸಮೇಧಿತಃ। ಬಲ ಜ್ಞಾನೌ ಗುಣೌ ತಸ್ಯ ಸ್ಫುಟೌ ಕಾರ್ಯವಶಾನ್ಮುನೇ'**[2] ಎಂಬಂತೆಯೂ ಸರ್ವಗುಣಗಳಿದ್ದರೂ ಕಾರ್ಯಾನುಗುಣವಾಗಿ ಜ್ಞಾನಬಲಗಳೆರಡರಿಂದ ಕೂಡಿರುತ್ತಾನೆ. **'ಸೋಽಯಂ ಸಮಸ್ತ ಜೀವಾನಾಮಧಿಷ್ಠಾತೃ ತಯಾಸ್ಥಿತಃ'** [3] ಎಂದೂ

**ಸಂಕರ್ಷಣಸ್ತು ದೇವೇಶೋ ಜಗತ್ಸ್ರಷ್ಟುಮನಾಸ್ತತಃ।**
**ಜೀವ ತತ್ವ ಮಧಿಷ್ಠಾಯ ಪ್ರಕೃತೇಸ್ತು ವಿವಿಚ್ಯ ತತ್।** [4]

ಎಂದೂ ಹೇಳಲ್ಪಡುವಂತೆ ಪ್ರಕೃತಿಯಲ್ಲಿ ಮಗ್ನವಾಗಿರುವ ಜೀವತತ್ವದಲ್ಲಿ ಅಧಿಷ್ಠಾನ ಮಾಡಿ, ಆ ಅಧಿಷ್ಠಾನ ವಿಶೇಷದಿಂದ ಈ ಪ್ರಕೃತಿಯಲ್ಲಿ ನಾಮರೂಪ ವಿಶೇಷವು ತೋರುವಂತೆ ವಿವೇಕಿಸಿ **'ವಿವೇಕಾನಂತರಂ ದೇವಃ ಪ್ರದ್ಯುಮ್ನತ್ವಮವಾಪ ಸಃ'** [5] ಎಂದೂ **'ಸೋಽಯಂ ಪ್ರದ್ಯುಮ್ನನಾಮಾಽ ಭೂತ್ತ ದೇಕಾನ್ತವಪುರ್ಧರಃ'** ಎಂದೂ ಹೇಳಲ್ಪಡುವಂತೆ ಪ್ರದ್ಯುಮ್ನಾವಸ್ಥೆಯನ್ನು ತಾಳಿ **'ಶಾಸ್ತ್ರಪ್ರವರ್ತನಂ ಚಾಪಿ ಸಂಹಾರಂ ಚೈವ ದೇಹಿ ನಾಮ್'** [6] ಎಂದೂ

**ಬಲೇನ ಹರತೀದಂ ಸಗುಣೇನ ನಿಖಿಲಂ ಮುನೇ।**
**ಜ್ಞಾನೇನ ತನುತೇ ಶಾಸ್ತ್ರಂ ಸರ್ವಸಿದ್ಧಾಂತ ಗೋಚರಮ್।**
**ವೇದ ಶಾಸ್ತ್ರಮಿತಿ ಖ್ಯಾತಂ ಪಾಂಚರಾತ್ರಂ ವಿಶೇಷತಃ।** [7]

ಎಂದೂ ಹೇಳಲ್ಪಡುವಂತೆ ವೇದಾದಿಶಾಸ್ತ್ರ ಪ್ರವರ್ತನವನ್ನೂ, ಜಗತ್ಸಂಹಾರವನ್ನೂ ,ಈ ಸಂಕರ್ಷಣನು ಮಾಡುತ್ತಾನೆ.

**ಸೂ. 47 ಪ್ರದ್ಯುಮ್ನರ್-ಐಶ್ವರ್ಯ ವೀರ್ಯಂಗಳಿರಂಡೋಡುಂ ಕೂಡಿ ಮನಸ್ತತ್ತ್ವತ್ತೈಯಧಿಷ್ಠಿತ್ತು, ಧರ್ಮೋಪದೇಶತ್ತೈಯುಮ್, ಮನುಚತುಷ್ಟಯಮ್ ತೊಡಕ್ಕಮಾನಶುದ್ಧವರ್ಗ ಸೃಷ್ಟಿಯೈಯುಮ್ ಪಣ್ಣಕ್ಕಡವರಾಯಿರುಪ್ಪರ್.**

ಈ ಸೂತ್ರದಲ್ಲಿ 'ಪ್ರದ್ಯುಮ್ನ' ನ ವಿವರಗಳನ್ನು ತಿಳಿಸುತ್ತಾರೆ. ಪ್ರದ್ಯುಮ್ನನು 'ಐಶ್ವರ್ಯ ವೀರ್ಯ ಸಂಭೇಧಾದ್ರೂಪಂ ಪ್ರಾದ್ಯುಮ್ನ ಮುಚ್ಯತೇ'[1] ಎಂದೂ

ಪೂರ್ಣ ಷಡ್ಗುಣಮೇವಾಯಮಚ್ಯುತೋಽ ಹಿ ಮಹಾಮುನೇ।
ಗುಣಾವೈಶ್ವರ್ಯ ವೀರ್ಯಾಖ್ಯೌಸ್ಫುಟೌತಸ್ಯ ವಿಶೇಷತಃ।

ಎಂಬಂತೆಯೂ ಸಕಲ ಗುಣಗಳುಳ್ಳವನಾದರೂ ಕಾರ್ಯಾನುಗುಣ ವಿಶೇಷೇಣ ಸ್ಫುಟವಾದ ಐಶ್ವರ್ಯ ವೀರ್ಯಗಳೆಂಬ ಎರಡು ಗುಣಗಳಿಂದ ಕೂಡಿ 'ಮನಸೋಽ ಯಮಧಿಷ್ಠಾತಾ ಮನೋಮಯಂ ಇತೀರಿತಃ' ಎಂಬಂತೆ ಜ್ಞಾನ ಪ್ರಸರಣದ್ವಾರವಾದ ಮನಸ್ ತತ್ವದಲ್ಲಿ ಅಧಿಷ್ಠಾನಮಾಡಿ

ಐಶ್ವರ್ಯೇಣ ಗುಣೇನಾಸೌ ಸೃಜತೇ ತಚ್ಚರಾಚರಮ್।
ವೀರ್ಯೇಣ ಸರ್ವಧರ್ಮಾಣಿ ಪ್ರವರ್ತಯತಿ ಸರ್ವಶಃ।

ಎಂಬಂತೆ ಶಾಸ್ತ್ರಾರ್ಥಾನುಷ್ಠಾನರೂಪವಾದ ಧರ್ಮಗಳ ಉಪದೇಶವನ್ನು ಮಾಡುತ್ತಾನೆ.

ಮನೂನಾಂಸರ್ಗ ಮಕರೋನ್ಮುಖ ಬಾಹೂರುಪಾದತಃ।
ಚತುರ್ಣಾಂ ಬ್ರಾಹ್ಮಣಾದೀನಾಂ ಸರ್ಗದ್ವಾರಂ ಜಗತ್ಪತಿಃ।
ದ್ವಿಜಯುಗ್ಮಂ ಕ್ಷತ್ರಯುಗ್ಮಂ ವೈಶ್ಯಯುಗ್ಮಂ ತಥೈವ ಚ।
ಮಿಥುನಂ ಚ ಚತುರ್ಥಸ್ಯ ಏತೇನ್ಮನು ಚತುಷ್ಟಯಮ್ ।
ಮನುಭ್ಯೋಮಾವಶತಂ ಸ್ತ್ರೀಪುಂ ಮಿಥುನತೋಽ ಭವೇತ।
ಏಕೈಕಂ ವರ್ಣಭೇಧೇನ ತೇಭ್ಯೋ ಮಾನವ ಮಾನವಾಃ।
ಸಹಸಾ ಸಂಬಭೂವುಶ್ಚ ಸ್ತ್ರೀ ಪುಂ ಮಿಥುನ ಸ್ತಥಾ।
ಮನುಷ್ಯಾಶ್ಚ ತತಸ್ತೇಭ್ಯಃ ಪ್ರಾದುಷ್ಷ್ಯುರೀಶ್ವ ಮತ್ಸರಾಃ।
ಏತೇಹಿ ಶುದ್ಧ ಸತ್ವ ಸ್ಥಾ ದೇಹಾಂತಂ ನಾನ್ಯಯೋಜಿನಃ।
ನಿರಾಶಾಃ ಕರ್ಮಕರಣಾನ್ಮಾ ಮೇವ ಪ್ರಾಪ್ನುವಂತಿ ತೇ।
ತ್ರಯ್ಯಂತೇಷು ಚ ನಿಷ್ಣಾತಾ ದ್ವಾದಶಾಽ ಧ್ಯಾತ್ಮ ಚಿಂತಕಾಃ।
ವ್ಯೂಹಾನುವೃತ್ತಿಂ ಸತತಂ ಕುರ್ವತೇ ಜಗತ್ಪತೇಃ।
ತೃತೀಯೇನ ಜಗದ್ಧಾತ್ರಾ ನಿರ್ಮಿತಾ ಮನಸಾ ಸ್ವಯಮ್।
ಗುಣ ಪ್ರಧಾನ ಯೋಗೇಚ ನಿಷ್ಠಿತಾಃ ಪುರುಷರ್ಷಭ।
ಇತ್ಯೇಷ ಶುದ್ಧ ಸರ್ಗೋಯಂ ಗಣೇಶ ತವ ಕೀರ್ತಿತಃ। [2]

ಎಂದು ವಿಷ್ವಕ್ಸೇನ ಸಂಹಿತೆಯಲ್ಲಿ ಹೇಳಿರುವಂತೆ ಮುಖ, (ಬ್ರಾಹ್ಮಣರು) ಬಾಹು (ಕ್ಷತ್ರಿಯರು) ಊರು(ವೈಶ್ಯರು) ಪಾದ (ಶೂದ್ರರು) ಗಳಿಂದ ಹುಟ್ಟಿದವರಾಗಿ, ಮಿಥುನವಾಗಿರುವ ಬ್ರಾಹ್ಮಣಾದಿ

ಮನುಚತುಷ್ಟಯದಿಂದಾರಂಭಿಸಿ ಈ ಮನುಗಳಿಂದ ಮಿಥುನಗಳಾಗಿ, ಪ್ರತ್ಯೇಕವಾಗಿ, ವರ್ಣಭೇದೇನವುಂಟಾದ ಮಾನವಶತವೂ ಹಾಗೆಯೇ ಸ್ತ್ರೀ ಪುಂ ಮಿಥುನಗಳಾಗಿ ಅವರ ಮೂಲಕವಾಗಿ ಹುಟ್ಟಿದ ಮಾನವರೂ, ಅವರ ಮೂಲಕ ಉಂಟಾದ ಮನುಷ್ಯರು ನಿರ್ಮತ್ಸರರಾಗಿ, ಶುದ್ಧ ಸತ್ವ ಸ್ಥರಾಗಿ, ದೇಹವು ಅಂತ್ಯವಾಗುವವರೆಗೂ, ಇತರ ದೇವತೆಗಳನ್ನು ಕುರಿತು ಯಾಗಮಾಡದೆ, ಫಲಾಭಿಸಂಧಿ ರಹಿತರಾಗಿ, ಭಗವತ್ಸಮಾರಾಧನ ರೂಪವಾದ ಕರ್ಮವನ್ನು ಅನುಷ್ಠಿಸುತ್ತಾ ವೇದಾಂತದಲ್ಲಿ ನಿಷ್ಣಾತರಾಗಿ, ದ್ವಾದಶಾಕ್ಷರ ಮುಖೇನ ಅಧ್ಯಾತ್ಮ ಚಿಂತಕರಾಗಿ, ಸರ್ವೇಶ್ವರನ ವ್ಯೂಹಾನುವೃತ್ತಿಯನ್ನು ಸದಾ ಮಾಡುತ್ತಾ ಭಗವತ್ಪ್ರಾಪ್ತಿಯನ್ನು ಹೊಂದುವ ಶುದ್ಧವರ್ಗದ ಸೃಷ್ಟಿಯನ್ನು ಪ್ರದ್ಯುಮ್ನನು ಮಾಡುತ್ತಾನೆ.

**ಸೂ. 48 ಅನಿರುದ್ಧರ್ - ಶಕ್ತಿತೇಜಸ್ಸುಕ್ಕಳಿರಂಡೋಡುಂ ಕೂಡಿ ರಕ್ಷಣತ್ತುಕ್ಕುಮ್, ತತ್ವಜ್ಞಾನ ಪ್ರದಾನತ್ತುಕ್ಕುಮ್, ಕಾಲಸೃಷ್ಟಿಕ್ಕುಮ್, ಮಿಶ್ರ ಸೃಷ್ಟಿಕ್ಕುಮ್ ಕಡವರಾಯಿರುಪ್ಪರ್.**

ಈ ಸೂತ್ರದಲ್ಲಿ ಅನಿರುದ್ಧನ ಪ್ರಕಾರಗಳನ್ನು ವಿವರಿಸುತ್ತಾರೆ.

ಶಕ್ತಿ ತೇಜಸ್ಸಮುತ್ಕರ್ಷಾದನಿರುದ್ಧತನುರ್ಹರೇಃ।[1] ಎಂದೂ
ಪುರುಷೋಪಿ ಮಹಾಧ್ಯಕ್ಷಃ ಪೂರ್ಣ ಷಡ್ಗುಣ ಉಚ್ಯತೇ।
ಶಕ್ತಿತೇಜೌ ಗುಣೌ ತಸ್ಯ ಸ್ಫುಟೌ ಕಾರ್ಯವಶಾನ್ಮುನೇ॥ [2]

ಎಂದೂ ಹೇಳಲ್ಪಡುವಂತೆ ಎಲ್ಲಾ ಗುಣಗಳಿದ್ದರೂ ಕಾರ್ಯಾನುಗುಣವಾಗಿ ಶಕ್ತಿ ತೇಜಸ್ಸುಗಳಿಂದ ಕೂಡಿ

ಶಕ್ತ್ಯಾ ಜಗದಾದಂ ಸರ್ವಂ ಅನಂತಾಂಡ ನಿರಂತರಂ।
ಬಿಭರ್ತಿ ಪಾತಿಚ ಹರಿರ್ಮಣಿಸಾನುರಿವಾಣುಕಮ್।
ತೇಜಸಾ ನಿಖಿಲಾ ತತ್ತ್ವಂ ಜ್ಞಾಪಯತ್ಯಾತ್ಮನೋ ಮುನೇ। [3]

ಎಂಬಂತೆ ಜಗದ್ರಕ್ಷಣಕ್ಕೂ, ಉಜ್ಜೀವನ ಹೇತುವಾದ ತತ್ತ್ವಜ್ಞಾನ ಪ್ರದಾನಕ್ಕೂ, ತ್ರುಟಿ ಮೊದಲಾದ ದ್ವಿಪರಾರ್ಧಪರ್ಯಂತವಾದ ಕಾಲಸೃಷ್ಟಿಗೂ ಮೂಲವಾಗಿದ್ದಾನೆ.

ತುರಿ ಯೋऽ ಯಂ ಜಗನ್ನಾಥೋ ಬ್ರಹ್ಮಣಮಸೃಜತ್ ಪುನಃ।
ಮುಖ ಬಾಹೂರುಪಜ್ಜಾತೋ ಬ್ರಹ್ಮಣಃ ಪರಮೇಷ್ಠಿನಃ।
ಚತುರ್ವಿಧೋಭೂತಸರ್ಗಸ್ತೇನ ಸೃಷ್ಟ ಸ್ವಯಂಭುವಾ।
ಬ್ರಾಹ್ಮಣಾದ್ಯಾಸ್ತ ಥಾವರ್ಣಾರಜಃ ಪ್ರಾಚುರ್ಯತೋऽ ಭವನ್।
ತ್ರಯಾಮಾರ್ಗೇಷು ನಿಷ್ಣಾತಾಃ ಫಲವಾದೇ ರಮಂತಿತೇ।
ದೇವಾದೀನೇವ ಮನ್ವಾನಾ ಚ ಮಾಂ ಮೇನಿರೇ ಸ್ವತಃ।
ತಮಃ ಪ್ರಾಯಾಸ್ತ್ವಿಮೇಕೇ ಚಿನ್ಮಮನಿಂದಾಂ ಪ್ರಕುರ್ವತೇ।
ಆರಾಧ್ಯಂ ಚ ನಿಯಂತಾರಂ ನಜಾನಂತಃ ಪರಸ್ಪರಂ।
ಸಲ್ಲಾಪಂ ಕುರ್ವತೋ ವ್ಯಗ್ರ ವೇದ ವಾದೇಷು ನಿಷ್ಠಿತಾಃ।
ಮಾಂ ನ ಜಾನಂತಿ ಮೋಹೇನ ಮಯಿ ಭಕ್ತಿ ಪರಾಙ್ಮುಖಾಃ।
ಸ್ವರ್ಗಾದಿಷು ರಮ್ಯಂತೇ ಅವಸಾನೇ ಪತಂತಿ ತೇ।
ಕಾಮಾತ್ಮಾನೋ ಮಹಾಭಾಗ ಜರಾಮರಣ ಯೋಗಿನಃ।
ಪ್ಲವಂತ್ಯೇತೇ ದ್ವಿಜಾ ಮೋಹಾತ್ತೇಪಿ ಸಂಸಾರವರ್ತ್ಮನಿ।

ಇತ್ಯೇಷು ಮಿಶ್ರಸರ್ಗಸ್ತು ಗಣೇಶ ತವ ಕೀರ್ತಿತಃ।[4]

ಎಂದು ವಿಷ್ವಕ್ಸೇನ ಸಂಹಿತೆಯಲ್ಲಿ ಹೇಳಲ್ಪಡುವಂತೆ ಬ್ರಹ್ಮನ ಮುಖ, ತೋಳು, ತೊಡೆ ಪಾದಗಳಿಂದ ಹುಟ್ಟಿದವರಾಗಿ ಬ್ರಾಹ್ಮಣಾದಿವರ್ಣದವರಾಗಿ , ರಜಃಪ್ರಚುರರಾಗಿ, ಪೂರ್ವಭಾಗ ಮಾರ್ಗನಿಷ್ಣಾತರಾಗಿ (ಕಾಮ್ಯ ಕರ್ಮದಲ್ಲಿ ನಿರತರಾಗಿ) ಫಲವಾದದಲ್ಲಿ ಆಸಕ್ತರಾಗಿ, ಭಗವಂತನ ಹೊರತಾಗಿ, ಇತರ ದೇವತೆಗಳನ್ನೇ ಆರಾಧ್ಯರಾಗಿ ಭಾವಿಸಿ, ಅವರಲ್ಲಿಯೂ ಕೆಲವರು ತಮಃಪ್ರಚುರರಾಗಿ, ಭಗವನ್ನಿಂದೆಯನ್ನು ಮಾಡಿ, ಆರಾಧ್ಯನಾಗಿ ನಿಯಂತಾವಾದ ಪರಬ್ರಹ್ಮನನ್ನು ಅರಿಯದೆ, ವ್ಯಗ್ರವಾದ ವೇದವಾದಗಳಲ್ಲಿ ಮನಸ್ಸಿನ್ನಿಟ್ಟು , ಒಬ್ಬರಿಗೊಬ್ಬರು ಅದನ್ನೇ ಸಲ್ಲಾಪ ಮಾಡುತ್ತಾ, ಅದರಿಂದಲೇ ಭಗವದ್ ಜ್ಞಾನಭಕ್ತಿಗಳಲ್ಲಿ ಅನ್ವಯವಿಲ್ಲದೆ, ಸ್ವರ್ಗಾದಿಗಳಲ್ಲಿ ರಮಿಸುತ್ತಾ, ತಮ್ಮ ಕರ್ಮದ ಫಲದ ಕೊನೆಯಲ್ಲಿ ಅಧಃಪತನಹೊಂದಿ, ಕಾಮವಿಷಯವಾದ ಮನಸ್ಸನ್ನುಳ್ಳವರಾಗಿ, ಜರಾಮರಣಗಳನ್ನು ಹೊಂದಿ, ಸಂಸಾರಮಾರ್ಗಗಾಮಿಗಳಾಗಿ ಅಲೆಯುವಂತಹ ಮಿಶ್ರವರ್ಗದ ಸೃಷ್ಟಿಯನ್ನೂ ಅನಿರುದ್ಧನು ಮಾಡುತ್ತಾನೆ.'ಅಂಡತ್ತೈಯುಮ್ ಅಂಡಕಾರಣಂಗಳೈಯುಂ ತಾನೇ ಉಣ್ಡಾಕ್ಕುಮ್. ಅಂಡತ್ತು ಕ್ಕುಳ್ ಪಟ್ಟ ವಸ್ತುಕ್ಕಳೈ ಚೇತನರ್ಕ್ಕು ಅಂತರ್ಯಾಮಿಯಾಯ್'ನಿನ್ರು ಉಣ್ಡಾಕ್ಕುಮ್' ಎಂದು ಸಮಷ್ಟಿ ಸೃಷ್ಟಿಯೆಲ್ಲವನ್ನೂ ಅದ್ವಾರಕವಾಗಿಯೂ, ವ್ಯಷ್ಟಿ ಸೃಷ್ಟಿಯೆಲ್ಲವನ್ನೂ ಸದ್ವಾರಕವಾಗಿಯೂ ಹಿಂದೆ ಇವರೇ ಹೇಳಿರುವುದರಿಂದಲೂ; 'ಇವ್ವಣ್ಣತ್ತಿಲೇ ಬದ್ಧಾತ್ಮ ಸಮಷ್ಟಿಭೂತನಾನ ಬ್ರಹ್ಮಾವುಕ್ಕುಂ, ಇತುಕ್ಕುಕ್ಕೀಳ್ ಸ್ವಸಂಕಲ್ಪತ್ತಾಲೇ ಎಂಬೆರುಮಾನ್ ತಾನೇ ಸೃಷ್ಟಿತ್ತರುಳುಮ್, ಇತುಕ್ಕು ಮೇಲ್, ಬ್ರಹ್ಮಾವುಕ್ಕಂತರ್ಯಾಮಿಯಾಯ್ ನಿನ್ರು ಸೃಷ್ಟಿತ್ತರುಳುಮ್' ಎಂದು ಆಚ್ಚಾನ್ ಪಿಳ್ಳೆಯವರು ಅನುಗ್ರಹಿಸಿರುವುದರಿಂದಲೂ, ವ್ಯಷ್ಟಿ ಸೃಷ್ಟಿಯೆಲ್ಲವನ್ನೂ ಸದ್ವಾರಕವಾಗಿಯೇ ತಿಳಿಯಬೇಕಾದ್ದರಿಂದಲೂ, ಪ್ರದ್ಯುಮ್ನಕೃತ್ಯವಾದ ಶುದ್ಧವರ್ಗಸೃಷ್ಟಿ 'ಅದ್ವಾರಕ'. ಅನಿರುದ್ಧಕೃತ್ಯವಾದ ಮಿಶ್ರವರ್ಗಸೃಷ್ಟಿ 'ಸದ್ವಾರಕ' ಎಂದು ಭಾವಿಸಬಾರದು. ಆದ್ದರಿಂದ ಶುದ್ಧವರ್ಗಸೃಷ್ಟಿಯೂ, ಮಿಶ್ರವರ್ಗಸೃಷ್ಟಿಯೂ, ಸದ್ವಾರಕ ಸೃಷ್ಟಿಯಲ್ಲಿ (ಚೇತನರ ಕರ್ಮವಿಶೇಷ ಪ್ರಯುಕ್ತವಾದ) ಸಂಕಲ್ಪವಿಶೇಷದಿಂದಲೇ ಆಗುತ್ತವೆ. ಈ ಶುದ್ಧವರ್ಗಸೃಷ್ಟಿಯನ್ನು , ಮಿಶ್ರವರ್ಗಸೃಷ್ಟಿಯನ್ನು ಭಗವಾನ್ ತಾನೇ ತಿಳಿಸಿದ್ದನ್ನು ಕೇಳಿದ ನಂತರ

ಭಗವಾನ್ ದೇವದೇವೇಶ ಸರ್ವಜ್ಞ ಪರಮೇಶ್ವರ ।
ಕಿಮೇಷ ಭವತಾಸೃಷ್ಟೋ ಮಿಶ್ರಸರ್ಗೋ ಜಗತ್ಪತೇ॥
ಶುದ್ಧ ಸೃಷ್ಟಿ ವಿಹಾಯ್ಯೆಷಾಂ ನಿರ್ದಯಃ ಪುರುಷೋತ್ತಮಃ॥[5]

ಎಂಬುದಾಗಿ ಸೇನಾನಾಯಕರಾದ (ಗಣ ನಾಥರಾದ) ವಿಷ್ವ ಕ್ಸೇನರು ಕೇಳಲು ಅದಕ್ಕೆ ಪರಮಾತ್ಮನು ಹೀಗೆ ಉತ್ತರಿಸುತ್ತಾನೆ.

ವಿಹಾಯ ಶುದ್ಧಸರ್ಗಂ ಚ ಮಿಶ್ರಸರ್ಗಸ್ಯ ಕಾರಣಮ್।
ಶೃಣುಷ್ವ ಗಣನಾಥ ತ್ವಂ ದಯಾಲು ನಿರ್ದಯೋನ ಚ ।
ಸರ್ವಜ್ಞೋऽಹಂ ನ ಸಂದೇಹಸ್ತಥಾऽಪಿ ಚ ಸೃಜಾಮ್ಯಹಮ್।
ಅನಾದ್ಯವಿದ್ಯಾ ಸಮ್ಮುಷ್ಟ ಶೇಮುಷಿಕಾನ್ನರಾನಿಹ।
ವೀಕ್ಷ್ಯಾ ಜ್ಞಾನ ಪ್ರಸಂಗಂತು ನಿಷಿದ್ಧಕರಣಂ ತಥಾ।
ವಿಹಿತಾಕರಣಂ ಚಾಪಿ ವೀಕ್ಷ್ಯೈಷಾಮಪರಾಧಕಾನ್।
ಮಿಶ್ರಸರ್ಗಕರೋಮ್ಯೇವ ಬ್ರಹ್ಮಣಾ ಪರಮೇಷ್ಠಿನಾ।
ಏವಂ ಸುಕೃತ ಲೇಶೇನ ಶುದ್ಧ ಸರ್ಗಂ ಕರೋಮಿ ಚ।
ಮನುಪ್ರಮುಖ ಸರ್ಗೋಯ ಶುದ್ಧ ಸರ್ಗೋಮಯೇರಿತಃ।

ಶುದ್ಧ ಸತ್ತ್ವಮಯಾಸ್ಸರ್ವೇ ಮದ್ಭಕ್ತಿನಿರತಾಸ್ಸದಾ।
ಮಮಾರ್ಚನ ಪರಾಸ್ಸರ್ವೇ ಮದ್ಧ್ಯಾನ ಪರಿಬೃಂಹಿತಾ।
ನಮಸ್ಯನ್ತೋ ಮಹೀಭಾಗ ಮಹಾತ್ಮಾನೋ ಜಿತೇಂದ್ರಿಯಃ।
ಭಕ್ತ್ಯಾಪರಮಯಾಚೈವ ಪ್ರಪತ್ತ್ಯಾವಾ ಮಹಾಮುನೇ।
ಪ್ರಾಪ್ಯಂ ವೈಕುಂಠಮಾಸಾದ್ಯ ನ ನಿವರ್ತಂತಿ ತೇಽವ್ಯಯಾಃ।
ಏವಂ ಸರ್ವೇಷು ಕುರ್ವತ್ಸು ಮಾನವೇಷು ಮುಮುಕ್ಷುಷು।
ಸೃಷ್ಟಿಕ್ಷಯೋ ಮಹಾನಾಸೀನ್ನಾರಕೀ ಭೂಸ್ಸ್ವಶಾವೃತಾ।
ಇತಿ ಜ್ಞಾತ್ವಾಮಿಶ್ರಸರ್ಗಃ ಕ್ರಿಯತೇ ಲೀಲಾಯಾಮಯಾ। [6]
ಎಂದು ಪರಮಾತ್ಮನೇ ಅನುಗ್ರಹಿಸಿದ್ದಾನೆ.

## ಸೂ. 49. ವಿಭವಮ್ ಅನಂತ ಮಾಯ್ ಗೌಣಮುಖ್ಯ ಭೇದತ್ತಾಲೇ ಭೇದಿತ್ತಿರುಕ್ಕು ಮ್.

ವ್ಯೂಹದ ವಿವರಣೆಯ ನಂತರ ವಿಭವದ ಪ್ರಕಾರಗಳನ್ನು ವಿಸ್ತಾರವಾಗಿ ಉಪಪಾದಿಸುತ್ತಾರೆ.
ವಿಭವೋಽ ಪಿತಥಾಽ ನಂತೋ ದ್ವಿಧೈವ ಪರಿಕೀರ್ತ್ಯತೇ।
ಗೌಣ ಮುಖ್ಯ ವಿಭಾಗೇನ ಶಾಸ್ತ್ರೇಷು ಚ ಹರೇರ್ಮುನೇ।[1] ಎಂದೂ
ಪ್ರಾದುರ್ಭಾವೋದ್ವಿಧಾಪ್ರೋಕ್ತೋ ಗೌಣಮುಖ್ಯ ವಿಭೇದತಃ।[2] ಎಂದೂ ಹೇಳಲ್ಪಡುವಂತೆ ವಿಭವವೆಂದರೆ ಎಣಿಸಲಾರದಂತೆ, ಅನಂತವಾಗಿ, ಗೌಣಮುಖ್ಯ ಭೇದದಿಂದ ಎರಡು ವಿಧವಾಗಿರುತ್ತದೆ. ವಿಭವವೆಂದರೆ ಇತರ ಸಜಾತೀಯವಾಗಿ ಅವತರಿಸುವಿಕೆ.

ಗೌಣವೆಂದರೆ - 'ಅವರ'- ಪ್ರಧಾನವಲ್ಲದ್ದು ವೆಂದರ್ಥ. 'ಮುಖ್ಯ' ವೆಂದರೆ- ಶ್ರೇಷ್ಠವೆಂದರ್ಥ. ಗೌಣವೆಂದರೆ 'ಆವೇಶಾವತಾರ'. ಮುಖ್ಯವೆಂದರೆ - 'ಸಾಕ್ಷಾದವತಾರ'. ಆವೇಶಾವತಾರವು - ಸ್ವರೂಪಾವೇಶವೆಂದೂ, ಶಕ್ತ್ಯಾವೇಶವೆಂದೂ ಎರಡುವಿಧ. ಸ್ವರೂಪಾವೇಶವೆಂದರೆ ತನ್ನದೇ ಆದ ರೂಪದಿಂದ ಆವೇಶಿಸುವುದು. ಅದು ಹೇಗೆಂದರೆ ಪರಶುರಾಮಾದಿಗಳಾದ ಚೇತನರ ಶರೀರಗಳಲ್ಲಿ ತನ್ನ ಅಸಾಧಾರಣ ವಿಗ್ರಹದೊಡನೆ ಆವೇಶಿಸುವಿಕೆ. ಶಕ್ತ್ಯಾವೇಶವೆಂದರೆ - ಒಂದು ಕಾರ್ಯಾರ್ಥವಾಗಿ ಚತುರ್ಮುಖಬ್ರಹ್ಮ, ಶಿವ ಮೊದಲಾದವರಲ್ಲಿ ಶಕ್ತಿಮಾತ್ರದಿಂದ ಸ್ಫುರಿಸುವಿಕೆಯಾಗಿದೆ.

## ಸೂ. 50. ಮನುಷ್ಯತ್ತ್ವಮ್, ತಿರ್ಯಕ್ತ್ವಮ್, ಸ್ಥಾವರತ್ವಮ್‌ಪೋಲೇ, ಗೌಣತ್ವಮುಮ್, ಇಚ್ಛೈಯಾಲೇ ವನ್ದದು, ಸ್ವರೂಪೇಣವನ್ರು.

ಮುಖ್ಯವಿಭವಕ್ಕೂ ಗೌಣವಿಭವಕ್ಕೂ ಇರುವ ಸಾಮ್ಯ ವೈಷಮ್ಯಗಳನ್ನು ನಿರೂಪಿಸುತ್ತಾರೆ.
ಮದಿಚ್ಛಯಾಹಿ ಗೌಣತ್ವಂ ಮಾನುಷ್ಯಮಿವ ಚೇಚ್ಛಯಾ।
ಸೂಕರತ್ವಂ ಚ ಮತ್ಸ್ಯತ್ವಂ ನಾರಸಿಂಹತ್ವ ಮೇವಚ।
ಯಥಾ ವಾ ದಂಡಕಾರಣ್ಯೇ ಕುಬ್ಜಾಮ್ರತ್ವಂ ಮಮೇಚ್ಛಯಾ।
ಯಥಾವಾಜಿಮುಖತ್ವಂ ಚ ಮಮಸಂಕಲ್ಪತೋ ಭವೇತ್।
ಸೇನಾಪತೇ ಮಮೇಚ್ಛಾತೋ ಗೌಣತ್ವಂ ನ ಚ ಕರ್ಮಣಾ।[1]

ಎಂಬಂತೆ ರಾಮಕೃಷ್ಣತ್ವಾದಿಯಾದ ಮನುಷ್ಯತ್ವ; ಮತ್ಸ್ಯಕೂರ್ಮ ಇತ್ಯಾದಿಯಾದ ತಿರ್ಯಕ್ತ್ವ ; ಕುಬ್ಜಾಮ್ರ (ಕುಳ್ಳಗಿನ ಮಾವಿನ ಮರ) ವಾದ ಸ್ಥಾವರತ್ವ, ಇವೆಲ್ಲವೂ ತನ್ನ ಇಚ್ಛೆಯಿಂದಲೇ ಆದಂತೆ ಆವೇಶರೂಪವಾದ ಗೌಣತ್ವವೂ ತನ್ನ ಇಚ್ಛೆಯಿಂದಲೇ ಏರ್ಪಟ್ಟದ್ದು ; ಎಂದರೆ ಅಪ್ರಾಕೃತವಾದ ತನ್ನ ಅಸಾಧಾರಣ ದಿವ್ಯಮಂಗಳ ವಿಗ್ರಹದೊಡನೆ ಬಂದದ್ದು ಎಂಬುದಾಗಿದೆ. ಉದಾಹರಿಸಿದ ವಚನಗಳು ಇಚ್ಛೆಯಿಂದಲೇ ಬಂದದ್ದು ಎಂದು ಹೇಳಿದರೂ, ಗೌಣತ್ವವೆಂದರೆ -ಮನುಷ್ಯಾದಿಗಳಂತೆ ತನ್ನ ಅಪ್ರಾಕೃತವಾದ ದಿವ್ಯಮಂಗಳ ಸಂಸ್ಥಾನವನ್ನು ಇತರ ಸಜಾತೀಯವಾಗಿಸಿ ಅವತರಿಸುವುದು ಮಾತ್ರವಲ್ಲದೆ, ಸ್ವರೂಪದಿಂದಲೂ ಬಂದವತರಿಸಿರುವುದು ಎಂಬುದು ಸಿದ್ಧವಾಗಿದೆ.

## ಸೂ. 51 ಅತಿಲ್ ಅಪ್ರಾಕೃತ ವಿಗ್ರಹಂಗಳುಮಾಯ್, ಅಜಹತ್ ಸ್ವಭಾವ ವಿಭವಂಗಳುಮಾಯ್, ದೀಪಾದುತ್ಪನ್ನ ಪ್ರದೀಪಂ ಪೋಲೇ ಇರುಕ್ಕಕ್ಕಡವತಾನ ಮುಖ್ಯ ಪ್ರಾದುರ್ಭಾವಂಗಳೆಲ್ಲಾಂ, ಮುಮುಕ್ಷುಗಳುಕ್ಕು ಉಪಾಸ್ಯಂಗಳಾಯಿರುಕ್ಕುಮ್.

ಉಪಾಸ್ಯತ್ವ, ಅನುಪಾಸ್ಯತ್ವಗಳ ವಿಷಯವಾಗಿಯೂ ಇವೆರಡಕ್ಕೂ ಇರುವ ವಿಶೇಷಗಳನ್ನು ನಿರೂಪಿಸುವ ಉದ್ದೇಶ್ಯದಿಂದ ಮೊದಲು ಮುಖ್ಯವಿಭವದ ಉಪಾಸ್ಯತ್ವವನ್ನು ಸಕಾರಣವಾಗಿ ಅನುಗ್ರಹಿಸುತ್ತಾರೆ.

**ಪ್ರಾದುರ್ಭಾವಾಸ್ತುಮುಖ್ಯಾಯೇ ಮದಂಶತ್ವಾ ದ್ವಿಶೇಷತಃ।**
**ಅಜಹತ್ಸ್ವಭಾವ ವಿಭವಾದಿವ್ಯಾಃ ಪ್ರಾಕೃತ ವಿಗ್ರಹಃ।**
**ದೀಪಾದ್ದೀಪಾಇವೋತ್ಪನ್ನಾ ಜಗತೋ ರಕ್ಷಣಾಯತೇ।**
**ಅರ್ಚ್ಯಾ ಏವ ಹಿ ಸೇನೇಶ ಸಂಸೃತ್ಯುತ್ತರಣಾಯತೇ।**

**ಮುಖ್ಯಾಉಪಾಸ್ಯಾಸ್ಸೇನೇಶ ಅನರ್ಚ್ಯಾನಿತರಾನ್ವಿದುಃ**[1] ಎಂಬಂತೆ 'ಆದಿಯಂ ಶೋದಿ ಉರುವ್ವೆ ಅಂಗುವೈತ್ತ ಇಂಗುಪ್ಪಿರುದ' ಎಂಬಂತಿರುವುದರಿಂದ ಅಪ್ರಾಕೃತ ವಿಗ್ರಹವುಳ್ಳದ್ದಾಗಿ '**ಅಜೋಽಪಿಸನ್ ಅವ್ಯಯಾತ್ಮಾ ಭೂತಾನಾಮೀಶ್ವರೋಽಪಿಸನ್**'[2] ಎಂಬಂತೆ ಬೇರ್ಪಡಲಾಗದ ಅಜತ್ವ, (ಹುಟ್ಟಿಲ್ಲದಿರುವಿಕೆ) ಅವ್ಯಯತ್ವ (ವಿಕಾರವಿಲ್ಲದಿರುವಿಕೆ) ಸರ್ವೇಶ್ವರತ್ವಾದಿಯಾದ ಸ್ವಭಾವವಿಭವಗಳನ್ನು ಉಳ್ಳವನಾಗಿ, ಅದರಂತೆ ದೀಪದಿಂದ ಉತ್ಪನ್ನವಾದ ದೀವಟಿಗೆಯು, ತನಗೆ ಕಾರಣವಾದ ದೀಪದ ಸ್ವಭಾವಗಳನ್ನು ಹೊಂದಿರುವಂತೆ. ತಮ್ಮ ಕಾರಣದ ತುಲ್ಯ ಸ್ವಭಾವಗಳನ್ನುಳ್ಳ ಮುಖ್ಯ ಪ್ರಾದುರ್ಭಾವಗಳೆಲ್ಲವೂ ಮುಮುಕ್ಷುಗಳಿಗೆ ಉಪಾಸ್ಯವಾಗಿದೆ.

## ಸೂ. 52 ವಿಧಿ ಶಿವ ಪಾವಕ ವ್ಯಾಸ ಜಾಮದಗ್ನಿ ಅರ್ಜುನ ವಿತ್ತೇಶಾದಿಗಳಾಗಿರ ಗೌಣ ಪ್ರಾದುರ್ಭಾವಂಗಳೆಲ್ಲಾಂ ಅಹಂಕಾರಯುಕ್ತ ಜೀವರ್‌ಗಳ್ಳೈ ಅಧಿಷ್ಠಿತ್ತು, ನಿರ್ಕ್ಕೈಯಾಲೇ, ಮುಮುಕ್ಷುಕಳಕ್ಕು ಅನುಪಾಸ್ಯಂಗಳ್.

ಅನಂತರ ಗೌಣವಿಭವದ ಅನುಪಾಸ್ಯತ್ವವನ್ನು ಸಕಾರಣವಾಗಿ ನಿರೂಪಿಸುತ್ತಾರೆ.

**ಅನರ್ಚ್ಯಾನಪಿ ವಕ್ಷ್ಯಾಮಿ ಪ್ರಾದುರ್ಭಾವಾನ್ ಯಥಾಕ್ರಮಮ್।**

ಚತುರ್ಮುಖಸ್ತು ಭಗವಾನ್ ಸೃಷ್ಟಿ ಕಾರ್ಯೇ ನಿಯೋಜಿತಃ।
ಶಂಕರಾಖ್ಯೋ ಮಹಾರುದ್ರಸ್ಸಂಹಾರೇ ವಿನಿಯೋಜಿತಃ।
ಮೋಹನಾಖ್ಯಸ್ತಥಾಬುದ್ಧೋ ವ್ಯಾಸಶ್ಚೈವ ಮಹಾನೃಷಿಃ।
ವೇದಾನಾಂ ವ್ಯಸನೇ ತತ್ರ ದೇವೇನ ವಿನಿಯೋಜಿತಃ।
ಅರ್ಜುನೋಧನ್ವಿನಾಂ ಶ್ರೇಷ್ಠೋ ಜಾಮದಗ್ನ್ಯೋ ಮಹಾನೃಷಿಃ।
ವಸೂನಾಂ ಪಾವಕಶ್ಚಾಪಿ ವಿತ್ತೇಶಶ್ಚ ತಥೈವ ಚ ।
ಏವಮಾದ್ಯಾಸ್ತು ಸೇನೇಶ ಪ್ರಾದುರ್ಭಾವೈರಧಿಷ್ಠಿತಾಃ।
ಜೀವಾತ್ಮಾನಸ್ಸರ್ವ ಏತೇನೋಪಾಸ್ಯೈರ್ವೈಷ್ಣವೀಹಿ ಸಾ।
ಅನಿಷ್ಟ ಮಾತ್ರಾಂತೇ ಸರ್ವೇಕಾರ್ಯಾರ್ಥಮಮಿತ ದ್ಯುತೇ।
ಅನರ್ಚ್ಯಾಸ್ಸರ್ವ ಏವೈತೇ ವಿರುದ್ಧತ್ವಾನ್ಮಹಾಮತೇ।
ಅಹಂಕೃತಿಯುತಾಶ್ಚೇಮೇ ಜೀವ ಮಿಶ್ರಾಹ್ಯಧಿಷ್ಠಿತಾಃ।[1]

ಎಂಬಂತೆ ಸೃಷ್ಟಿಕರ್ತನಾದ ಚತುರ್ಮುಖನೂ, ಶಿವ, ಅಗ್ನಿಗಳೂ, ವೇದಗಳನ್ನು ವಿಭಾಗ ಮಾಡಿದ ವ್ಯಾಸರೂ, ದುಷ್ಟಕ್ಷತ್ರಿಯ ನಿರಸನ ಮಾಡಿದ ಜಮದಗ್ನಿ ಪುತ್ರನಾದ ಪರಶುರಾಮನೂ, **'ಅಕಾರ್ಯಚಿಂತಾಸಮಕಾಲ ಮೇವ ಪ್ರಾದು ರ್ಭವಂಶ್ಚಾಪಧರಃ ಪುರಸ್ತಾತ್'**[2] ಎಂಬಂತೆ. ಧನುಸ್ಸನ್ನು ಹಿಡಿದು ಜಗತ್ತನ್ನು ರಕ್ಷಿಸಿದ ಕಾರ್ತವೀರ್ಯಾರ್ಜುನನೂ, ಔದಾರ್ಯಪ್ರಧಾನನಾದ ಕುಬೇರನೂ, ಆದಿಶಬ್ದರಿಂದ ಕ್ರೋಢೀಕೃತರಾದ ಕಕುತ್ಸ್ಥ, ಮುಚುಕುಂದ ಪ್ರಭೃತಿಗಳಾದ ಗೌಣ ಪ್ರಾದುರ್ಭಾವಗಳೆಲ್ಲವೂ, ಸ್ವಾತಂತ್ರ್ಯರೂಪವಾದ ಅಹಂಕಾರಯುಕ್ತರಾದ ಜೀವರುಗಳನ್ನು ಕಾರ್ಯಾರ್ಥವಾಗಿ ಆವೇಶಮುಖೇನ ಅಧಿಷ್ಠಾನ ಮಾಡಿದ್ದರಿಂದ ಬುಭುಕ್ಷುಗಳ ಹೊರತಾಗಿ ಮುಮುಕ್ಷುಗಳಿಗೆ ಉಪಾಸ್ಯವಲ್ಲ ಎನ್ನಲಾಗಿದೆ.

'ವ್ಯಾಸಜಾಮದಗ್ನ್ಯಾರ್ಜುನ' ಎಂಬಲ್ಲಿ ಅರ್ಜುನ -ಎಂದರೆ ಪಾಂಡುಪುತ್ರನಾದ ಅರ್ಜುನನೂ ಆಗಬಹುದು. ಏಕೆಂದರೆ ಇತಿಹಾಸಗಳು ಅವನನ್ನೂ ಆವೇಶಾವತಾರವಾಗಿ ಹೇಳುತ್ತವೆ.

ಈ ಗೌಣ ಪ್ರಾದುರ್ಭಾವದ ಅನುಪಾಸ್ಯತ್ವವು
ಬಹ್ಮ ರುದ್ರಾರ್ಜುನ ವ್ಯಾಸ ಸಹಸ್ರಕರ ಭಾರ್ಗವಾಃ।
ಕಕುತ್ಸ್ಥಾತ್ರೇಯ ಕಪಿಲ ಬುದ್ಧಾದ್ಯಾ ಯೇ ಸಹಸ್ರಶಃ।
ಶಕ್ತ್ಯಾವೇಶಾವತಾರಾಸ್ತು ವಿಷ್ಣೋಃ ಸ್ತತ್ಕಾಲ ವಿಗ್ರಹಃ।
ಅನುಪಾಸ್ಯಾಮುಮುಕ್ಷೂಣಾಂ ಯಥೇಂದ್ರಾಗ್ನ್ಯಾದಿ ದೇವತಾಃ।[3]

ಎಂದು ಇನ್ನೊಂದು ಸಂಹಿತೆಯಲ್ಲೂ ಹೇಳಲ್ಪಟ್ಟಿದೆ, ಉಪಾತ್ತವಚನಗಳಲ್ಲಿ ಬುದ್ಧನನ್ನೂ, ಆವೇಶಾವತಾರಗಳಲ್ಲಿ ಒಂದಾಗಿ ಹೇಳಲ್ಪಟ್ಟಿದ್ದು - **'ಮಾವುರುವಿರ್ಕ್ಕಳ್ವೇಡಮ್'**[4] ಎಂದು ಸ್ವೇನರೂಪೇಣ ಅವತರಿಸಿದ್ದೆಂದು ಹೇಳಿದ ನಮ್ಮ ಆಚಾರ್ಯರುಗಳ ವಚನಗಳಿಗೆ ವಿರುದ್ಧವಲ್ಲವೇ ಎಂದರೆ ಕಲ್ಪಭೇದದಿಂದ ಹೀಗೂ ಏರ್ಪಡಬಹುದಾದ್ದರಿಂದ ವಿರುದ್ಧವಲ್ಲ. ಪರಶುರಾಮನು ಸ್ವರೂಪಾವೇಶ ಅವತಾರವಾಗಿದ್ದರೂ, ಶಕ್ತ್ಯಾವೇಶಗಳ ಜೊತೆಯಲ್ಲಿ ಹೇಳಲ್ಪಟ್ಟದ್ದಕ್ಕೆ ಕಾರಣ ಸ್ವರೂಪೇಣ ಆವೇಶಿಸುವುದು ಶಕ್ತಿ ವಿಶೇಷದಿಂದಲೇ ಆದ್ದರಿಂದ ಎಂದು ಅರಿಯಬೇಕು.

ಸೂ. 53 **ನಿತ್ಯೋದಿತ ಶಾಂತೋದಿತಾದಿ ಭೇದಮುಮ್, ಜಾಗ್ರತ್ಸಂಜ್ಞಾದಿಯಾನ ಚಾತುರಾತ್ಮ್ಯಮುಮ್, ಕೇಶವಾದಿ ಮೂರ್ತ್ಯಂತರಮುಮ್, ಷಟ್‌ತ್ರಿಂಶತ್ ಭೇದಭಿನ್ನಮಾನ ಪದ್ಮನಾಭಾದಿವಿಭವಮುಮ್, ಉಪೇಂದ್ರ ತ್ರಿವಿಕ್ರಮ ದಧಿಭಕ್ತ ಹಯಗ್ರೀವ ನರ ನಾರಾಯಣ ಹರಿ ಕೃಷ್ಣ ಮತ್ಸ್ಯಕೂರ್ಮವರಾಹಾದ್ಯವತಾರ ವಿಶೇಷಂಗಳುಂ, ಅವತ್ತಿನುಡೈಯ ಭುಜಾಯುಧವರ್ಣಕೃತ್ಯಸ್ಥಾನಾದಿ ಭೇದಂಗಳುಂ, ದುರವಧರಂಗಳುಮಾಯ್, ಗುಹ್ಯತಮಂಗಳುಮಾಯಿರುಕ್ಕೈಯಾಲೇ ಶೊಲ್ಲುಕಿರಿಲೋಮ್.**

ವಿಭವಗಳ ಆನಂತ್ಯವನ್ನೂ ಅವುಗಳ ಗೌಣಮುಖ್ಯ ವಿಭಾಗಗಳನ್ನೂ, ಅವುಗಳ ನಡುವಿನ ಪರಸ್ಪರ ವಿಶೇಷಗಳನ್ನೂ ಹಿಂದಿನ ಸೂತ್ರಗಳಲ್ಲಿ ತಿಳಿಸಲಾಯಿತು. ಅನಂತರ ಹಿಂದೆ ನಿರೂಪಿಸಿದ ಪರವ್ಯೂಹಗಳಿಗೂ, ಮುಖ್ಯವಿಭವಗಳಿಗೂ ನಡುವಿನ ಭೇದಗಳು, ಅವುಗಳ ಭುಜ, ಆಯುಧ, ವರ್ಣಾದಿಭೇದಗಳೂ ಹೇಳಲ್ಪಡಬೇಕಾಗಿರುವಾಗ ಅದನ್ನು ಹೇಳದೇ ಇರಲು ಕಾರಣವನ್ನು ಈ ಸೂತ್ರದಲ್ಲಿ ತಿಳಿಸುತ್ತಾರೆ.

(ನಿತ್ಯೋದಿತ ಶಾಂತೋದಿತಾದಿ ಭೇದಮುಮ್)– 'ನಿತ್ಯೋದಿತಾತ್ಸಂಬಭೂವ ತಥಾ ಶಾಂತೋದಿತೋ ಹರಿಃ।'[1] ಇತ್ಯಾದಿಗಳಲ್ಲಿ ಹೇಳಲ್ಪಡುವಂತೆ ನಿತ್ಯ ಮುಕ್ತರಿಂದ ಅನುಭವಿಸಲ್ಪಡುವವನಾಗಿ, 'ನಿತ್ಯೋದಿತ' ಎಂದು ಕರೆಯಲ್ಪಡುವವಪರವಾಸುದೇವನೂ, ಅವನಿಂದ ಉತ್ಪನ್ನನಾಗಿ ಸಂಕರ್ಷಣ ವ್ಯೂಹಕಾರಣನಾಗಿ, 'ಶಾಂತೋದಿತ' ಎಂದು ಕರೆಯಲ್ಪಡುವ ವ್ಯೂಹ ವಾಸುದೇವನೂ, ಮೊದಲಾದವು ವಾಸುದೇವಮೂರ್ತಿಯ ಭೇದವಾಗಿದೆ. ವ್ಯೂಹಗಳು ನಾಲ್ಕೆಂದೂ, ಮೂರೆಂದೂ, ಶಾಸ್ತ್ರಗಳು ಹೇಳುತ್ತವೆ. ನಾಲ್ಕಾಗಿರುವಾಗ ಮೂರೆನ್ನುವುದು, ವ್ಯೂಹ ವಾಸುದೇವರೂಪಕ್ಕೆ ಪರರೂಪಕ್ಕಿಂತ ಅನುಸಂಧೇಯವಾದ ಗುಣಭೇದವಿಲ್ಲದ್ದರಿಂದ' ಎಂದು ಅಭಿಯುಕ್ತರು ಹೇಳುವುದರಿಂದ ಹಿಂದೆ ವ್ಯೂಹತ್ರಯವೆಂದು ಇವರು ಹೇಳಿದ್ದಕ್ಕೂ ಇಲ್ಲಿ ವ್ಯೂಹವಾಸುದೇವನುಂಟೆಂದು ಹೇಳಿರುವುದಕ್ಕೂ ವಿರೋಧವಿಲ್ಲ.

(ಜಾಗ್ರತ್ಸಂಜ್ಞಾದಿಯಾನ ಚಾತುರಾತ್ಮ್ಯಮ್) – ಶಾಂತೋದಿತೋತ್ಪತ್ತಿಯನ್ನು ಹೇಳಿದ ನಂತರ

ಚಾತುರಾತ್ಮ್ಯಮಥೋಪಿಂಡಂ ಕೃಪಯಾಪರಮೇಷ್ಠಿನಃ।
ಉಪಾಸಕಾನುಗ್ರಹಾರ್ಥಂ ಯಃ ಪರಶ್ಚೇತಿ ಕೀರ್ತ್ಯತೇ।
ಶಾಂತೋದಿತಾತ್ಪ್ರವೃತ್ತಂ ಯಜ್ಜಾಗ್ರತ್ಸಂಜ್ಞಂ ತಥಾಪರಮ್।
ಚಾತುರಾತ್ಮ್ಯಂ ಮಹಾಭಾಗ ಪಂಚಮಂ ಪಾರಮೇಶ್ವರಮ್।[2] ಎಂದೂ
ಆದ್ಯೋ ವ್ಯೂಹೋಮಯಾ ಪ್ರೋಕ್ತೋಹ್ಯಪರಂ ತ್ರಿತಯಂ ಶೃಣು।
ಉಪಾಸಕಾನುಗ್ರಹಾರ್ಥಂ ಸ್ವಪ್ನಾದಿಪದಸಂಸ್ಥಿತಮ್।
ಸ್ವಪ್ನಾದ್ಯವಸ್ಥಾಭೇದಸ್ತು ಧ್ಯಾಯಿನಾಂ ಭೇದ ಶಾಂತಯೇ।
ತತ್ತತ್ಪದಸ್ಥ ಜೀವಾನಾಂ ತನ್ನಿ ವೃತ್ತ್ಯರ್ಥಮೇವಚ ।
ಸ್ವಪ್ನಾದ್ಯವಸ್ಥಾ ಜೀವಾನಾಂ ಅಧಿಷ್ಠಾತಾರ ಏವ ತೇ।
ಕರ್ಮಾತ್ಮನಾಂ ಚ ಸೇನೇಶ ತತ್ಪದಸ್ಥೋ ಮಮೇಚ್ಛಯಾ।
ಉಪಾಸ್ಯೋಽಹಂ ಮಹಾಭಾಗ ಪದಭೇದ ಪ್ರಯೋಜನಮ್।

ಎಂದು ಹೇಳಲ್ಪಡುವಂತೆ ಉಪಾಸಕರನ್ನು ಅನುಗ್ರಹಿಸುವುಕ್ಕಾಗಿಯೇ ತನ್ನ ಕೃಪೆಯಿಂದಲೇ ಏರ್ಪಟ್ಟಿದ್ದಾಗಿ ಧ್ಯಾನಮಾಡುವವರ ಭೇದಶಾಂತಿಯನ್ನು ಕುರಿತೂ, ಆಯಾಯಾ ಪದದಲ್ಲಿರುವ ಜೀವರುಗಳಿಗೆ ಅದರ ನಿವೃತ್ತಿಯನ್ನು ಕುರಿತೂ, ಆಯಾಯಾ ಪದಸ್ಥ ಜೀವರುಗಳಿಗೆ ಅಧಿಷ್ಠಾತೃವಾಗಿ, ಆಯಾಯಾ ಪದಸ್ಥನಾಗಿ ಕರ್ಮವಶ್ಯರಾದ ಚೇತನರುಗಳಿಗೆ ಉಪಾಸ್ಯನಾಗುವುದನ್ನೇ ಪದಭೇದ ಪ್ರಯೋಜನವಾಗಿ ಭಾವಿಸಿ, ವ್ಯೂಹ ಚತುಷ್ಟಯದಲ್ಲೂ ಪ್ರತ್ಯೇಕವಾಗಿ ಏರ್ಪಟ್ಟ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ ಸಂಜ್ಞಕವಾದ ನಾಲ್ಕು ರೂಪವನ್ನು ಉಳ್ಳವನಾಗಿರುವಿಕೆ.

(ಕೇಶವಾದಿ ಮೂರ್ತ್ಯಂತರಮ್) -

**ಏತದಂತರ್ಗತಾಸ್ಸರ್ವೇಮೂರ್ತ್ಯಂತರ ಸಮಾಹ್ವಯಾಃ।**
**ಕೇಶವಾದ್ಯಾ ದ್ವಾದಶ ಚ ಲಲಾಟಾದಿಷು ನಿಷ್ಠಿತಾಃ।**
**ಶರೀರ ರಕ್ಷಕಾಸ್ಸರ್ವೇ ಧ್ಯಾಯಿನಾಂ ತಾಪಶಾಂತಯೇ।**ಎಂದೂ
**ಕೇಶವಾದ್ಯಂ ತ್ರಯಂ ತತ್ರವಾಸುದೇವಾದ್ವಿ ಭಾಷ್ಯತೇ।**
**ಸಂಕರ್ಷಣಾಚ್ಚ ಗೋವಿಂದ ಪೂರ್ವಂ ತ್ರಿತಯಮದ್ಭುತಮ್।**
**ತ್ರಿವಿಕ್ರಮಾದ್ಯಂ ತ್ರಿತಯಂ ಪ್ರದ್ಯುಮ್ನಾದುದಿತಂ ಮುನೇ।**
**ಹೃಷೀಕೇಶಾದಿಕಂ ತದ್ವದನಿರುದ್ಧಾನ್ಮ ಹಾಮುನೇ।**[4]

ಎಂದೂ ಹೇಳಲ್ಪಡುವಂತೆ ಲಲಾಟಾದಿಗಳಲ್ಲಿ ನಿಂತು ಶರೀರ ರಕ್ಷಣವನ್ನು ಮಾಡುತ್ತಾ ಧ್ಯಾನ ಮಾಡುವವರ ತಾಪಶಾಂತಿಯನ್ನು ಉಂಟುಮಾಡುವುವವನಾಗಿ ವ್ಯೂಹ ಚತುಷ್ಟಯದ ಒಂದೊಂದರಲ್ಲೂ ಮೂರು ಮೂರಾಗಿ ಉತ್ಪನ್ನವಾಗಿ ಮೂರ್ತ್ಯಂತರ ಸಮಾಹ್ವಯವಾಗಿರುವ ಕೇಶವಾದಿ ವ್ಯೂಹಾಂತರಗಳು .

(ಷಟ್‌ತ್ರಿಂಶತ್ ಭೇದ ಭಿನ್ನಮಾನ ಪದ್ಮನಾಭಾದಿವಿಭವಮ್) -

**ಪದ್ಮನಾಭಾದಿಕಾಸ್ಸರ್ವೇ ವೈಭವೀಯ ಸ್ತಥೈವ ಚ।**
**ಷಟ್ತ್ರಿಂಶತ್ ಸಂಖ್ಯಾ ಸಂಖ್ಯಾತಾಃ ಪ್ರಾಧಾನ್ಯೇನ ಗಣೇಶ್ವರ।**
**ಷಟ್ತ್ರಿಂಶದ್ಭೇದ ಭಿನ್ನಾಸ್ತೇ ಪದ್ಮನಾಭಾದಿಕಾಸ್ಸುರಾಃ।**
**ಅನಿರುದ್ಧಾತ್ಸಮುತ್ಪನ್ನಾ ದೀಪಾದ್ದೀಪ ಇವೇಶ್ವರಾಃ।**[5]

ಎಂಬಂತೆ ದೀಪದಿಂದ ಉತ್ಪನ್ನವಾದ ಮತ್ತೊಂದು ದೀಪದಂತೆ, ಅನಿರುದ್ಧನಿಂದ ಉತ್ಪನ್ನಗಳಾಗಿ, ಪ್ರಧಾನಗಳಾಗಿ, ಮೂವತ್ತಾರು ಭೇದಗಳಿಂದ ಭಿನ್ನ ಭಿನ್ನವಾಗಿರುವ ಪದ್ಮನಾಭಾದಿ ಅವತಾರ ವಿಶೇಷಗಳು, ಈ ಪದ್ಮಾನಾಭಾದಿಗಳು

**ವಿಭವಾಃ ಪದ್ಮಾನಾಭಾದ್ಯಾಸ್ತ್ರಿಂಶಚ್ಚ ನವ ಚೈವ ಹಿ।**
**ಪದ್ಮ ನಾಭೋಧ್ರುವೋಽ ನನ್ತಶ್ಶಕ್ತ್ಯಾತ್ಮಾ ಮಧುಸೂದನಃ।**
**ವಿದ್ಯಾಧಿದೇವಃ ಕಪಿಲೋ ವಿಶ್ವ ರೂಪೋ ವಿಹಂಗಮಃ।**
**ಕ್ರೋಧಾತ್ಮಾ ಬಡಬಾವಕ್ತ್ರೋ ಧರ್ಮೋವಾಗೀಶ್ವರ ಸ್ತಥಾ।**
**ಏಕಾಂಭೋನಿಧಿಶಾಯಿ ಚ ಭಗವಾನ್ ಕಮಲೇಶ್ವರಃ।**
**ವರಾಹೋ ನರಸಿಂಹಶ್ಚ ಪೀಯೂಷಾಹರಣ ಸ್ತಥಾ।**
**ಶ್ರೀಪತಿ ರ್ಭಗವಾನ್ದೇವಃ ಶಾಂತಾತ್ಮಾಽ ಮೃತಧಾರಕಃ।**

ರಾಹುಜಿತ್ಕಾಲ ನೇಮಿಘ್ನಃ ಪಾರಿಜಾತಹರಸ್ತಥಾ।
ಲೋಕನಾಥಸ್ತು ಶಾಂತಾತ್ಮಾ ದತ್ತಾತ್ರೇಯೋ ಮಹಾಪ್ರಭುಃ।
ನ್ಯ ಗ್ರೋಧಶಾಯಿಾ ಭಗವಾನೇಕ ಶೃಂಗತನುಸ್ತಥಾ।
ದೇವೋವಾಮನ ದೇಹಸ್ತು ಸರ್ವವ್ಯಾಪೀ ತ್ರಿವಿಕ್ರಮಃ।
ನರೋನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವಚ।
ಜ್ವಲತ್ಪರಶುಧೃಗ್ರಾಮೋ ರಾಮಶ್ಚಾನ್ಯ ಶ್ಚತುರ್ಗತಿಃ॥
ವೇದವಿತ್ ಭಗವಾನ್‌ಕಲ್ಕೀ ಪಾತಾಳಶಯಿತಃ ಪ್ರಭುಃ।
ತ್ರಿಂಶಚ್ಚನವಚೈವೈತೇ ಪದ್ಮನಾಭಾದಯೋಮತಾಃ।[6]

ಎಂಬಂತೆ 39 ಎಂದು ಅಹಿರ್ಬುಧ್ನ್ಯಸಂಹಿತಾದಿಗಳಲ್ಲಿ ಹೇಳಿದ್ದರೂ, ವಿಷ್ವಕ್ಸೇನ ಸಂಹಿತೆಯಲ್ಲಿ 36 ಎಂದು ಹೇಳಿರುವುದರಿಂದ ಇಲ್ಲಿ 'ಷಟ್ ತ್ರಿಶಂತ್ ಭೇಧ ಭಿನ್ನಂ' ಎಂದು ಹೇಳಿದ್ದಾರೆ. 39ರಲ್ಲಿ ಮೂರು ಕಡಿಮೆಯಾಗಿರುವುದಾವುದೆಂದರೆ ಕಪಿಲ, ದತ್ತಾತ್ರೇಯ, ಪರಶುರಾಮರೂಪವಾದ ಆವೇಶಾವತಾರಗಳು.

**(ಉಪೇಂದ್ರ .... ಅವತಾರವಿಶೇಷಂಗಳ್)** - ಅವತಾರಗಂಧವಾದ್ದರಿಂದ ಸರ್ವ ಅವತಾರಗಳಿಗೂ ಅನಿರುದ್ಧನೇ ಕಾರಣವಾಗಿದ್ದರೂ, ಮೊದಲು ತಿಳಿಸಿದ ಪದ್ಮನಾಭಾದಿಗಳ ಜೊತೆಯಲ್ಲಿ ಹೇಳಲ್ಪಟ್ಟವುಗಳಲ್ಲಿ ಪೂರ್ವೋತ್ಪನ್ನವಿಭವದಲ್ಲಿಗಿಂತಲೂ, ಬೇರೆ ವಿಭವಗಳಾಗಿ ಉತ್ಪನ್ನವಾದವುಗಳುಂಟೆಂದನ್ನುವುದು; ಮುಂತಾದವುಗಳನ್ನು ನಿರೂಪಿಸಿ ಕೆಲವು ಪ್ರಯೋಜನಗಳನ್ನು ಕುರಿತು

ಪೂರ್ವೋತ್ಪನ್ನಾ ದ್ವೈಭವಿಯಾತ್ ಪ್ರಾದುರ್ಭೂತಾ ಮಹೇಶ್ವರಾಃ।
ಪ್ರಾದುರ್ಭಾವಾನ್ತರಾನ್ವಿದ್ಧಿ ತಾನ್ಸಗಣೇಶ್ವರ ಮುಖ್ಯತಃ।
ಉಪೇಂದ್ರಾಚ್ಚ ಯಥಾಮುಖ್ಯಾತ್ರಿ ವಿಕ್ರಮ ತನುರ್ಹರಿಃ।
ದಧಿಭಕ್ತಶ್ಚ ದೇವೇಶೋ ದರ್ವೀಹಸ್ತೋಽ ಮೃತಪ್ರದಃ।
ಕೃಷ್ಣಾಚ್ಚ ಮತ್ಸ್ಯ ರೂಪಸ್ಸ್ಯಾತ್ ಮತ್ಸ್ಯಾದ್ಧಯಶಿರೋ ಯಥಾ।
ನರೋ ನಾರಾಯಣ ಶ್ಚೈವ ಹರಿಃ ಕೃಷ್ಣಸ್ತಥೈವ ಚ।[7]

ಎಂದು ಪ್ರತ್ಯೇಕವಾಗಿ ಹೇಳಲ್ಪಟ್ಟ ಇಂದ್ರನಿಗೆ ಜೊತೆಯಾಗಿದ್ದು, ಜಗದ್ರಕ್ಷಣೆ ಮಾಡುವ ಉಪೇಂದ್ರಾವತಾರವೂ, ಗಡಿಯನ್ನು ಅಳೆದು ನಡೆಯುವವರಂತೆ ಲೋಕವನ್ನೆಲ್ಲಾ ಅಳೆದು ಇಂದ್ರನು ಕಳೆದುಕೊಂಡ ಐಶ್ವರ್ಯವನ್ನು ಮರಳಿಕೊಟ್ಟ ತ್ರಿವಿಕ್ರಮಾವತಾರವೂ, ಆ ಇಂದ್ರನಿಗೆ ಅಮೃತಪ್ರದಾನಾರ್ಥವಾಗಿ ಸ್ವೀಕರಿಸಿದ ದಧಿಭಕ್ತಾವತಾರವೂ, ವೇದ ಪ್ರದಾನಾರ್ಥವಾಗಿ ಸ್ವೀಕರಿಸಿದ ಹಯಗ್ರೀವಾವತಾರವೂ, ಶಿಷ್ಯ ಆಚಾರ್ಯರೂಪ ತಾಳಿ ಅಷ್ಟಾಕ್ಷರ ಮಂತ್ರವನ್ನು ಅನುಗ್ರಹಿಸಿದ ನರನಾರಾಯಣಾವತಾರಗಳೂ, ಅವರುಗಳೊಡನೆ ಧರ್ಮ ದೇವತೆಯಿಂದ ಹುಟ್ಟಿದ ಲೋಕರಕ್ಷಣ ಮಾಡಿದ ಹರಿ ಮತ್ತು ಕೃಷ್ಣಾವತಾರಗಳೂ, ಪ್ರಳಯರಕ್ಷಣೆ, ಮಂದರ ಪರ್ವತವನ್ನು ಧರಿಸಿದ್ದು, ಭೂಮ್ಯುದ್ಧರಣದೊಡನೆ ವಿದ್ಯಾ ಪ್ರದಾನ ಮಾಡಿದ ಮತ್ಸ್ಯಕೂರ್ಮ ವರಾಹಾವತಾರಗಳೂ, ಆದಿ ಶಬ್ದದಿಂದ ಕ್ರೋಢೀ ಕೃತಗಳಾದ ನರಸಿಂಹ, ಕಲ್ಕಿ, ಮೊದಲಾದವುಗಳು.

**(ಆವತ್ತಿನುದ್ದೆಯ ..... ಭೇದಂಗಳ್)** - ಹೀಗೆ ಹೇಳಲ್ಪಟ್ಟ ಪರ ವ್ಯೂಹ ವಿಭವಗಳ

ಭುಜಾಯುಧಾನಾಂ ನಿಯಮಸ್ತತ್ರ ತತ್ರೇಚ್ಛಯಾ ಮಮ।
ಜಾಗ್ರತ್ಸಂ ಜ್ಞೇ ಚಾತುರಾತ್ಮ್ಯೇ ತಥಾ ಭುಜಚತುಷ್ಟಯಮ್।

ಶಾಂತೋದಿತಾಸ್ತು ದ್ವಿಭುಜಾಸ್ತ್ವಾದ್ಯಾ ಗಣನಾಯಕ।।
ಆದಿದೇವೋ ಜಗನ್ನಾಥೋ ವಾಸುದೇವೋ ಜಗತ್ಪತಿಃ।
ಚತುರ್ಭುಜಃ ಶ್ಯಾಮಲಾಂಗಃ ಪರಮೇ ವ್ಯೋಮ್ನಿ ನಿಷ್ಠಿತಃ।
ನಿತ್ಯೋದಿತಶ್ಶಾಂತ ತನುರಾಸ್ತೇವ್ಯೋಮನಿಷದ್ಗುಣ ।
ಶಾಂತೋದಿತ ಶ್ಯಾಂತವಪುರ್ ದ್ವಿಭುಜಃ ಪುರುಷಾಕೃತಿಃ। [8] ಎಂದೂ,
ಕೇಶವಾದ್ಯಾಗಣಾಧ್ಯಕ್ಷ ಮೂರ್ತ್ಯಂತರ ಸಮಾಹ್ವಯಾಃ।
ಉಪಾಸಕಾನಾಂ ಸೇನೇಶ ಭುಕ್ತಿಮುಕ್ತಿ ಫಲ ಪ್ರದಾಃ।
ಸರ್ವೇ ಚತುರ್ಭುಜಾಜ್ಞೇಯಾಃ ಪದ್ಮಶಂಖಾದಿಧಾರಕಾಃ।
ತತ್ತತ್ ಶಾಸ್ತ್ರೇಷು ಚ ಜ್ಞೇಯಾ ಲಾಂಛನಾಭರಣಾದಯಃ।
ಚತುಶ್ಚಕ್ರಧರಂ ಮಾಂ ತು ಸ್ಮೃತ್ವಾ ಜಾಂಬೂನದಪ್ರಭಮ್।
ಚತುಶ್ಶಂಖಧರಂದೇವಂ ನೀಲಜೀಮೂತ ಸನ್ನಿಭಮ್।
ಇಂದ್ರ ನೀಲ ನಿಭಶ್ಯಾಮಂ ಚತುರ್ವಂತ್ಯೆರ್ಗದಾಧರಮ್।
ಚತುರ್ಭುಜ ಧನುಷ್ಮಂತಂ ಚಂದ್ರಭಾ ಸದೃಶದ್ಯುತಿಮ್।
ಚತುರ್ವಲಧರಂ ದೇವಂ ಪದ್ಮಕಿಂಜಲ್ಕಸನ್ನಿಭಮ್।
ಮುಸಲಾಸ್ತ್ರಂ ಮಹಾವಿಷ್ಣು ಮರವಿಂದಾಭ ಮೇವ ಚ।
ಖಡ್ಗಪಾಣಿಂ ಚತುರ್ವಸ್ತಮಗ್ನಿ ಸನ್ನಿಭ ತೇಜಸಮ್।
ಚತುರ್ವಜ್ರಧರಂ ದೇವಂ ತರುಣಾದಿತ್ಯ ಸನ್ನಿಭಮ್।
ಪಟ್ಟಸಾಯುಧ ಹಸ್ತಂ ಚ ಪುಂಡರೀಕಾಭ ಮೇವ ಚ।
ಚತುರ್ಭಿಃ ಮುದ್ಗರಧರಂ ಭಚ್ಛೆರ್ವಿದ್ಯುತ್ಸಮದ್ಯುತಿಮ್।
ಪಂಚಾಯುಧಧರಂ ಮಾಂ ಚ ಸಹಸ್ರಾಂಶು ಸಮಪ್ರಭಮ್।
ಪಾಶಹಸ್ತಧರಂ ದೇವಂ ಬಾಲಾರ್ಕಶತಸನ್ನಿಭಮ್। [9]

ಎಂಬಿತ್ಯಾದಿಗಳಲ್ಲಿ ಹೇಳಲ್ಪಡುವ ಭುಜ ಭೇದಗಳು, ಈ ವ್ಯೂಹ ಭೇದ, ವಿಭವ ಭೇದಗಳಿಗೆಲ್ಲಾ ಪ್ರತ್ಯೇಕವಾಗಿರುವ ಕೃತ್ಯಭೇದಗಳೂ, ಆಮೋದಾದಿಗಳೂ, ಅಯೋಧ್ಯಾ, ಮಧುರಾದಿಗಳು ಮುಂತಾದ ವ್ಯೂಹ ವಿಭವಗಳಿಗುಂಟಾದ ಪ್ರತ್ಯೇಕ ಸ್ಥಾನ ಭೇದಗಳೂ,- ಆದಿ ಶಬ್ದದಿಂದ ಕ್ರೋಢೀಕೃತಗಳಾದ ಭೂಷಣವಸ್ತ್ರಾದಿ ಭೇದಗಳೂ ಹೇಳಲ್ಪಟ್ಟಿವೆ.

**(ದುರವಧರಂಗಳುಂ......ಶೊಲ್ಲುಕ್ಕಿರಿಲೋಮ್)** - ಇಷ್ಟೆಲ್ಲಾ ಹೇಳಿದರೂ ಒಬ್ಬರ ಬುದ್ಧಿಗೆ ಎಟುಕಲಾರದ್ದಾದ್ದರಿಂದಲೂ, ಅವತಾರ ರಹಸ್ಯಗಳಾದ್ದರಿಂದಲೂ, ಅತ್ಯಂತ ಗುಹ್ಯವಾದದ್ದರಿಂದಲೂ ಹೇಳಲಾಗುವುದಿಲ್ಲ' ಎಂದರ್ಥ.

## ಸೂ. 54 ಅವತಾರಂಗಳುಕ್ಕು ಹೇತು ಇಚ್ಛೈ.

ಈ ಲೋಕದಲ್ಲಿ ನಮ್ಮ ಜನ್ಮಗಳಿಗೆ ನಮ್ಮ ಕರ್ಮಗಳು ಕಾರಣವಾಗುವಂತೆ, ಪರಮಾತ್ಮನ ಅವತಾರಗಳಿಗೆ ಕಾರಣವಾವುದೆಂಬುದನ್ನು ಈ ಸೂತ್ರದಿಂದ ತಿಳಿಸುತ್ತಾರೆ. ಅವತಾರಗಳಿಗೆ ಕಾರಣ 'ಭಗವಂತನ ಇಚ್ಛೆ'. 'ಬಹುಧಾ

ವಿಜಾಯತೇ'; 'ಬಹೂನಿ ಮೇ ವ್ಯತೀತಾನಿ ಜನ್ಮಾನಿ'; 'ಪಲಪಿರಪ್ಪಾಯ್';[1] 'ಎನ್ನಿನ್ರಯೋನಿಯು ಮಾಯ್ ಪ್ಪಿರಂದಾಯ್',[2] ' ಮನಿಶರಮ್ ಮತ್ತುಂ ಮುತ್ತುಮಾಯ್‌ಪ್ಪಿರವಿಪ್ಪಿರಂದ';[3] ಎಂದು ಬಹುವಿಧವಾಗಿ ಹೇಳಲ್ಪಡುವ ಭಗವಂತನ ಅವತಾರಗಳಿಗೆ ಕಾರಣ, ಹೀಗೆ ಅವತರಿಸಬೇಕೆಂಬ ತನ್ನ ಇಚ್ಛೆಯ ಹೊರತಾಗಿ ಬೇರಾವುದು ಅಲ್ಲ. 'ಸಂಭವಾಮಿ ಆತ್ಮಮಾಯಯಾ' [4] ಎಂದು ತಾನೇ ಇದನ್ನು ತಿಳಿಸಿದ್ದಾನೆ.

ಆತ್ಮಮಾಯಯಾ - ಎಂದರೆ 'ಆತ್ಮೇಚ್ಛಯಾ' ಎಂದರ್ಥ. 'ಮಾಯಾ ವೈಯುನಂ ಜ್ಞಾನಂ' ಎಂದು ಮಾಯಾ ಶಬ್ದವು ಜ್ಞಾನವನ್ನು ತಿಳಿಸುವ ಶಬ್ದವಾದ್ದರಿಂದ ಇಲ್ಲಿ 'ಇಚ್ಛಾರೂಪವಾದ ಜ್ಞಾನವು' ಹೇಳಲ್ಪಡುತ್ತದೆ. ಇದನ್ನೇ 'ಇಚ್ಛಾ ಗೃಹೀತಾಭಿಮತೋರುದೇಹಃ' ಎನ್ನಲಾಗಿದೆ.

ಇಯಂ ವೈಯಾಹಿವ್ಯೆ ಸ್ಥಿತಿ ರಥಕೀಃಲೇಚ್ಛಾವಿಹೃತ ಯೇ ವಿಭೂತೀನಾಂ ಮಧ್ಯೇ ಸುರನರತಿರ ಶ್ಚಾಮವತರನ್।
ಸಜಾತೀಯಸ್ತೇಷಾಮಿತಿತು ವಿಭವಾಖ್ಯಾಮಪಿ ಭಜನ್ ಕರೀಶತ್ವಂ ಪೂರ್ಣೋರ್ವರಗುಣಗಣೈಸ್ತಾನ್ ಸ್ಥಗಯಸಿ[5] ಎಂದೂ

ಏವಂ ಸ್ಥಿತೇತ್ವದುಪಸಂಶ್ರಯಣಾಭ್ಯುಪಾಯೋಮಾನೇನ ಕೇನಚಿದಲಸ್ಸ್ಯತನೋಪಲಬುಮ್।
ನೋಚೇದಮರ್ತ್ಯಮನುಜಾದಿಷು ಯೋನಿಷುತ್ವಮಿಚ್ಛಾ ವಿಹಾರ ವಿಧಿನಾ ಸಮವಾತರಿಷ್ಯಃ। [6]

ಎಂದು ಅವತಾರಕ್ಕೆ ಇಚ್ಛೆ ಹೇತು ಎಂಬುದನ್ನು ಆಳ್ವಾನ್ ವಿಶಾದವಾಗಿ ತಿಳಿಸಿದ್ದಾರೆ.

## ಸೂ. 55 ಫಲಮ್ ಸಾಧುಪರಿತ್ರಾಣಾದಿ ತ್ರಯಮ್.

ಈ ಅವತಾರಗಳಿಗೆ ಫಲವೇನು ಎಂಬುದನ್ನು ಇಲ್ಲಿ ಹೇಳುತ್ತಾರೆ.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ।[1]

ಎಂದು ಭಗವಂತನೇ ಅನುಗ್ರಹಿಸಿರುವಂತೆ ತನ್ನ ವಿಷಯದಲ್ಲಿ ಪ್ರೇಮಯುಕ್ತರಾಗಿ, ತನ್ನ ಅನುಭವದ ಹೊರತಾಗಿ ಕ್ಷಣಕಾಲವೂ ಇರಲಾರದೆ, ತನ್ನನ್ನು ಕಾಣಲು ಹಾತೊರೆಯುವ ಸಾಧು ಜನಗಳನ್ನು ತನ್ನ ಚೇಷ್ಟಿತ, ಅವಲೋಕನ, ಆಲಾಪನ, ಮುಂತಾದವುಗಳಿಂದ ರಕ್ಷಿಸುವುದು; ತದ್ವಿರೋಧಿಗಳಾದ ದುಷ್ಕೃತಿಗಳನ್ನು ನಾಶ ಮಾಡುವುದು; ತನ್ನ ಆರಾಧನ ರೂಪವಾಗಿರುವ, ಕ್ಷೀಣಿಸಿರುವ ವೈದಿಕ ಧರ್ಮಗಳನ್ನು ಆರಾಧ್ಯನಾದ ತನ್ನ ಸ್ವರೂಪವನ್ನು ತೋರಿಸಿ ಸ್ಥಾಪಿಸುವುದು; ಎಂಬ ಈ ಮೂರೇ ಅವತಾರದ ಫಲಗಳಾಗಿವೆ. 'ಸಾಧವಃ ಉಕ್ತ ಲಕ್ಷಣ ಧರ್ಮಶೀಲಾಃ ವೈಷ್ಣವಾಗ್ರೇಸರಾಃ ಮತ್ಸಮಾಶ್ರಯಣೇ ಪ್ರವೃತ್ತಾಃ ಮನ್ನಾಮ ಕರ್ಮಸ್ವರೂಪಾಣಾಂ ವಾಙ್ಮನಸಾಗೋಚರತಯಾ ಮದ್ದರ್ಶನೇನ ವಿನಾ ಆತ್ಮಧಾರಣ ಪೋಷಣಾದಿಕಮಲಭಮಾನಾಃ, ಕ್ಷಣಮಾತ್ರ ಕಾಲಂ ಕಲ್ಪಸಹಸ್ರಂಮನ್ವಾನಾಃ ಪ್ರಶಿಥಿಲ ಸರ್ವಗಾತ್ರಾ ಭವೇಯಪರಿತಿ ಮತ್ಸ್ವರೂಪ ಚೇಷ್ಟಿತಾವಲೋಕನಾಲಾಪನಾದಿ ದಾನೇನ ತೇಷಾಂ ಪರಿತ್ರಾಣಾಯ; ತದ್ವಿಪರೀತಾನಾಂ ವಿನಾಶಾಯ ಚ; ಕ್ಷೀಣಸ್ಯ, ವೈದಿಕ ಧರ್ಮಸ್ಯಮದಾರಾಧನ ರೂಪಸ್ಯ ಆರಾಧ್ಯಸ್ವರೂಪ ದರ್ಶನೇನ ಸ್ಥಾಪನಾಯ ಚ, ಯುಗೇ ಯುಗೇ ಸಂಭವಾಮಿ- ಕೃತತ್ರೇತಾದಿಯುಗವಿಶೇಷ ನಿಯಮೋಪಿ ನಾಸ್ತಿ ಇತ್ಯರ್ಥಃ' [2] (ನನ್ನ ಅವತಾರಕ್ಕೆ ಕೃತ, ತ್ರೇತಾಯುಗ ಎಂಬ ನಿಯಮವೂ ಬೇಕಿಲ್ಲ.) ಎಂದು ಈ ಶ್ಲೋಕಕ್ಕೆ ಭಾಷ್ಯಕಾರರಾದ ಶ್ರೀ ರಾಮಾನುಜರೂ ಭಾಷ್ಯವನ್ನು ಅನುಗ್ರಹಿಸಿದ್ದಾರೆ.

ಯೇಭಕ್ತಾ ಭವದೇಕ ಭೋಗ ಮನಸೋऽ ನನ್ಮಾತ್ಮ ಸಂಜೀವನಾಸ್ತತ್ಸಂಶ್ಲೇಷಣ ತದ್ವಿರೋಧಿ ನಿಧನಾದ್ಯರ್ಥಂ ವನಾದ್ರೀಶ್ವರ। ಮಧ್ಯೇಣ್ದಂ ಯದವಾತರಸ್ಸುರನರಾದ್ಯಾಕಾರ ದಿವ್ಯಾಕೃತಿ ಸ್ತೇನೈವ ತ್ರಿದಶೈರ್ನ್ಯರೆಕ್ಷ್ಯ ಸುಕರಂ ಸ್ವಪ್ರಾರ್ಥಿತ ಪ್ರಾರ್ಥನಮ್॥ [3] ಎಂದು ಆಳ್ವಾನ್ ಸ್ತುತಿಸಿದ್ದಾರೆ.

**ಸೂ. 56 ಪಲಪ್ರಮಾಣಂಗಳಿಲುಂ, ಭೃಗುಶಾಪಾದಿಗಳಾಲೇ ಪಿರನ್ದಾನ್ ಎನ್ಗೈಯಾಲೇ, ಅವತಾರಂಗಳುಕ್ಕು ಹೇತು ಕರ್ಮಮಾಕವೇಂಡಾವೋ ಎನ್ನಿಲ್;**

'ಅವತಾರಗಳು ಸ್ವೇಚ್ಛೆಯಿಂದ ಎಂದರಿಯದೆ ಕರ್ಮನಿಬಂಧನವಾದದ್ದು '- ಎನ್ನುವವರ ಪ್ರಶ್ನೆಯನ್ನು ಈ ಸೂತ್ರದಲ್ಲಿ ಅನುವದಿಸಲಾಗಿದೆ. ಇತಿಹಾಸ ಪುರಾಣ ರೂಪವಾದ ಹಲವಾರು ಪ್ರಮಾಣ ಗ್ರಂಥಗಳಲ್ಲಿ

**ಪತಿವ್ರತಾ ಧರ್ಮ ಪರಾಹತಾಯೇನ ಮಮಪ್ರಿಯಾ।**

**ಸತುಪ್ರಿಯಾವಿರಹಿತಶ್ಚಿರ ಕಾಲಂಭವಿಷ್ಯತಿ।**[1]

ಎಂಬಂತೆ ಭೃಗುಶಾಪ ಮೊದಲಾದವುಗಳಿಂದ ಹುಟ್ಟಿದ್ದಾಗಿ ಹೇಳಲ್ಪಡುವುದರಿಂದ ಅವತಾರಗಳು ಇಚ್ಛೆಯಿಂದಲ್ಲದೆ ಕರ್ಮಗಳಿಂದ ಏರ್ಪಟ್ಟದ್ದು ಎಂದಾಗುವುದಿಲ್ಲವೇ; ಎಂದರೆ

**ಸೂ. 57 ಅವೈತನ್ನಿಲೇ ಶಾಪವ್ಯಾಜಮ್, ಅವತಾರ ಮೈಚ್ಛಮೆನ್ರು ಪರಿಹರಿತ್ತದು.**

**ತಪಸಾರಾಧಿತೋ ದೇವ್ಯೋಹ್ಯ ಬ್ರವೀದ್ಭಕ್ತವತ್ಸಲಃ।**

**ಲೋಕಾನಾಸಂ ಪ್ರಿಯಾರ್ಥಂ ತು ಶಾಪಂ ತಂ ಗೃಹ್ಯಮುಕ್ತವಾನ್।**[1]

ಎಂದು ಉತ್ತರರಾಮಾಯಣದಲ್ಲೂ

**ಸರ್ವಾವತೇಷು ವೈವಿಷ್ಣೋರ್ಜನನಂ ಸ್ವೇಚ್ಛಯೈವತು।**

**ಜರಕಾಸ್ತ್ರಚ್ಛಲೇನೈವ ಸ್ವೇಚ್ಛಯಾ ಗಮನಂ ಹರೇಃ।**

**ದ್ವಿಜಶಾಪಚ್ಛಲೇನೈವಮವತೀರ್ಣೋऽಪಿ ಲೀಲಯಾ।**[2]

ಎಂದು ಲೈಂಗಪುರಾಣಾದಿಗಳಲ್ಲೂ ಹೇಳಲ್ಪಟ್ಟಿರುವುದರಿಂದ, ಭೃಗುಶಾಪಾದಿಗಳಿಂದ ಅವತರಿಸಿದನೆಂಬಲ್ಲಿ 'ಶಾಪವು ವ್ಯಾಜ ಮಾತ್ರ - ಅಂದರೆ ನೆಪ ಮಾತ್ರ. ಅವತಾರವು ತನ್ನ ಇಚ್ಛೆಯಿಂದಲೇ ಪರಿಗ್ರಹಿಸಿರುವುದು.' ಎಂದು ತಿಳಿಸಿ ಈ ಸಂಶಯವನ್ನು ಪರಿಹರಿಸಲಾಗಿದೆ.

**ಸೂ. 58 ಅಂತರ್ಯಾಮಿತ್ವಮಾವತು - ಅಂತಃಪ್ರವಿಶ್ಯನಿಯಂತಾವಾಯಿರುಕ್ಕೈ.**

ವಿಭವ ಪ್ರಕಾರಗಳನ್ನು ಪ್ರತಿಪಾದಿಸಿದನಂತರ ಅಂತರ್ಯಾಮಿತ್ವವನ್ನು ಉಪಪಾದಿಸುತ್ತಾರೆ.

**'ಯ ಆತ್ಮಾ ಅಂತರೋಯಮಯತಿ'; 'ಅಂತಃಪ್ರವಿಷ್ಟಾಶ್ಶಾಸ್ತಾ ಜನಾನಾಂ';**[1] 'ಶಾಸ್ತಾವಿಷ್ಣುರಶೇಷಸ್ಯ ಜಗತೋ **ಯೋ ಹೃದಿಸ್ಥಿತಃ;**[2] ಇತ್ಯಾದಿಗಳಲ್ಲಿ ಹೇಳಲ್ಪಡುವಂತೆ ಚೇತನರೊಳಗೆ ಪ್ರವೇಶಿಸಿ ಸಕಲ ಪ್ರವೃತ್ತಿಗಳಿಗೂ ನಿಯಂತಾ ಆಗಿರುವಿಕೆಯೇ ಅಂತರ್ಯಾಮಿತ್ವವಾಗಿದೆ.

**ಸೂ. 59 ಸ್ವರ್ಗನರಕ ಪ್ರವೇಶಾದಿ ಸರ್ವಾವಸ್ಥೆಗಳಿಲುಂ, ಸಕಲಚೇತನರ್ಕ್ಕುಂ ತುಣೈಯಾಯ್; ಅವರ್‌ಕಳೈವಿಡಾತೇ ನಿರ್ಕ್ಕಿರ ನಿಲೈಕ್ಕು ಮೇಲ್ ಶುಭಾಶ್ರಯಮಾನ ತಿರುಮೇನಿಯೋಡೇ ಕೂಡಿಕ್ಕೊಂಡು ಅವರ್‌ಗಳುಕ್ಕು ಧ್ಯೇಯನಾಗೈಕ್ಕಾಗವುಮ್, ಅವರ್‌ಗಳ್ಳೈ ರಕ್ಷಿಕ್ಕೈಕ್ಕಾಗವುಮ್, ಬಂಧುಭೂತನಾಯ್‌ಕ್ಕೊಂಡು ಹೃದಯಕಮಲತ್ತಿಲೇ ಎಳುಂದರುಳಿಯಿರುಕ್ಕುಮಿರುಪ್ಪು;**

ಆತ್ಮನೊಳಗೆ ತನ್ನ ಸ್ವರೂಪದಿಂದ ವ್ಯಾಪಿಸಿದ್ದು ನಿಯಮಿಸುವುದು; ದಿವ್ಯಮಂಗಳ ವಿಗ್ರಹಯುಕ್ತನಾಗಿ ಹೃದಯದಲ್ಲಿ ವ್ಯಾಪಿಸಿದ್ದು ನಿಯಮಿಸುವುದು; ಎಂಬುದಾಗಿ ಎರಡು ವಿಧವಾಗಿರುದರಿಂದ ಈ ಎರಡನ್ನು ಇಲ್ಲಿ ಉಪಪಾದಿಸುತ್ತಾರೆ.

**ಅಂತರ್ಯಾಮಿ ಸ್ವರೂಪಂ ಚ ಸರ್ವೇಷಾಂ ಬಂಧುವತ್ ಸ್ಥಿತಮ್।**[1] ಎಂದಾರಂಭಿಸಿ

**ಸ್ವರ್ಗನರಕ ಪ್ರವೇಶೇಽಪಿ ಬಂಧು ರಾತ್ಮಾಪಿ ಕೇಶವಃ**[2] ಎಂದೂ ಹೇಳಲ್ಪಟ್ಟಂತೆಯೇ ಪುಣ್ಯನಿಬಂಧನವಾಗಿ ಸ್ವರ್ಗವನ್ನು ಪ್ರವೇಶಿಸುವುದು, ಪಾಪ ನಿಬಂಧನವಾಗಿ ನರಕವನ್ನು ಪ್ರವೇಶಿಸುವುದು, ಉಭಯ ನಿಬಂಧನವಾಗಿ ಗರ್ಭವನ್ನು ಪ್ರವೇಶಿಸುವುದು ಮುಂತಾದ ಎಲ್ಲಾ ಅವಸ್ಥೆಗಳಲ್ಲೂ ಎಲ್ಲ ಚೇತನರಿಗೂ '**ಇರಾಮುಡಮೂಟ್ಟುವಾರ್ರೈ ಪ್ಪೋಲೇ ಉಳ್ಳೇ ಪದಿಕಿಡನ್ದು ಸತ್ತೆಯೇ ಪಿಡಿತ್ತು ನೋಕ್ಕಿಕ್ಕೊಂಡು ಪೋರುಂ**' - ರಾತ್ರಿಯಲ್ಲಿ ಉಣಿಸುವವರಂತೆ ಒಳಗೇ ಇದ್ದು ರಕ್ಷಿಸುವುದರಿಂದ - ಸಂಗಾತಿಯಾಗಿ ಚೇತನನ್ನುಯಾವ ಕಾಲಕ್ಕೂ ಬಿಡದೆ ಅಂತರಾತ್ಮಾವಾಗಿರುವ ಸ್ಥಿತಿ; ಇದಲ್ಲದೆ '**ಅಂಗುಷ್ಠ ಮಾತ್ರಃ ಪುರುಷೋಜ್ಯೋತಿರಿವಾಧೂಮಕಃ**' [3] ಎಂದೂ '**ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವಭಾಸ್ವರಾ**' -ಎಂಬಿತ್ಯಾದಿಗಳಲ್ಲಿ ಹೇಳಲ್ಪಡುವಂತೆ ಜ್ಯೋತಿರೂಪವಾಗಿ, ಶ್ಯಾಮಲವಾದ ತನ್ನನ್ನು ಮುಸುಕಿಟ್ಟಂತೆ , ಹೊಂಬಣ್ಣದ ಪ್ರಕಾಶದಿಂದ ಕಪ್ಪಾದ ಮೋಡವನ್ನು ಕಬಳಿಸಿದ ಮಿಂಚಿನಂತಿರುವುದರಿಂದಲೂ, ಬಾಹ್ಯ ವಿಷಯ ಪ್ರವಣವಾದ ಮನಸ್ಸನ್ನು ಅದರಿಂದ ಬಿಡಿಸಿ ತನ್ನ ವಿಷಯದಲ್ಲಿ ಪ್ರವಣವಾಗಿಸಿಕೊಳ್ಳುವಂತೆ ಶುಭಾಶ್ರಯವಾದ ವಿಗ್ರಹದಿಂದ ಆ ಚೇತನನಿಗೆ ಧ್ಯಾನದಲ್ಲಿ ರುಚಿ ಏರ್ಪಟ್ಟಾಗ ಧ್ಯೇಯನಾಗುವುದಕ್ಕಾಗಿಯೂ; ಬುದ್ಧ್ಯಾದಿಗಳಿಗೆ ನಿಯಾಮಕವಾಗಿ ಚೇತನರನ್ನು ರಕ್ಷಿಸುವುದಕ್ಕಾಗಿಯೂ, ನಾರಾಯಣ ಪ್ರಯುಕ್ತವಾದ ಕರುಳಿನ ಪ್ರೇಮದಿಂದ ಬಂಧುವಾಗಿದ್ದು '**ಪದ್ಮ ಕೋಶ ಪ್ರತೀಕಾಶಂ ಹೃದಯಂಚಾಪ್ಯಧೋಮುಖಮ್**'[4] ಎಂಬಂತೆ ಹೃದಯ ಕಮಲದಲ್ಲಿ ಬಿಜಯ ಮಾಡಿಸಿರುವಿಕೆಯೂ '**ಅಂತರ್ಯಾಮಿತ್ವ**' ಎನಿಸುತ್ತದೆ. ಅಂತರಾತ್ಮತ್ವೆಯನ್ನು ಮೊದಲು ತಿಳಿಸಿ ಅನಂತರ ಸವಿಗ್ರಹನಾಗಿದ್ದು ಹೃದಯ ಕಮಲದಲ್ಲಿ ರವುದನ್ನು ತಿಳಿಸಿದ್ದೇಕೆಂದರೆ ವಿಗ್ರಹಯೋಗ ಪ್ರಯುಕ್ತವಾದ ಪರತ್ವಾದಿಗಳನ್ನು ಹೇಳುವ ಪ್ರಕರಣವಾದ್ದರಿಂದ ಆಗಿದೆ.

**ಸೂ. 60 ಅರ್ಚಾವತಾರಮಾವತು – 'ತಮರುಕನ್ದತೆವ್ವುರುವುವವ್ವುರುವಮ್' ಎನ್ಗಿರ ಪಡಿಯೇ ಚೇತನರ್ಕಭಿಮತಮಾನ ದ್ರವ್ಯತ್ತಿಲೇ ವಿಭವವಿಶೇಷಂಗಳ್ ಪೋಲನ್ರಿಕ್ಕೇ, ದೇಶಕಾಲಾಧಿಕಾರಿ ನಿಯಮಮಿಲ್ಲಾತಪಡಿ ಸನ್ನಿಧಿ ಪಣ್ಣಿ, ಅಪರಾಧಂಗಳೈ ಕ್ಕಾಣಾಕ್ಕಣ್ಣಿಟ್ಟು, ಅರ್ಚಕ ಪರತಂತ್ರಮಾನ ಸಮಸ್ತವ್ಯಾಪಾರಂಗಳೈಯು ಮುಡೈಯನಾಯ್‌ಕ್ಕೊಣ್ಡು ಕೋಯಿಲ್‌ಗಳಿಲುಂ, ಗೃಹಂಗಳಿಲುಮ್ ಎಳುನ್ದರುಳಿನಿರ್ಕುಮ್ ನಿಲ್ಲೈ.**

ಅಂತರ್ಯಾಮಿತ್ವದ ನಂತರ ಅರ್ಚಾವತಾರವನ್ನು ಉಪಪಾದಿಸುತ್ತಾರೆ. '**ತಮರುಕನ್ದದೆವ್ವುರುವಮ್ ಅವ್ವುರುವನ್ದಾನೇ**'[1] 'ಆಶ್ರಿತರು ಯಾವುದನ್ನು ತನಗೆ ವಿಗ್ರಹವಾಗಿ ಭಾವಿಸುತ್ತಾರೋ, ಅದನ್ನೇ ತನಗೆ ಶರೀರವಾಗಿ ಸ್ವೀಕರಿಸುತ್ತಾನೆ'. ಎಂಬಂತೆ ಆಶ್ರಿತರಾದ ಚೇತನರಿಗೆ ಅಭಿಮತವಾದ ಬಂಗಾರ ಬೆಳ್ಳಿ, ಶಿಲೆ, ಪರ್ಯಂತವಾದ ಯಾವುದಾದರೊಂದು ದ್ರವ್ಯದಲ್ಲಿ, ಆಯೋಧ್ಯಾ ಮಧುರಾದಿ ದೇಶ ನಿಯಮವುಳ್ಳವನಾಗಿ, ಹನ್ನೊಂದು ಸಾವಿರ ಸಂವತ್ಸರ, ನೂರು ಸಂವತ್ಸರ ಎಂಬಂತಹ ಕಾಲನಿಯಮವುಳ್ಳವನಾಗಿ ದಶರಥ ವಸುದೇವಾದಿಗಳೆಂಬಂತೆ ಕೆಲವು

ಅಧಿಕಾರಿ ನಿಯಮಗಳಿಗೆ ಒಳಪಟ್ಟು ಮಾಡಿದ ರಾಮ ಕೃಷ್ಣಾದಿ ಅವತಾರಗಳಂತಲ್ಲದೆ '**ಭೌಮನಿಕೇತನೇಷ್ವಪಿ ಕುಟೀ ಕುಂಜೇಷು**' ಎಂಬಂತೆ ಒಂದು ದೇಶ ನಿಯಮವಿಲ್ಲದೆ, ಅರ್ಚಕರ ಅಪೇಕ್ಷಾಕಾಲದ ಹೊರತಾಗಿ ತನಗೊಂದು ಕಾಲ ನಿಯಮವಿಲ್ಲದಂತೆ ರುಚಿವುಳ್ಳವರೆಲ್ಲರಿಗಾದ್ದರಿಂದ ಇಂತಹವನೊಬ್ಬನೆಂಬ ಅಧಿಕಾರಿ ನಿಯಮವಿಲ್ಲದೆ ಸಾನಿಧ್ಯ ಮಾಡಿ '**ಸರ್ವಸಹಿಷ್ಣುಃ**' ಎಂಬಂತೆ ; ಎಲ್ಲವನ್ನೂ ಸಹಿಸಿಕೊಳ್ಳುವನಾದ್ದರಿಂದ ಅವರ ಅಪರಾಧಗಳನ್ನು ಕಂಡೂ ಕಾಣದಂತೆ '**ಅರ್ಚಕಪರಾಧೀನ ಅಖಿಲಾತ್ಮ ಸ್ಥಿತಿಃ**'[2] ಎಂಬಂತೆ ಅರ್ಚಕ ಪರತಂತ್ರವಾದ ಸ್ನಾನ ಭೋಜನಾದಿಗಳಾದ ಸಕಲ ವ್ಯಾಪಾರಗಳನ್ನುಳವನಾಗಿ ಬಿಜಯಮಾಡಿಸಿರುವಿಕೆಯನ್ನು '**ಅರ್ಚಾವತಾರ**' ಎನ್ನಲಾಗಿದೆ. '**ಅರ್ಚಾಪೂಜಾಪ್ರತಿಮಯೋಃ**' ಎಂಬುದರಿಂದ 'ಅರ್ಚಾ' ಶಬ್ದವು 'ಪ್ರತಿಮೆ' ಎಂಬುದನ್ನು ತಿಳಿಸುತ್ತದೆ.

## ಸೂ. 61 ರುಚಿ ಜನಕತ್ವಮುಮ್, ಶುಭಾಶ್ರಯತ್ವಮುಮ್, ಅಶೇಷ ಲೋಕ ಶರಣ್ಯತ್ವಮುಮ್, ಅನುಭಾವ್ಯತ್ವಮುಮ್ ಎಲ್ಲಾಮ್ ಅರ್ಚಾವತಾರತ್ತಿಲೇ ಪರಿಪೂರ್ಣಮ್.

ಈ ಅರ್ಚಾವತಾರದ ರುಚಿಜನಕತ್ವಾದಿ ಗುಣಪೂರ್ತಿಯನ್ನು ಈ ಸೂತ್ರದಲ್ಲಿ ನಿರೂಪಿಸುತ್ತಾರೆ. ಶಾಸ್ತ್ರಗಳಿಂದ ನೇರ್ಪಡಿಸಲಾಗದಂತೆ ವಿಷಯಾಂತರಗಳಲ್ಲಿ ಮುಳುಗಿ ಭಗವದ್ವಿಷಯ ವಿಮುಖರಾಗಿರುವ ಚೇತನರಿಗೆ ತನ್ನ ರೂಪ ಔದಾರ್ಯ ಗುಣಗಳಿಂದ ವಿಮುಖತೆಯನ್ನು ನೀಗಿ, ತನ್ನ ವಿಷಯದಲ್ಲಿ ರುಚಿಯನ್ನುಂಟುಮಾಡುವುದೂ, ರುಚಿಯೇರ್ಪಟ್ಟ ನಂತರ ತನ್ನನ್ನು ಭಜಿಸುವವರಿಗೆ ಕಣ್ಣಿಗೂ, ಮನಸ್ಸಿಗೂ ಸವಿಯಾಗುವಂತೆ ಶುಭಾಶ್ರಯವಾಗಿರುವಿಕೆಯೂ(ಸುಂದರ ರೂಪವುಳ್ಳವನಾಗಿರುವಿಕೆಯೂ) ಇಷ್ಟೇ ಅಲ್ಲದೆ ತನ್ನನ್ನೇ ಉಪಾಯವಾಗಿ ಸ್ವೀಕರಿಸುವಾಗ ಗುಣಾಗುಣ ನಿರೂಪಣೆ ಮಾಡದೆ, ಸಕಲ ಲೋಕಗಳಲ್ಲಿರುವವರಿಗೂ ಶರಣವರಣಾರ್ಹ ನಾಗಿರುವಿಕೆಯೂ, ಕೇವಲ ಉಪಾಯಮಾತ್ರವಾಗಿ ಒಂದು ದೇಶ ವಿಶೇಷದಲ್ಲಿ ಹೋಗಿ ಅನುಭವಿಸುವಂತೆ ಮಾತ್ರ ಇರದೆ, ತನ್ನ ವಿಲಕ್ಷಣತೆಯನ್ನು ಅರಿತವರಿಗೆ 'ಎನ್ನಮುದಿನೈಕ್ಕಣ್ಣಕಣ್ಗಳ್ ಮತ್ತೊನ್ರಿನೈಕ್ಕಾಣಾವೇ'[1]- 'ನನ್ನ ಅಮೃತವನ್ನು ಕಂಡ ಕಣ್ಗಳು ಮತ್ತೇನನ್ನೂ ಕಾಣದು' ಎಂಬಂತೆ ಅನುಭಾವ್ಯನಾಗಿರುವಿಕೆ, ಇವೆಲ್ಲವೂ ಅರ್ಚಾವತಾರದಲ್ಲಿ ಪರಿಪೂರ್ಣವಾಗಿದೆ.

ಸುರೂಪಾಂ ಪ್ರತಿಮಾಂ ವಿಷ್ಣೋಃ ಪ್ರಸನ್ನವದನೇಕ್ಷಣಾಂ।
ಕೃತ್ವಾಽಽತ್ಮನಃ ಪ್ರೀತಿಕರೀಂ ಸುವರ್ಣ ರಜತಾದಿಭಿಃ।
ತಾಮರ್ಚಯೇತ್ತಾಂ ಪ್ರಣಮೇತ್ತಾಂ ಭಜೇತ್ತಾಂ ವಿಚಿಂತಯೇತ್।
ವಿಶತ್ಯ ಪಾಸ್ತದೋಷಸ್ತು ತಾಮೇವ ಬ್ರಹ್ಮರೂಪಿಣೀಮ್[2]

ಎಂದು ಈ ಅರ್ಚಾವತಾರದಲ್ಲಿ ಆಶ್ರಿತರು ಇಚ್ಛಿಸಿದ ಒಂದು ದ್ರವ್ಯವನ್ನು ತನಗೆ ಶರೀರವಾಗಿ ಅಂಗೀಕರಿಸಿ ಅವರಿಗೆ ಉಪಾಸ್ಯವಾಗಿ, ಪ್ರಾಪ್ಯನೂ ಆಗಿದ್ದಾನೆಂಬುದನ್ನು ಶ್ರೀ ಶೌನಕ ಭಗವಾನರೂ ತಿಳಿಸಿದ್ದಾರೆ.

## ಸೂ. 62 ಸ್ವ ಸ್ವಾಮಿ ಭಾವತ್ತೈಮಾರಾಡಿಕ್ಕೊಣ್ಡು, ಅಜ್ಞರೈ ಪ್ಪೋಲೇಯುಮ್, ಅಶಕ್ತರೈ ಪ್ಪೋಲೇಯುಮ್, ಅಸ್ವತಂತ್ರರೈ ಪ್ಪೋಲೇಯುಮ್ ಇರುಕ್ಕಚ್ಚೆತೇಯುಮ್, ಅಪಾರ ಕಾರುಣ್ಯ ಪರವಶನಾಯ್‌ಕ್ಕೊಣ್ಡು ಸರ್ವಾಪೇಕ್ಷಿತಂಗಳೈಯುಮ್ ಕೊಡುತ್ತರುಳಮ್.

ಈ ಅರ್ಚಾವತಾರದ ಗುಣಾಧಿಕ್ಯವನ್ನು ಈ ಸೂತ್ರದಿಂದ ಪ್ರತಿಪಾದಿಸಿ ತಮ್ಮ ಗ್ರಂಥವನ್ನು ಪೂರ್ಣಗೊಳಿಸುತ್ತಾರೆ.

**'ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿಸ್ಥಿತಮ್'**[1] ಎಂಬಂತೆ ಚೇತನನಿಗೆ ಸ್ವತ್ವವೂ, ತನಗೆ ಸ್ವಾಮಿತ್ವವೂ ವ್ಯವಸ್ಥಿತವಾಗಿರುವಾಗ, ಚೇತನನು ತನ್ನ ವಸ್ತುಗಳೊಡನೆ ಪರಮಾತ್ಮನಾದ ತನ್ನನ್ನೂ ಸೇರಿಸಿಕೊಳ್ಳುವಂತೆ ಸ್ವಾಮಿತ್ವವನ್ನು ಚೇತನನಲ್ಲೂ, ಸ್ವತ್ವವನ್ನು ತನ್ನ ವಿಷಯದಲ್ಲೂ ತನ್ನಿಚ್ಛೆಯಿಂದಲೇ ಬದಲು ಮಾಡಿಕೊಂಡು **'ಯಸ್ಸರ್ವಜ್ಞಃ ಯಃ ಸರ್ವವಿತ್'; 'ಪರಾಸ್ಯ ಶಕ್ತಿಃ ವಿವಿಧೈವಶ್ರೂಯತೇ','ನತಸ್ಯೇಶೇಕಶ್ಚನ'**[2] ಎಂದೂ **'ಸರ್ವೇಶ್ವರಃ ಸರ್ವದೃಕ್ ಸರ್ವವೇತ್ತಾ ಸಮಸ್ತ ಶಕ್ತಿಃ ಪರಮೇಶ್ವರಾಖ್ಯಃ'**[3] ಎಂದೂ ಹೇಳಲ್ಪಡುವಂತೆ ಸರ್ವಜ್ಞನಾಗಿ, ಸರ್ವಶಕ್ತನಾಗಿ ನಿರಂಕುಶ ಸ್ವತಂತ್ರನಾಗಿರುವ ತನ್ನನ್ನು ಅನುವುಮಾಡಿಕೊಂಡು, ತನ್ನ ಕಾರ್ಯವನ್ನೂ ಪರರ ಕಾರ್ಯವನ್ನೂ ಅರಿಯಲಾಗದ ಅಜ್ಞರಂತೆಯೂ, ತನ್ನನ್ನು ತಾನು ರಕ್ಷಿಸಿಕೊಳ್ಳಲಾಗದ ಅಶಕ್ತರಂತೆಯೂ, ತನಗೇನೂ ಸ್ವಾತಂತ್ರ್ಯವಿಲ್ಲದ ಅಸ್ವತಂತ್ರನಂತೆಯೂ, ಇದ್ದುಕ್ಕೊಂಡೇ ವಿಮುಖರನ್ನೂ ಬಿಡಲಾಗದಂತಹ ಮೇರೆ ಮೀರಿ ಹರಿಯುವ ಕಾರುಣ್ಯಕ್ಕೆ ವಶನಾಗಿ ನೇತ್ರ, ಪುತ್ರ ವಿತರಣದಿಂದಾರಂಭಿಸಿ ಮೋಕ್ಷ ದಾನದವರೆಗೂ ಯಥಾಧಿಕಾರ ಚೇತನರ ಅಪೇಕ್ಷಿತಗಳನ್ನು ನೀಡಿ ಅನುಗ್ರಹಿಸುವವನು ಎನ್ನುತ್ತಾರೆ.

**ಅರ್ಚಾವತಾರ ಸ್ಸರ್ವೇಷಾಂ ಬಾಂಧವೋ ಭಕ್ತವತ್ಸಲಃ।**
**ಸ್ವತ್ವ ಮಾತ್ಮನಿ ಸಂಜಾತಂ ಸ್ವಾಮಿತ್ವಂ ಮಯಿ ಚ ಸ್ಥಿತಮ್।**[4]

ಎಂಬಂತೆ ಅರ್ಚಾವತಾರವು ಸರ್ವರಿಗೂ ಬಂಧುವಾಗಿ, ಭಕ್ತವತ್ಸಲವಾಗಿಯೂ ಇರುವುದು. 'ಸ್ವತ್ವ'ವೆಂದರದು ಆತ್ಮನ ವಿಷಯದಲ್ಲೂ 'ಸ್ವಾಮಿತ್ವವು' -ತನ್ನ (ಪರಮಾತ್ಮನ) ವಿಷಯದಲ್ಲೂ ವ್ಯವಸ್ಥಿತವಾಗಿರುತ್ತದೆ.

**ಇತಿ ವ್ಯವಸ್ಥಿತೇ ಚಾಪಿ ಮಮಾಯಂ ಕೇಶವಸ್ತ್ವಿತಿ।**
**ಮಮಾಯಂ ರಾಮ ಇತ್ಯೇವ ದೇವಃ ಪರಶುಲಾಂಛನಃ।** [5]

ಎಂಬಂತೆ ಹೀಗೆ ಶೇಷಿತ್ವ (ಸ್ವಾಮಿತ್ವ) ವ್ಯವಸ್ಥಿತವಾಗಿದ್ದರೂ ಕೂಡ, ನನ್ನ ಕೇಶವನೆಂದೂ, ಕೊಡಲಿಯನ್ನು ಚಿಹ್ನೆಯಾಗುಳ್ಳ ದೇವನಾದ ರಾಮ ನನ್ನವನೆಂದೂ; **'ಮಮಾಯಂ ವಾಮನೋ ನಾಮ ನಾರಸಿಂಹಕೃತಿಃಪ್ರಭುಃ। ವರಾಹ ವೇಷೋಭಗವನ್ನರೋ ನಾರಾಯಣಸ್ತಥಾ।'** [6] 'ನನ್ನವನು ಈ ವಾಮನಾದವನು'; 'ನನ್ನವನು ಪ್ರಭುವಾದ ನರಸಿಂಹರೂಪಿಯಾದವನು'; 'ವರಾಹ ವೇಷವುಳ್ಳವನು, ಹಾಗೆಯೇ ನಾರಾಯಣ' ನೆಂದೂ

**ತಥಾಕೃಷ್ಣಶ್ಚರಾಮಶ್ಚ ಮಮಾಯಮಿತಿನಿರ್ದಿಶೇತ್।**
**ಮದ್ಗ್ರಾಮವಾಸೀ ಭಗವಾನ್ಮಮೈವೇತಿ ಚ ಧೀರ್ಭವೇತ್।**[7]

ಎಂಬಂತೆ ಕೃಷ್ಣನೂ ರಾಮನೂ ನನ್ನವನೆಂದೂ ಹೃದಯ ಹೇಳಬಹುದು ; ಹಾಗೆಯೇ ನನ್ನಗ್ರಾಮದಲ್ಲಿರುವ ದೇವನು ನನ್ನವನೆಂಬ ಮಮತ್ವ ಬುದ್ಧಿ ಏರ್ಪಡುತ್ತದೆ.

**ಚಿಂತಯೇತ್ ಜಗನ್ನಾಥಂ ಸ್ವಾಮಿನಂ ಪರಮಾರ್ಥತಃ।**
**ಅಶಕ್ತಂ ಅಸ್ವತಂತ್ರಂ ಚ ರಕ್ಷ್ಯಂ ಚಾಪಿ ಜನಾರ್ದನಂ।**

ಎಂದು ಪರಮಾರ್ಥದಿಂದ ಜಗತ್ತಿಗೇ ಸ್ವಾಮಿಯಾದ ಜನಾರ್ದನನ್ನು ಅಶಕ್ತನಾಗಿಯೂ, ಅಸ್ವತಂತ್ರನಾಗಿಯೂ, ರಕ್ಷ್ಯನಾಗಿಯೂ, ಭಾವಿಸಬಹುದು.

**ತದಿಚ್ಛಯಾ ಮಹಾತೇಜಾ ಭುಂಕ್ತೇ ವೈ ಭಕ್ತವತ್ಸಲಃ।**
**ಸ್ನಾನಂ ಪಾನಂ ತಥಾಯಾತ್ರಾಂ ಕುರುತೇ ವೈ ಜಗತ್ಪತಿಃ।**[8]

ಎಂಬಂತೆ ಅಪಾರವಾದ ತೇಜಸ್ಸುಳ್ಳ ಜಗತ್ಪತ್ತಿಯಾದವನು, ಭಕ್ತನಲ್ಲಿ ಪರಮವತ್ಸಲನಾಗಿ ಅವನು ಇಚ್ಛಿಸಿದಾಗಲೆಲ್ಲಾ ಭುಜಿಸಿ, ಸ್ನಾನ ಪಾನಾದಿಗಳನ್ನು ಮಾಡುವವನಾಗಿರುತ್ತಾನೆಂದೂ;

**ಸ್ವತಂತ್ರಸ್ಸ ಜಗನ್ನಾಥೋಽ ಪ್ಯಸ್ವತಂತ್ರೋ ಯಥಾತಥಾ।**

**ಸರ್ವಶಕ್ತಿರ್ಜಗದ್ಧಾತಾಽಪ್ಯಶಕ್ತಿ ಇವ ಚೇಷ್ಟತೇ।**[9]

ಎಂಬಂತೆ ಸ್ವತಂತ್ರನಾಗಿ ಜಗತ್ತಿಗೆ ಒಡೆಯನಾಗಿದ್ದರೂ ಕೂಡ, ಅಸ್ವತಂತ್ರನಂತೆಯೂ, ಸರ್ವಶಕ್ತಿಯಾಗಿ ಜಗತ್ತನ್ನು ಸೃಷ್ಟಿಸುವವನಾಗಿದ್ದರೂ ಅಶಕ್ತನಂತೆಯೂ ಇರುತ್ತಾನೆ.

**ಸರ್ವಾನ್‌ಕಾಮಾನ್‌ದದತ್ಸ್ವಾಮ್ಯಪ್ಯಶಕ್ತ ಇವಲಕ್ಷ್ಯತೇ।**

**ಅಪರಾಧಾನಭಿಜ್ಞ ಸ್ಸನ್ ಸದೈವಕುರುತೇ ದಯಾಮ್।**[10]

ಎಂಬಂತೆ ಎಲ್ಲಾ ಕಾಮನೆಗಳನ್ನು ನೀಡುವವನಾಗಿದ್ದರೂ, ಸ್ವಾಮಿಯಾಗಿದ್ದರೂ ಅಶಕ್ತನಂತೆ ತೋರ್ಪಡಿಸಿಕೊಳ್ಳುತ್ತಾನೆ. ಭಕ್ತರ ಅಪರಾಧಗಳನ್ನು ಅರಿಯದವನಂತೆ ಯಾವಾಗಲೂ ದಯೆಯನ್ನೇ ತೋರುತ್ತಾನೆ.

**ಅರ್ಚಾವತಾರ ವಿಷಯೇ ಮಾಯಾಽ ಪ್ಯುದ್ದೇಶ ತಸ್ತ ಥಾ।**

**ಉಕ್ತಾಗುಣಾನಶಕ್ಯನ್ತೇ ವಕ್ತುಂ ವರ್ಷಶತೈರಪಿ।**[11]

ಎಂಬಂತೆ ಅರ್ಚಾವತಾರ ವಿಷಯದಲ್ಲಿ ನನ್ನಿಂದಲ್ಲೂ ಸಂಗ್ರಹವಾಗಿ ಹೀಗೆ ಹೇಳಲ್ಪಟ್ಟಿದೆ. ಈ ಅರ್ಚಾವತಾರದ ವೈಶಿಷ್ಟ್ಯವನ್ನು ನೂರು ವರ್ಷಗಳಲ್ಲೂ ಹೇಳಲು ಸಾಧ್ಯವಿಲ್ಲ **'ಋತೇಚ ಮತ್ಪ್ರಸಾದಾದ್ವಾ ಸ್ವತೋಜ್ಞಾನಾಗಮೇನ ವಾ।'**[12] ಎಂದು ನನ್ನ ಕೃಪೆಯಿಲ್ಲದಿದ್ದರೂ, ಸ್ವತಸ್ಸಿದ್ಧವಾದ ಜ್ಞಾನವಿಲ್ಲವಾದಾಗಲೂ ಹೇಳಲು ಸಾಧ್ಯವಿಲ್ಲವೆಂದೂ

**ಏವಂ ಪಂಚ ಪ್ರಕಾರೋಽಹ ಮಾತ್ಮನಾಂ ಪತತಾಮಧಃ।**

**ಪೂರ್ವ ಸ್ಮಾದಪಿ ಪೂರ್ವಸ್ಮಾಜ್ಜ್ಯಾಯಾಂ ಶ್ಚೈವೋತ್ತರೋತ್ತರಃ।**[13]

ಎಂದು ಹೀಗೆ ಪರವ್ಯೂಹಾದಿ ಪಂಚಪ್ರಕಾರನಾದವನು ಅಧಃಪತನ ಹೊಂದುವ ಆತ್ಮಗಳಿಗೆ ಹಿಂದು ಹಿಂದಿನ ಪ್ರಕಾರಗಳಿಗಿಂತ ಮುಂದು ಮುಂದಿನ ಪ್ರಕಾರಗಳಲ್ಲಿ ಸೌಲಭ್ಯದಿಂದ ಶ್ರೇಷ್ಠನಾಗಿರುತ್ತಾನೆಂದೂ,

**ಸೌಲಭ್ಯತೋ ಜಗತ್ಸ್ವಾಮಿ ಸುಲಭೋಹ್ಯುರೋತ್ತರಃ।**[14]

ಎಂದು ಜಗತ್ಸ್ವಾಮಿಯಾದ ನಾನು ಸೌಲಭ್ಯದಿಂದ ಮೇಲೇ ಮೇಲೇ ಸುಲಭನಾಗಿರುವೆ ಎಂದೂ;

**ಸರ್ವಾತಿಶಾಯಿ ಷಾಡ್ಗುಣ್ಯಂ ಸಂಸ್ಥಿತಂ ಮಂತ್ರ ಬಿಂಬಯೋಃ।**

**ಮಂತ್ರೇವಾಚ್ಯಾತ್ಮನಾ ನಿತ್ಯಂ ಬಿಂಬೇತು ಕೃಪಯಾಸ್ಥಿತಮ್।**[15]

ಎಂದು ಸರ್ವವನ್ನು ಅತಿಶಯಿಸುವಂತಹ ಷಾಡ್ಗುಣ್ಯರೂಪವು ಮಂತ್ರ, ಬಿಂಬಗಳಲ್ಲಿ ಸ್ಥಿತವಾಗಿದೆ. ಮಂತ್ರದಲ್ಲಿ ವಾಚ್ಯಾತ್ಮನಾಗಿಯೂ, ವಿಗ್ರಹದಲ್ಲಿ ಕೃಪೆಯಿಂದಲೂ ಇರುವವನೆಂದೂ, ಹೀಗೆ ಅರ್ಚಾವತಾರದ ಗುಣಾಧಿಕ್ಯವು ವಿಷ್ವಕ್ಸೇನ ಸಂಹಿತೆಯಲ್ಲಿ ಭಗವಂತನಿಂದಲೇ ವಿವರಿಸಲ್ಪಟ್ಟಿದೆ.

**ಆಸ್ತಾಂ ತೇ ಗುಣರಾಶಿವದ್ಗುಣ ಪರೀವಾಹಾತ್ಮನಾಂ ಜನ್ಮನಾಂ ಸಂಖ್ಯಾ ಭೌಮನಿಕೇತನೇಷ್ವಪಿ ಕುಟೀಕುಂಜೇಷು ರಂಗೇಶ್ವರ। ಅರ್ಚ್ಯಸ್ಸರ್ವ ಸಹಿಷ್ಣುಃ ಅರ್ಚಕ ಪರಾಧೀನಾಖಿಲಾತ್ಮ ಸ್ಥಿತಿಃ। ಪ್ರೀಣಿಷೇಹೃದಯಾಲುಭಿಃ ತವ ತತಶ್ಶೀಲಾಜ್ಜಡೀಭೂಯತೇ।** ಎಂದು ಅವತಾರವೈಭವಗಳನ್ನು ಕೊಂಡಾಡಿದ ನಂತರ ಅರ್ಚಾವತಾರ ವೈಭವವನ್ನು ಸಂಗ್ರಹವಾಗಿ ಒಂದು ಶ್ಲೋಕದಲ್ಲಿ ಶ್ರೀ ಪರಾಶರ ಭಟ್ಟರು ಹೃದಯಂಗಮಯವಾಗಿ ಚಿತ್ರಿಸಿದ್ದಾರೆ.

ಹೀಗೆ ಈಶ್ವರನ ಸ್ವರೂಪವೈಲಕ್ಷಣ್ಯವನ್ನೂ, ಸ್ವರೂಪವನ್ನು ವಿಶೇಷಗೊಳಿಸುವ ಗುಣ ವೈಲಕ್ಷಣ್ಯವನ್ನೂ, ಆ ಗುಣಗಳಿಂದ ಅವನು ನಡೆಸುವ ಸೃಷ್ಟ್ಯಾದಿ ವ್ಯಾಪಾರಗಳನ್ನೂ, ಹೀಗೆ ಜಗತ್ಕಾರಣಭೂತನಾದವನ ಸರ್ವ ಸಮಾಶ್ರಯಣೀತಯತ್ವವನ್ನೂ, ಅವನ ಸರ್ವ ಫಲಪ್ರದತ್ವವನ್ನೂ, ಜಗತ್ ಕಾರಣತ್ವಕ್ಕೆ ಉಪಯೋಗಿಯಾದ ವಿಲಕ್ಷಣ ವಿಗ್ರಹಯೋಗವನ್ನೂ, ಆ ವಿಗ್ರಹ ವೈಲಕ್ಷಣ್ಯಾನುರೂಪವಾದ ಲಕ್ಷ್ಮೀ ಭೂಮಿ ನೀಳಾನಾಯಕತ್ವವನ್ನೂ, ಆ ವಿಗ್ರಹ ಪ್ರಯುಕ್ತವಾದ ಪರತ್ವಾದಿ ಪಂಚ ಪ್ರಕಾರವನ್ನೂ ವಿವರಣಾತ್ಮಕವಾಗಿ ಅನುಗ್ರಹಿಸಿ ಈಶ್ವರತತ್ವವನ್ನು ನಿಗಮನ ಮಾಡುತ್ತಾರೆ.

**॥ ಈಶ್ವರ ಪ್ರಕರಣಂ ಸಂಪೂರ್ಣಂ ॥**

**॥ ತತ್ತ್ವತ್ರಯ ವ್ಯಾಖ್ಯಾನಂ ಸಂಪೂರ್ಣಮ್ ॥**

ಸರ್ವಜ್ಞ ಜಗದಾಚಾರ್ಯಕೃತ ತತ್ತ್ವತ್ರಯಸ್ಯ ಯಃ।
ವ್ಯಾಖ್ಯಾಮಾಖ್ಯನ್ನಮಸ್ತಸ್ಮೈ ಸೌಮ್ಯಜಾಮಾತೃಯೋಗೀನೇ।

। ಪಿಳ್ಳೈ ಲೋಕಾಚಾರ್ಯರ್ ತಿರುವಡಿಗಳೇ ಶರಣಮ್।

॥ಮಣವಾಳ ಮಾಮುನಿ ಜೀಯರ್ ತಿರುವಡಿಗಳೇ ಶರಣಮ್॥



# ಅನುಬಂಧಗಳು

## ತತ್ವತ್ರಯ ವ್ಯಾಖ್ಯಾನ ಅವತಾರಿಕೆ

1. ವಿಚಿತ್ರಾ ದೇಹ ಸಂಪತ್ತಿಃ .................... ಸಂಯುತ – (ವಿಷ್ಣು ತತ್ವ)
ಓ ಬ್ರಾಹ್ಮಣರೇ। ಭಗವಾನನಿಗೆ ದ್ರವ್ಯಗಳನ್ನೂ, ಆತ್ಮವನ್ನೂ ಸಮರ್ಪಿಸಲು ಕೈಕಾಲು ಮೊದಲಾದವುಗಳೊಡನೆ ಆಶ್ಚರ್ಯಕರವಾದ ಶರೀರ ರಚನೆಯು ಪೂರ್ವದಲ್ಲೇ ಯೋಜಿಸಲ್ಪಟ್ಟಿದೆ.

2. ಯೋನ್ಯಥಾ ................. ಆತ್ಮಾಪಹಾರಿಣಾ – (ಮಹಾಭಾರತ: ಉದ್ಯೋಗ ಪರ್ವ 41-34)
ಯಾವನು ಒಂದು ವಿಧವಾದ ಆತ್ಮನನ್ನು ಮತ್ತೊಂದು ವಿಧವಾಗಿ ತಿಳಿಯುತ್ತಾನೋ (ಶೇಷಭೂತನಾದ ಆತ್ಮನನ್ನು ಸ್ವತಂತ್ರನೆಂದು ಭಾವಿಸುತ್ತಾನೋ) ಅಂತಹ ಆತ್ಮಾಪಹಾರಿಯಿಂದ ಯಾವ ಪಾಪವು ತಾನೇ ಮಾಡಲ್ಪಡಲಿಲ್ಲ.

3. ಏವಂ ಸಂಸೃತಿ ............... ಕಾಪ್ಯುಪಜಾಯತೇ – (ಅಹಿರ್ಬುಧ್ನ್ಯ ಸಂಹಿತೆ-14)
ಈ ರೀತಿಯಾಗಿ ಸಂಸಾರ ಚಕ್ರದಲ್ಲಿ ದುಃಕೊಂಡೂ, ತನ್ನ ಕರ್ಮಗಳಿಂದಲೇ ಆವರಿಸಲ್ಪಟ್ಟು ದುಃಖದಿಂದ ವಿಚಲಿತನಾದ ಜೀವನ ವಿಷಯದಲ್ಲಿ ವಿಷ್ಣುವಿಗೆ ಯಾವುದೋ ಒಂದು ವಿಧವಾದ ದಯೆಯು ಏರ್ಪಡುತ್ತದೆ.

4. ಜಾಯಮಾನಂ ಹಿ ..................... ಮೋಕ್ಷಾರ್ಥ ಚಿಂತಕಃ – (ಮ.ಬಾ. ಮೋಕ್ಷ ಧರ್ಮ 349-72)
ಜನಿಸುತ್ತಿರುವ ಯಾವ ಪುರುಷನನ್ನೇ ಆಗಲಿ ಮಧುಸೂದನನು ಕಟಾಕ್ಷಿಸುತ್ತಾನೋ, ಅವನೇ ಸತ್ವಗುಣವನ್ನುಳ್ಳವನಾಗುತ್ತಾನೆ ಎಂದು ತಿಳಿಯತಕ್ಕದ್ದು. ಅವನೇ ಮೋಕ್ಷಪುರುಷಾರ್ಥವನ್ನು ಚಿಂತಿಸುವವನಾಗುತ್ತಾನೆ.

5. ಅನಂತ ಪಾರಂ ............. ವಿಘ್ನಃ
ಶಾಸ್ತ್ರಗಳೋ ಎಲ್ಲೆಯಿಲ್ಲದವುಗಳು. ಅರಿಯಬೇಕಾದದ್ದೋ ಅಪಾರ. ಕಾಲವೋ ಅಲ್ಪ . ಅಡಚಣೆಗಳೋ ಅನೇಕ.

# ಚಿತ್ ಪ್ರಕರಣ

## ಸೂತ್ರ - 1

1. ಪರೀಕ್ಷ್ಯಲೋಕಾನ್................ಶ್ರೋತ್ರಿಯಂ ಬ್ರಹ್ಮನಿಷ್ಠಮ್। – (ಮುಂಡಕೋಪನಿಷತ್1-2-12)

ವೇದಾಧ್ಯಯನ ಮಾಡಿದ ಬ್ರಾಹ್ಮಣನು ಕರ್ಮದಿಂದ ಸಂಪಾದಿಸಲ್ಪಟ್ಟ ಲೋಕಗಳನ್ನು ಮೀಮಾಂಸೆಗಳಿಂದ ಚೆನ್ನಾಗಿ ಅರಿತು, ನಿತ್ಯನಾದ ಪುರುಷನನ್ನು ಅನಿತ್ಯವಾದ ಕರ್ಮಗಳಿಂದ ಹೊಂದಲು ಸಾಧ್ಯವಿಲ್ಲವೆಂದು, ಆ ಪುರುಷನನ್ನು ಅರಿಯಲು ಶ್ರೋತ್ರಿಯನಾಗಿಯೂ, ಬ್ರಹ್ಮನಿಷ್ಠನಾಗಿಯೂ ಇರುವ ಆಚಾರ್ಯನನ್ನು ಸಮಿತ್ತನ್ನು ಕೈಯಲ್ಲಿ ಹಿಡಿದವನಾಗಿ ಹೋಗಿ ಆಶ್ರಯಿಸಬೇಕು.

2. ಪಶುರ್ಮನುಷ್ಯಃ ....................ಪರಮಂ ಪದಂ ।

ಪಶು, ಮನುಷ್ಯ, ಪಕ್ಷಿ ಯಾವುದಾದರೂ ಆಗಿರಲಿ ವೈಷ್ಣವನನ್ನು ಆಶ್ರಯಿಸಿದ್ದೇ ಆದರೆ ಆ ಸಂಬಂಧದಿಂದಲೇ ವಿಷ್ಣುವಿನ ಪರಮಪದವನ್ನು ಅವುಗಳು ಹೊಂದಿಬಿಡುತ್ತವೆ.

## ಸೂತ್ರ - 2

1. ಯಂ ಯಂ................ಪುನರ್ ಬಾಂಧವಾ ಜನಾಃ। – (ಮಹಾಭಾರತ ಅರಣ್ಯಪರ್ವ 16)

ಒಬ್ಬ ವೈಷ್ಣವನು ಯಾವುಯಾವುದನ್ನು ಕೈಗಳಿಂದ ಮುಟ್ಟುತ್ತಾನೋ, ಯಾವುಯಾವುದನ್ನು ಕಣ್ಣುಗಳಿಂದ ನೋಡುತ್ತಾನೋ ಅವುಗಳು ಸ್ಥಾವರಗಳಾಗಿದ್ದರೂ ಮೋಕ್ಷವನ್ನು ಹೊಂದುವಾಗ, ಇನ್ನು ಬಂಧುಗಳು ಮೋಕ್ಷ ಹೊಂದುತ್ತಾರೆಂಬುದನ್ನು ಹೇಳಬೇಕೆ?

2. ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ। – (ಶ್ವೇತಾಶ್ವತರ 1.12)

ಅನುಭವಿಸುವ ಚೇತನನ್ನೂ, ಅನುಭವಿಸಲ್ಪಡುವ ಅಚಿತ್ತನ್ನೂ, ಅನುಭವಿಸುವಂತೆ ಪ್ರೇರೇಪಿಸುವ ಈಶ್ವರನನ್ನೂ ತಿಳಿದು.

3. ತಮೇವಂ............... ನಾನ್ಯಃ ಪಂಥಾ ಅಯನಾಯ ವಿದ್ಯತೇ। – (ಪುರುಷ ಸೂಕ್ತಂ).

ಈ ರೀತಿಯಾದ ಪರಮಾತ್ಮನನ್ನು ಹೀಗೆ ಅರಿತುಕೊಂಡ ಜ್ಞಾನಿಯು ಈ ಲೋಕದಿಂದ ಮುಕ್ತನಾಗುತ್ತಾನೆ. ಮೋಕ್ಷವನ್ನು ಹೊಂದಲು ಬೇರಾವ ಮಾರ್ಗವೂ ಇಲ್ಲ.

4. ಪೃಥಗಾತ್ಮಾನಂ ............... ಜುಷ್ಟಸ್ತತಸ್ತೇನಾಮೃತತ್ವಮೇತಿ (ಶ್ವೇತಾಶ್ವತರ 1.6)

ಜೀವಾತ್ಮನನ್ನೂ ಪ್ರೇರೇಪಿಸುವ ಈಶ್ವರನನ್ನೂ ವಿಲಕ್ಷಣ ಸ್ವಭಾವವುಳ್ಳವರಾಗಿ ಯಥಾರ್ಥವಾಗಿ ಅರಿತು ಆ ಜ್ಞಾನದಿಂದ ಪ್ರೀತನಾದ ಪರಮಾತ್ಮನಿಂದ, ಪ್ರೀತಿಯಿಂದ ಅನುಗ್ರಹಿಸಲ್ಪಟ್ಟವನಾಗಿ ನಂತರ ಮೋಕ್ಷವನ್ನು ಹೊಂದುತ್ತಾನೆ.

5. ಕ್ಷರಮ್ ......................... ಕ್ಷರಾತ್ಮಾನಾವೀಶತೇ ದೇವ ಏಕಃ। – (ಶ್ವೇತಾಶ್ವತರ 1.10)

ಪ್ರಕೃತಿಯು ನಾಶಹೊಂದುವಂತಹುದಾದ್ದರಿಂದ 'ಕ್ಷರ' ವೆಂದು ಹೇಳಲ್ಪಡುತ್ತದೆ. (ಹರಃ) - ಜೀವನು ಮರಣಧರ್ಮವಿಲ್ಲದವನಾದ್ದರಿಂದ 'ಅಕ್ಷರ' ನೆಂದು ಹೇಳಲ್ಪಡುತ್ತಾನೆ. ಸರ್ವಶೇಷಿಯಾದ ಪರಮಾತ್ಮನೊಬ್ಬನೇ ಆ ಪ್ರಕೃತಿಯನ್ನೂ ಜೀವನನ್ನೂ ನಿಯಮಿಸುತ್ತಾನೆ.

## ಸೂತ್ರ - 3

1. **ಪ್ರಧಾನ .......... ಪತಿರ್ಗುಣೇಶಃ – (ಶ್ವೇತಾಶ್ವತರ 6.16)**
ಪ್ರಧಾನವೆಂಬ ಅಚೇತನಕ್ಕೂ, ಕ್ಷೇತ್ರಜ್ಞನೆಂಬ ಆತ್ಮನಿಗೂ, ಗುಣಗಳಿಗೂ ನಿಯಾಮಕವಾದವನು ಸರ್ವೇಶ್ವರನು

2. **ಅಶೇಷ ಚಿದಚಿದ್ವಸ್ತುಶೇಷಿಣೇ – (ವೇದಾರ್ಥಸಂಗ್ರಹ-1)**
ಎಲ್ಲಾ ವಿಧವಾದ ಚಿತ್‌ಗೂ ಅಚಿತ್‌ಗೂ ಸ್ವಾಮಿಯಾದವನಿಗೆ.

3. **ಚಿದಚಿದೀಶ್ವರ ತತ್ಸ್ವಭಾವ – (ಸ್ತೋತ್ರರತ್ನ-4)**
ಚಿತ್, ಅಚಿತ್, ಈಶ್ವರ ಇವುಗಳ ಸ್ವಭಾವವು

4. **ಆತ್ಮಾ ಶುದ್ಧೋಕ್ಷರಃ – (ಶ್ರೀವಿಷ್ಣು ಪುರಾಣ. 2-13-71)**
ಆತ್ಮಾ -ಜೀವನು ಶುದ್ಧನಾದವನು, ನಾಶವಿಲ್ಲದವನು.

5. **ಆತ್ಮಾ ಜ್ಞಾನಮಯೋಮಲಃ – (ಶ್ರೀ. ವಿ. ಪು - 6-7-26) .**
ಜೀವನು ಜ್ಞಾನಸ್ವರೂಪನೂ, ಪರಿಶುದ್ಧನೂ ಆಗಿದ್ದಾನೆ.

## ಸೂತ್ರ - 4

1 **ವಿಧಯಶ್ಚ ............... ಮನೋನುಸಾರಿಣಃ – (ಸ್ತೋತ್ರರತ್ನ -20)**
ಸ್ವತಂತ್ರವಾದ ಶಾಸ್ತ್ರಗಳ ವಿಧಿಗಳೂ ಕೂಡ ಪರಮಾತ್ಮನಾದ ನಿನ್ನನ್ನು ಆಶ್ರಯಿಸಿದವರ ಗಂಭೀರವಾದ ಮನಸ್ಸನ್ನು ಹಿಂಬಾಲಿಸುತ್ತದೆ.

## ಸೂತ್ರ - 7

1. **ಭೂತಾನಿ ಚ................ ಪ್ರಕೀರ್ತಿತಃ ॥ – (ಪಾದ್ಮೋತ್ತರ ಪುರಾಣಂ-226-25, 26)**
ಕವರ್ಗದಿಂದ ಪೃಥಿವ್ಯಾದಿ ಭೂತಗಳೂ, ಚ ವರ್ಗದಿಂದ ವಾಗಾದಿ ಕರ್ಮ ಇಂದ್ರಿಯಗಳೂ, ಟ ವರ್ಗದಿಂದ ಜ್ಞಾನೇಂದ್ರಿಯಗಳೂ, ತ ವರ್ಗದಿಂದ ಗಂಧಾದಿತನ್ಮಾತ್ರೆಗಳೂ, ಪ ಕಾರದಿಂದ ಮನಸ್ಸು , ಫ ಕಾರದಿಂದ ಅಹಂಕಾರವೂ, ಬ ಕಾರದಿಂದ ಮಹತ್ತೂ, ಭಕಾರದಿಂದ ಪ್ರಕೃತಿಯೂ ಹೇಳಲ್ಪಡುತ್ತದೆ. ಮಕಾರದಿಂದ ಆತ್ಮವು ಇಪ್ಪತ್ತೈದನೆಯ ತತ್ತ್ವವಾಗಿ ಹೇಳಲ್ಪಟ್ಟಿದೆ.

2. **ಯಃ। ................ ಅಭಿಧೀಯತೇ॥ – (ಮಹಾಭಾರತ ಅರಣ್ಯಪರ್ವ-175)**
ಇಪ್ಪತ್ತೈದನೆಯವನಾಗಿ ಯಾವ ಪುರುಷನು ಪ್ರಕೃತಿಗಿಂತಲೂ ಬೇರೆಯವನಾಗಿ ಹೇಳಲ್ಪಡುತ್ತಾನೋ, ಅವನೇ ಸರ್ವಭೂತಗಳಿಗೂ ಆತ್ಮಾ. ನರನೆಂದು ಹೇಳಲ್ಪಡುತ್ತಾನೆ.

3. **ಆತ್ಮಾ ಶುದ್ಧೋಕ್ಷರಃ ........................ ಏಕಸ್ಯಾಖಿಲ ಜಂತುಷು॥ – (ಶ್ರೀವಿಷ್ಣುಪುರಾಣ 2-13-67)**
ಆತ್ಮಾ ಪರಿಶುದ್ಧನು, ನಾಶವಿಲ್ಲದವನು, ಶಾಂತನು, ಸತ್ವಾದಿಗುಣರಹಿತನು, ಪ್ರಕೃತಿಗಿಂತ ಮೇಲಾದವನು, ಎಲ್ಲ ಜಂತುಗಳಲ್ಲೂ ಪೂರ್ಣನಾಗಿರುವ ಜೀವನಿಗೆ ಸಂಕೋಚ, ವಿಕಾಸ ಎಂಬುದಿಲ್ಲ.

4. ಪಿಂಡಃ .......................ರಾಜನ್ ಕರೋಮ್ಯಹಮ್ – (ಶ್ರೀ ವಿ. ಪು. 2-13-87)

ಎಲೈ ರಾಜನೇ ಯಾವ ಕಾರಣದಿಂದ ತಲೆ ಕೈಕಾಲು ಮೊದಲಾದ ಲಕ್ಷಣಗಳಿಂದ ಕೂಡಿದ ಶರೀರವು ಆತ್ಮನಿಗಿಂತ ಭಿನ್ನವಾಗಿರುವುದೋ ಆ ಕಾರಣದಿಂದ 'ನಾನು' ಎಂಬ ಸಂಜ್ಞೆಯನ್ನು ಎಲ್ಲಿ ನಾನು ಹೇಳಲಿ.

5. ಕಿಂ ತ್ವಮೇತತ್..................... ಪಾರ್ಥಿವ॥ – (ಶ್ರೀ ವಿ. ಪು.2-13-100)

ಎಲೈ ರಾಜನೇ! ನೀನು ಈ ತಲೆಯಾ, ಅಥವಾ ತಲೆ ನಿನ್ನದಾ, ಹಾಗೆಯೇ ಉದರವಾ, ಅಥವಾ ಉದರ ಉಳ್ಳದ್ದಾ? ಈ ಪಾದ ಮೊದಲಾದದ್ದು ನೀನಾ ಅಥವಾ ಇದೆಲ್ಲಾ ನೀ ಉಳ್ಳದ್ದಾ? ಎಲ್ಲಾ ಅವಯವಗಳಿಗಿಂತಲೂ ಬೇರಾಗಿರುವ ನೀನು ಸಮರ್ಥನಾಗಿ ಇವೆಲ್ಲವುಗಳಲ್ಲಿ ಯಾರಾಗಿದ್ದೀ ಎಂದು ಯೋಚಿಸು.

6. ಪಂಚಭೂತಾತ್ಮಕೇ .................. ಕಳೇಬರೇ॥ – (ಶ್ರೀ ವಿ.ಪು. 6-7-12)

ಕೆಟ್ಟಬುದ್ಧಿಯುಳ್ಳ ಜೀವನು ಮೋಹವೆಂಬ ಕತ್ತಲೆಯಿಂದ ಆವರಿಸಲ್ಪಟ್ಟವನಾಗಿ, ಐದುಭೂತಗಳ ವಿಕಾರವಾದ ಈ ದೇಹದಲ್ಲಿ 'ಇದು ನಾನು' 'ಇದು ನನ್ನದು' ಎಂಬ ಬುದ್ಧಿಯನ್ನು ಉತ್ಕಟವಾಗಿ ಹೊಂದುತ್ತಾನೆ.

## ಸೂತ್ರ - 8

1. ಹೃದಯಂತರ್ಜ್ಯೋತಿಃ ಪುರುಷಃ – (ಪ್ರಶ್ನೋಪನಿಷತ್6-3-7)

ಹೃದಯದಲ್ಲಿ ಪ್ರಕಾಶಿಸುತ್ತಿರುವ ಆತ್ಮಾ.

2. ಅತ್ರಾಯಂ ಪುರುಷಸ್ಸ್ವಯಂ ಜ್ಯೋತಿರ್ಭವತಿ – (ಪ್ರ. ಉ. 6-3-9)

ಇಲ್ಲಿ ಈ ಆತ್ಮಾ ಸ್ವಯಂ ಪ್ರಕಾಶಕನಾಗಿರುತ್ತಾನೆ.

3. ವಿಜ್ಞಾನ ಘನಃ, ಆತ್ಮಾ ಜ್ಞಾನಮಯಃ – (ಶ್ರೀ ವಿ. ಪು. 6-7-22)

ಆತ್ಮಾ ಜ್ಞಾನ ಸ್ವರೂಪನು, ಆತ್ಮಾ ಜ್ಞಾನಮಯನು.

4. ತಚ್ಚ ಜ್ಞಾನಮಯಂ ವ್ಯಾಪೀ ಸ್ವಸಂವೇದ್ಯಮನೂಪಮಮ್ – (ಶ್ರೀವಿ.ಪು.1-2-42)

ಆ ಆತ್ಮನು ಒಳಗೂ ಹೊರಗೂ ಜ್ಞಾನಮಯನಾದವನು. ಸರ್ವವ್ಯಾಪಕನು. ತನ್ನನ್ನು ತಾನೇ ಅರಿಯುವವನು, ಉಪಮಾನ (ಹೋಲಿಕೆ) ಇಲ್ಲದವನು.

5. ಆತ್ಮ ಸಂವೇದ್ಯಂ ತತ್‌ಜ್ಞಾನಮ್

ಯಾವುದು ಆತ್ಮನನ್ನು ಚೆನ್ನಾಗಿ ಅರಿಯುವುದೋ ಅದೇ ಜ್ಞಾನ.

## ಸೂತ್ರ - 9

1. ಅನುಕೂಲಂ ................... ಹಿತ್ಯಾತ್ಮಸಾಕ್ಷಿಕ ಏವಸಃ ॥

ಸುಖವೆಂಬುದು ಅನುಕೂಲ, ದುಃಖವೆಂಬುದು ಪ್ರತಿಕೂಲ ಎಂದಿರಲಾಗಿ, ತನ್ನ ಆತ್ಮಾ ತನಗೆ ಅನುಕೂಲನಲ್ಲವೇ? ಅವನು ತನಗೆ ತಾನೇ ಸಾಕ್ಷಿಯಾಗಿದ್ದಾನೆ.

## ಸೂತ್ರ - 10

1. **ಏವಂ ಹಿ ಸುಪ್ತೋದಿತಸ್ಯ ಪರಾಮರ್ಶ............... ಅತದ್ರೂಪತ್ವಾತ್ ಪ್ರತಿಪತ್ತೇಃ – (ಶ್ರೀಭಾಷ್ಯ 1-1-1)**
   ನಿದ್ರೆಯಿಂದ ಎಚ್ಚೆತ್ತವನಿಗೆ ಈ ರೀತಿಯಾದ ನೆನಪು ಏರ್ಪಡುತ್ತದೆಯಲ್ಲವೇ? ಸುಖವಾಗಿ ನಾನು ನಿದ್ರಿಸಿದೆ ಎಂದು. ಈ ರೀತಿಯಾದ ಪೂರ್ವಾನುಮಾನದ ಜ್ಞಾನದಿಂದ ನಿದ್ರಿಸುವಾಗಲೂ ಅಹಮರ್ಥಭೂತನಾದ ಆತ್ಮನಿಗೆ ಸುಖತ್ವವೂ, ಜ್ಞಾನಾಶ್ರಯತ್ವವೂ ತಿಳಿಯಲ್ಪಡುತ್ತದೆ. ಈ ಜ್ಞಾನವು ಈಗ ಹೇಗೆ ಸುಖವಾಗಿರುವುದೋ ಹಾಗೆಯೇ ಆಗಲೂ ನಿದ್ರಿಸಿದೆ ಎಂದು ಹೇಳಿದೆ ಎಂದು ಹೇಳಬಾರದು. ಏಕೆಂದರೆ ಆ ಜ್ಞಾನಕ್ಕೆ ಆ ಪ್ರಕಾರವಿಲ್ಲದ್ದರಿಂದ.
2. **ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಂ – (ಭಗವದ್ಗೀತೆ 2-2-29)**
   ಈ ಆತ್ಮನನ್ನು ಒಬ್ಬನು ಆಶ್ಚರ್ಯದಿಂದ ನೋಡುತ್ತಾನೆ.
3. **ಆದ್ರ್ಯಂ ಜ್ವಲತಿ – (ತೈತ್ತಿರೀಯ ಉಪನಿಷತ್ 2-9-40)**
   ಜಲ ತತ್ತ್ವವು ಪ್ರಕಾಶಿಸುತ್ತಿದೆ.
4. **ನಿರ್ವಾಣಮಯ ಏವಾಯಮಾತ್ಮಾ**
   ಈ ಆತ್ಮನು ಆನಂದ ಸ್ವರೂಪನೇ
5. **ಜ್ಞಾನಾನಂದಮಯಸ್ತ್ವಾತ್ಮಾ – (ಶ್ರೀಭಾಗವತಂ)**
   ಈ ಆತ್ಮಾ ಜ್ಞಾನ ಆನಂದಮಯನಾದವನು.
6. **ಜ್ಞಾನಾನಂದೈಕ ಲಕ್ಷಣಮ್ – (ವಿಷ್ವಕ್ಸೇನ ಸಂಹಿತೆ)**
   ಜ್ಞಾನ, ಆನಂದಗಳನ್ನೇ ಸ್ವರೂಪವಾಗಿ ಉಳ್ಳವನು.

## ಸೂತ್ರ - 12

1. **ಪ್ರಜಾಪತಿಃ ಪ್ರಜಾಃ ಅಸೃಜತ – (ಯರ್ಜುವೇದ 8-2 ಪ್ರಶ್ನ 2)**
   ಬ್ರಹ್ಮನು ಪ್ರಜೆಗಳನ್ನು ಉಂಟುಮಾಡಿದ.
2. **ಸನ್ಮೂಲಾಸ್ಸೋಮ್ಯೇಮಾಸ್ಸರ್ವಾಃ ಪ್ರಜಾಃ – (ತೈತ್ತಿರೀಯ ಭೃಗುವಲ್ಲಿ-1)**
   ಹೇ ಸೋಮ್ಯ-ಸೋಮಪಾನ ಮಾಡತಕ್ಕವನೇ ಈ ಎಲ್ಲಾ ಪ್ರಜೆಗಳೂ 'ಸತ್' ಶಬ್ದ ವಾಚ್ಯನಾದ ಪರಮಾತ್ಮನನ್ನೇ ಕಾರಣವಾಗುಳ್ಳವರು.
3. **ಯತಃ ಪ್ರಸೂತಾ.................. ವ್ಯಸಸರ್ಜ ಭೂಮ್ಯಾಮ್ – (ತೈತ್ತಿರೀಯ 2-2-1)**
   ಜಗತ್ತಿನ ಸೃಷ್ಟಿಗೆ ಕಾರಣವಾಗಿರುವ ಪ್ರಕೃತಿಯು ಯಾವ ತಮೋವಸ್ಥನಾದ ಬ್ರಹ್ಮನಿಂದ ಉಂಟಾಗುವುದೋ ಯಾವ ಬ್ರಹ್ಮವು ಭೂಮಿಯಲ್ಲಿ ಜಲ ಮೊದಲಾದ ಭೂತಗಳೊಡನೆ ಆತ್ಮಗಳನ್ನು ಸೃಷ್ಟಿಸುವುದೋ.
4. **ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ – (ಕಠವಲ್ಲಿ 1-2-18)**
   ಜ್ಞಾತಾವಾದ ಆತ್ಮನು ಹುಟ್ಟುವುದೂ ಇಲ್ಲ ಮರಣಿಸುವುದೂ ಇಲ್ಲ.

5. ನ ಜಾಯತೇ...................... ಹನ್ಯಮಾನೇ ಶರೀರೇ – (ಭಗವದ್ಗೀತೆ 2-20)
ಈ ಆತ್ಮಾ ಎಂದೂ ಹುಟ್ಟುವವನಲ್ಲ, ಸಾಯುವವನಲ್ಲ, ಹುಟ್ಟಿ ಮತ್ತೆ ಹುಟ್ಟುವುದಿಲ್ಲ ಎಂಬುದಿಲ್ಲ. ಇದು ಹುಟ್ಟಿಲ್ಲದ್ದು, ನಾಶವಿಲ್ಲದ್ದು ಅನಾದಿಯಾದುದ್ದು. ಶರೀರವು ಕೊಲ್ಲಲ್ಪಟ್ಟರೂ ಇದು ಕೊಲ್ಲಲ್ಪಡುವುದಿಲ್ಲ.

## ಸೂತ್ರ - 14

1. ಹೃದಿಹ್ಯೇವಾಯಮಾತ್ಮಾ – (ಪ್ರಶ್ನೋಪನಿಷತ್)
ಈ ಆತ್ಮಾ ಹೃದಯದಲ್ಲೇ ಇದೆ.

2. ತೇನ ಪ್ರದ್ಯೋತೇನ ................... ದೇಶೇಭ್ಯ: – (ಕೌಷಿತಕೀ ಉಪನಿಷತ್)
ಈಶ್ವರನು ತೋರುವ ಈ ಆತ್ಮಾ ಕಣ್ಣಿನಿಂದಲೋ, ಶಿರಸ್ಸಿನಿಂದಲೋ ಶರೀರದ ಇತರ ಇಂದ್ರಿಯಗಳಿಂದಲೋ ಹೊರಟು ಹೋಗುವುದು.

3. ಯೇ ವೈಕೇ ಚ......................... ಸರ್ವೇ ಗಚ್ಛಂತಿ – ( ಪ್ರಶ್ನೋಪನಿಷತ್6-4-6)
ಯಾರು ಈ ಲೋಕದಿಂದ ಹೊರಡುತ್ತಾರೋ ಅವರೆಲ್ಲರೂ ಚಂದ್ರಮಂಡಲವನ್ನೇ ಸೇರುತ್ತಾರೆ.

4. ತಸ್ಮಾಲ್ಲೋಕಾತ್ ಪುನರೇತ್ಯಸ್ಮೈ ಲೋಕಾಯ ಕರ್ಮಣೇ – (ಪ್ರ. ಉ. 6-4-6)
ಆ ಲೋಕದಿಂದ ಪುನಃ ಈ ಲೋಕಕ್ಕೆ ಕರ್ಮಾದ್ಯನುಭವಕ್ಕಾಗಿ ಬರುತ್ತಾರೆ.

5. ಏಷೋऽ ಣುರಾತ್ಮಾ ಚೇತಸಾವೇದಿತವ್ಯಃ – (ಮುಂಡಕೋಪನಿಷತ್ 3-1-9)
ಈ ಆತ್ಮಾ ಅಣುವೆಂದು ಮನಸ್ಸಿನಿಂದ ಅರಿಯಲ್ಪಡುತ್ತಾನೆ.

6. ವಾಲಾಗ್ರ ........................... ಜೀವಸ್ಸ ವಿಜ್ಞೇಯಃ – (ಶ್ವೇತಾಶ್ವತರ 5-9)
ನೂರಾಗಿ ಭಾಗಮಾಡಲ್ಪಟ್ಟ ಭತ್ತದ ಬಾಲದ ತುದಿಯ ನೂರರಲ್ಲೊಂದು ಭಾಗದಷ್ಟು ಜೀವಾತ್ಮನ ಆಕಾರವಿದೆ.

7. ಆರಾಗ್ರಮಾತ್ರೋಹ್ಯವರೋಪಿ ದೃಷ್ಟಃ – (ಶ್ವೇತಾಶ್ವತರ 5-8)
ಆರವೆಂದು ಹೇಳಲ್ಪಡುವ ಸೂಜಿಮೊನೆಗಿಂತ ಅಲ್ಪವಾಗಿ ಕಾಣುತ್ತಾನೆ.

8. ಸ್ವರೂಪಮಣು ...................... ಕೋಟಿ ವಿಭೂಷಿತಾಃ – (ವಿಷ್ವಕ್ಸೇನ ಸಂಹಿತಾ)
ಜ್ಞಾನಾನಂದಗಳನ್ನು ಲಕ್ಷಣವಾಗುಳ್ಳ.........

## ಸೂತ್ರ - 16

1. ವಾ ಶಬ್ದತೋ ............. ಪ್ರಥಮಸೂತ್ರೇಸ್ಥಾಪಿತಮ್ – (ಶ್ರೀ ಭಾಷ್ಯಂ 2-3-26)
'ವಾ' ಎಂಬ ಶಬ್ದವು ಬೇರೊಂದು ಮತವನ್ನು ನಿರಸನಮಾಡಲು ಉಪಯೋಗಿಸಲ್ಪಡುತ್ತದೆ. ಜೀವಾತ್ಮಾವಾದವನು ತನ್ನ ಗುಣವಾದ ಜ್ಞಾನದಿಂದ ದೇಹವನ್ನು ಪೂರ್ಣವಾಗಿ ವ್ಯಾಪಿಸಿರುತ್ತಾನೆ. ಪ್ರಕಾಶದಂತೆ ಹೇಗೆ ಒಂದು ಸ್ಥಳದಲ್ಲಿರುವ ಮಣಿ, ಸೂರ್ಯ ಮೊದಲಾದವರುಗಳ ತೇಜಸ್ಸು ಅನೇಕ

ಕಡೆಗಳಲ್ಲಿ ವ್ಯಾಪಿಸಿರುತ್ತದೋ ಹಾಗೆಯೇ ಹೃದಯ ಪ್ರದೇಶದಲ್ಲಿರುವ ಆತ್ಮನ ಜ್ಞಾನವು ಶರೀರ ಪೂರ್ತಿಯಾಗಿ ವ್ಯಾಪಿಸಿ ವರ್ಧಿಸುತ್ತದೆ. ಆತ್ಮನ ಪ್ರಕಾಶದ ಸ್ಥಾನದಲ್ಲಿರುವ ಜ್ಞಾನಕ್ಕೆ, ತನ್ನ ಸ್ಥಾನಕ್ಕಿಂತಲೂ ಬೇರೆಡೆ ಇರುವಿಕೆ, ಮಾಣಿಕ್ಯದ ಪ್ರಭೆಯಂತೆ ಉಪಪನ್ನವಾಗಬಹುದು. ಎಂದು ಮೊದಲ ಸೂತ್ರದಲ್ಲೇ ಸ್ಥಾಪಿತವಾಗಿದೆ.

2. **ಪ್ರಜ್ಞಯಾ ವಾಚಂ .................... ಕಾಮಮಾಪ್ನೋತಿ – (ಕೌಷೀತಕೀ ಉಪನಿಷತ್ 3-5)**
ಜೀವನು ಜ್ಞಾನದಿಂದ ಮಾತನ್ನು ಪಡೆದು, ಮಾತಿನಿಂದ ಸಮಸ್ತವಾದ ಹೆಸರುಗಳನ್ನು ಪಡೆಯುತ್ತಾನೆ. (ಹೀಗೆ ಒಂದೊಂದು ವಾಕ್ಯವನ್ನು ಕ್ರಮವಾಗಿ ಅರ್ಥವನ್ನು ತಿಳಿದುಕೊಂಡು) **'ವಿಜ್ಞಾನಾದವ್ಯಯಮ್'**- ಅರಿಯಬೇಕಾದ ಇಷ್ಟವನ್ನು ಹೊಂದುತ್ತಾನೆ.

## ಸೂತ್ರ - 18

1. **ಛೇದನಾದಿ .................. ಇತ್ಯವ್ಯಕ್ತಃ – (ಶ್ರೀಗೀತಾಭಾಷ್ಯ 2-25)**
ತುಂಡರಿಸುವುದು ಮೊದಲಾದವುಗಳಿಗೆ ಯೋಗ್ಯವಾದ ಮಡಕೆ ವಸ್ತ್ರ ಮೊದಲಾದ ವಸ್ತುಗಳು ಯಾವ ಕಣ್ಣು ಮೊದಲಾದ ಇಂದ್ರಿಯಗಳಿಗೆ ಪ್ರಕಾಶಿಸುವುದೋ ಆ ಇಂದ್ರಿಯಗಳಿಗೆ ಈ ಜೀವಾತ್ಮಾ ಪ್ರಕಾಶಿಸಲ್ಪಡುವುದಿಲ್ಲ. ಆದ್ದರಿಂದಲೇ ಜೀವಾತ್ಮವು ಅವ್ಯಕ್ತ ಎನಿಸುತ್ತದೆ.

2. **ಶೆನ್ರು ಶೆನ್ರು ಪರಂ ಪರಮಾಯ್ – (ತಿರುವಾಯ್ಮೊಳಿ8-8-8-5)**

## ಸೂತ್ರ - 19

1. **ಯತಃ ಛೇದ್ಯಾದಿ ವಿಸಜಾತೀಯ ತತ ಏವ ............. ನಾರ್ಹಃ – (ಗೀತಾಭಾಷ್ಯ 2-25)**
ಯಾವುದಾದರೊಂದು ಕರಣದಿಂದ ತುಂಡರಿಸಲ್ಪಡುವಂತಹ ಅಚಿತ್‌ಗಿಂತ ಬೇರೆಯಾಗಿರುವುದೋ ಆದ್ದರಿಂದಲೇ ಎಲ್ಲಾ ವಸ್ತುಗಳೊಡನೆ ಸಮಾನವಾಗಿಲ್ಲದಿರುವುದೋ, ಆದ್ದರಿಂದ ಆಯಾಯಾ ವಸ್ತುಗಳ ಸ್ವಭಾವದೊಡನೆ ಕೂಡಿರುವುದಾಗಿ ಭಾವಿಸಲು ಯೋಗ್ಯವಾಗಿಲ್ಲ. (ಆ ವಸ್ತುಗಳಂತೆ ತಿಳಿಯಲಾಗುವುದಿಲ್ಲ.)

2. **ಅವ್ಯಕ್ತೋಽಯಂ ಅಚಿಂತ್ಯೋಽಯಂ – (ಭಗವದ್‌ಗೀತಾ 2-25)**
ಈ ಜೀವಾತ್ಮಾ ಕಾಣದೇ ಇರುವವನು. ಚಿಂತನೆಗೂ ಒಳಪಡದವನು.

## ಸೂತ್ರ - 22

1. **ನೈನಂ ಛಿಂದಂತಿ ಶಸ್ತ್ರಾಣಿ......... ಅಚಲೋಽಯಂ ಸನಾತನಃ – (ಭಗವದ್ಗೀತಾ 2-24)**
ಆಯುಧಗಳು ಈ ಜೀವಾತ್ಮನನ್ನು ತುಂಡರಿಸಲಾರವು, ಅಗ್ನಿ ಸುಡಲಾರದು, ನೀರು ನೆನೆಸಲಾರದು, ಗಾಳಿಯು ಒಣಗಿಸಲಾರದು. ಜೀವಾತ್ಮನು ತುಂಡರಿಸಲ್ಪಡುವವನಲ್ಲ. ಸುಡಲ್ಪಡುವವನಲ್ಲ. ನೆನೆಸಲ್ಪಡುವವನಲ್ಲ. ಒಣಗಿಸಲ್ಪಡುವವನಲ್ಲ. ಸದಾಕಾಲ ಇರುವವನು. ಎಲ್ಲವನ್ನೂ ವ್ಯಾಪಿಸಿದವನು. ಸ್ಥಿರವಾದ ಸ್ವಭಾವವುಳ್ಳವನು. ಚಲಿಸದವನು. ಇವನು ಅನಾದಿಯಾದವನು.

## ಸೂತ್ರ - 25

1. **ಏವಂ ಚಾತ್ಮಾs ಕಾರ್ತ್ಸ್ನ್ಯಮ್ – (ಬ್ರಹ್ಮಸೂತ್ರ 2-2-33)**
ಜೀವಾತ್ಮನು ದೇಹದ ಸಮ ಪರಿಮಾಣವುಳ್ಳವನೆಂದು ಹೇಳಿದರೆ ಈ ವಿಧದಿಂದಲೇ ಆತ್ಮನಿಗೆ ಅಪೂರ್ತಿಯು ಆ ಮತದಲ್ಲಿ ಏರ್ಪಡುತ್ತದೆ.

## ಸೂತ್ರ - 26

1. **ಅಥಯೋ ವೇದೇದಂ ಜಿಘ್ರಾಣೀತಿ – (ಛಾಂದೋಗ್ಯ ಉಪನಿಷತ್ 8-12-4)**
ಅನಂತರ ಭಗವಂತನಲ್ಲಿ ನಿಷ್ಠೆಯುಳ್ಳ ಯಾವನು ಇದನ್ನು ಮೂಸಿನೋಡುತ್ತಾನೋ ಅವನು ಆತ್ಮಾ ಎನಿಸುತ್ತಾನೆ.

2. **ಸ ಆತ್ಮಾ ಮನಸೈವೈತಾನ್ ಕಾಮಾನ್ ಪಶ್ಯನ್ ರಮತೇ – (ಛಾಂದೋಗ್ಯ 8-12-5)**
ಮನಸ್ಸಿನಿಂದ ಈ ಸಮಸ್ತವಾದ ಕಲ್ಯಾಣಗುಣಗಳನ್ನೂ ಅನುಭವಿಸುತ್ತಾ ಆನಂದವಾಗಿರುತ್ತಾನೆ.

3. **ನ ಪಶ್ಯೋ ಮೃತ್ಯುಂ ಪಶ್ಯತಿ – (ಛಾಂದೋಗ್ಯ ಉಪನಿಷತ್)**
ಬ್ರಹ್ಮವನ್ನು ಸಾಕ್ಷಾತ್ಕರಿಸಿದವನು ಯಮನಂತೆ ಭಯಂಕರವಾದ ಸಂಸಾರವನ್ನು ನೋಡುವುದೇ ಇಲ್ಲ.

4. **ವಿಜ್ಞಾತಾರಮರೇ ಕೇನ ವಿಜಾನೀಯಾತ್ – (ಬೃಹದಾರಣ್ಯಕ ಉಪನಿಷತ್ 6-5-15)**
ಎಲೈ! ಸರ್ವಜ್ಞನಾದ ಈಶ್ವರನನ್ನು ಯಾವ ಉಪಾಯದಿಂದ ಅರಿಯಬಹುದು.

5. **ಜಾನಾತ್ಯೇವಾಯಂ ಪುರುಷಃ – (ಬೃ. ಉಪ.)**
ಈ ಪುರುಷನನ್ನೇ ಅರಿಯುತ್ತಾನೆ.

6. **ಏಷಹಿದ್ರಷ್ಟಾ ..................... ವಿಜ್ಞಾನಾತ್ಮಾ ಪುರುಷಃ – (ಪ್ರಶ್ನೋಪನಿಷತ್4-9)**
ಈ ಜೀವಾತ್ಮಾ ನೋಡುತ್ತಾನೆ, ಕೇಳುತ್ತಾನೆ, ಮೂಸುತ್ತಾನೆ, ರುಚಿನೋಡುತ್ತಾನೆ, ಮನನಮಾಡುತ್ತಾನೆ, ಅನುಭವಿಸುತ್ತಾನೆ,ಕಾರ್ಯಮಾಡುತ್ತಾನೆ. ಆತ್ಮಾ ಜ್ಞಾನ ಸ್ವರೂಪನಾಗಿದ್ದಾನೆ.

7. **ಏವ ಮೇವಾಸ್ಯ ಪರಿದ್ರಷ್ಟುಃ – (ಪ್ರಶ್ನೋಪನಿಷತ್6-5)**
ನೋಡುವ ಈ ಆತ್ಮನಿಗೆ ಈ ವಿಧವಾದ ಜ್ಞಾನದಿಂದಲೇ.

## ಸೂತ್ರ - 28

1. **ಇದಮಹಮಪಿ ............ ಬಾಹ್ಯಮಪ್ಯೇಕಮಸ್ತು – (ಶ್ರೀರಂಗರಾಜಸ್ತವ 2-10)**
ನಾನು ಪುರೋವರ್ತಿಯಾದ ವಸ್ತುವನ್ನು ಅರಿಯುತ್ತೇನೆ ಎಂಬಂತೆ ಈ ಪ್ರಕಾರ ಆತ್ಮನಿಗೂ ಜ್ಞಾನಕ್ಕೂ ವಿಶೇಷವಾದ ಭೇದವು ಪ್ರಕಾಶಿಸುತ್ತಿರಲು ಆತ್ಮನಿಗೂ ಜ್ಞಾನಕ್ಕೂ ಐಕ್ಯವು (ಎಲ್ಲ ವಿಧವಾದ ಅನುಭವಕ್ಕೂ ವಿರುದ್ಧವಾಗಿ) ಅಂಗೀಕರಿಸಲ್ಪಟ್ಟರೆ, ಕಣ್ಮುಂದೆ ಇರುವುದರಿಂದ ಇಂತಹುದೆಂದು ಗ್ರಹಿಸಲ್ಪಡುವ ಬಾಹ್ಯವಸ್ತುವೂ ಜ್ಞಾನದೊಡನೆ ಐಕ್ಯವನ್ನು ಹೊಂದಲಿ.

## ಸೂತ್ರ - 30

1. **ಹೇಯೋಪಾದೇಯತಾ.......... ಚಿಕೀರ್ಷಾ ಕರ್ತೃತಾಶ್ರಯಾ.**

ಆತ್ಮನ ಜ್ಞಾತೃತ್ವವು ತ್ಯಾಜ್ಯ ಉಪಾದೇಯಗಳನ್ನು ಅರಿಯಲು ಕಾರಣವಾಗಿದೆ. ಆಯಾಯಾ ಹೇಯಗಳನ್ನು ಬಿಡುವುದರಲ್ಲೂ, ಉಪಾದೇಯಗಳನ್ನು ಅಂಗೀಕರಿಸುವುದರಲ್ಲೂ, ಇಚ್ಛೆಯು ಕರ್ತೃತ್ವದಿಂದ ಏರ್ಪಟ್ಟದ್ದಾಗಿದೆ.

## ಸೂತ್ರ - 31

1. **ಮೂಲಪ್ರಕೃತಿರ್ನಾಮ ................ ಸತ್ವರಜಸ್ತಮಾಂಸಿದ್ರವ್ಯಾಣಿ – (ಶ್ರೀಭಾಷ್ಯ 2-2-1)**

ಮೂಲಪ್ರಕೃತಿ ಎಂದರೆ ಸುಖ ದುಃಖ ಮೋಹಗಳನ್ನು ಸ್ವರೂಪವಾಗುಳ್ಳದ್ದಾಗಿಯೂ, ಲಘುವಾಗಿಯೂ, ಪ್ರಕಾಶವುಳ್ಳದ್ದಾಗಿಯೂ, ಚಲನವುಳ್ಳದ್ದಾಗಿಯೂ, ಒಂದನ್ನಾಶ್ರಯಿಸಿರುವುದಾಗಿಯೂ, ಭಾರವಾಗಿಯೂ, ಮರೆಮಾಡುವಂತಹುದಾಗಿಯೂ, ಇವೆಲ್ಲವನ್ನೂ ಮಾಡುವಂತಹುದಾಗಿಯೂ, ಇಂದ್ರಿಯಗಳಿಗೆ ಗೋಚರವಾಗದವುಗಳಾಗಿಯೂ, ಅವುಗಳ ಕೃತ್ಯಗಳಿಂದಲೇ ನಿಶ್ಚಯಿಸುವಂತಹ ಭೇಧಗಳನ್ನುಳ್ಳದ್ದಾಗಿಯೂ, ಯಾವ ಅಪೂರ್ತಿಯೂ ಇಲ್ಲದ್ದಾಗಿಯೂ, ಪೂರ್ತಿಯೂ ಇಲ್ಲದ್ದಾಗಿಯೂ, ಸಾಮ್ಯವನ್ನುಳ್ಳದ್ದಾಗಿರುವ ಸತ್ವ, ರಜಸ್, ತಮೋಗುಣಗಳಾದ ದ್ರವ್ಯಗಳಾಗಿವೆ.

2. **ಹಂತಾಚೇನ್ಮನ್ಯತೇ ಹಂತುಂ .................... ಹಂತಿ ನ ಹನ್ಯತೇ – (ಕಠವಲ್ಲಿ 2-19)**

ದೇಹ ವಿಯೋಗವನ್ನು ಉಂಟು ಮಾಡುವವನು, ಕೊಲ್ಲಬೇಕೆಂದು ನಿಶ್ಚಯಿಸಿದ್ದೇ ಆದರೆ ; ದೇಹ ವಿಯೋಗವನ್ನು ಹೊಂದುವವನು ತನ್ನನ್ನು ಕೊಲ್ಲಲ್ಪಟ್ಟವನಾಗಿ ಭಾವಿಸಿದ್ದೇ ಆದರೆ, ಇವರಿಬ್ಬರೂ ಅರಿವಿಲ್ಲದವರು. ಏಕೆಂದರೆ ಕೊಲ್ಲುವವನು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವವನು ಸಾಯುವುದೂ ಇಲ್ಲ.

3. **ನಾನ್ಯಂ ಗುಣೇಭ್ಯಃ ಕರ್ತಾರಂ ಯಥಾದ್ರಷ್ಟಾನು ಪಶ್ಯತಿ – (ಭಗವದ್ಗೀತೆ 14-19)**

ವಿವೇಕಿಯಾದವನು ಸತ್ವಾದಿಗುಣಗಳಿಗಿಂತ ಮತ್ತೊಂದನ್ನು ಕರ್ತಾವಾಗಿ ಎಂದಿಗೂ ತಿಳಿಯುವುದಿಲ್ಲವೋ-ಎಂದರೆ ಗುಣಗಳೇ ಕರ್ತಾ ಎಂದರ್ಥ.

4. **ಕಾರ್ಯಕಾರಣ........................ ಭೋಕ್ತೃತ್ವೇ ಹೇತುರುಚ್ಯತೇ। – (ಭಗವದ್ಗೀತೆ- 13-21)**

ದೇಹೇಂದ್ರಿಯಗಳನ್ನು ಉಂಟುಮಾಡುವ ವಿಷಯದಲ್ಲಿ 'ಮಾಯೆ'ಯು ಕಾರಣವಾಗಿ ಹೇಳಲ್ಪಡುವುದು. ಸುಖದುಃಖಾನುಭವಕ್ಕೆ ಜೀವನು ಕಾರಣವಾಗಿ ಹೇಳಲ್ಪಡುತ್ತಾನೆ.

## ಸೂತ್ರ - 32

1. **ಶಾಸ್ತ್ರಫಲಂ ಪ್ರಯೋಕ್ತರೀ – (ಪೂರ್ವಮೀಮಾಂಸಾ)**

ಆತ್ಮಾ ಕರ್ತಾವಾದರೆ ಮಾತ್ರ ಶಾಸ್ತ್ರವು ಪ್ರಯೋಜನವುಳ್ಳದ್ದಾಗುತ್ತದೆ.

2. **ಕರ್ತಾ ಶಾಸ್ತ್ರಾ ರ್ಥವತ್ವಾತ್ – (ಬ್ರಹ್ಮಸೂತ್ರ 2-3-33)**

ಶಾಸ್ತ್ರವು ಪ್ರಯೋಜನವತ್ತಾದ್ದರಿಂದ ಆತ್ಮಾ ಕರ್ತಾವಾಗುತ್ತಾನೆ.

3. ಸ್ವರ್ಗ .................... ಉಪಾಸೀತ – (ಯಜುರ್ವೇದ 2-5-5)
ಸ್ವರ್ಗವನ್ನು ಆಸೆಪಡುವವನು ಯಜ್ಞ ಮಾಡಬೇಕು. ಮುಮುಕ್ಷುವು ಬ್ರಹ್ಮನನ್ನು ಉಪಾಸನೆ ಮಾಡಬೇಕು.

## ಸೂತ್ರ - 34

1. ಪ್ರಕೃತೇಃ ..................... ಮನ್ಯತೇ – (ಭಗವದ್ಗೀತೆ 3-27)
ಮೂಲಪ್ರಕೃತಿಯ ಸತ್ವಾದಿ ಮೂಲಗುಣಗಳಿಂದ ನಾನಾ ವಿಧವಾಗಿ ಮಾಡಲ್ಪಡುವ ಕಾರ್ಯಗಳನ್ನು, ಅಹಂಕಾರದಿಂದ ಮೂಢನಾದವನು ನಾನು ಮಾಡುತ್ತೇನೆ ಎಂದು ತಿಳಿಯುತ್ತಾನೆ.

## ಸೂತ್ರ - 35

1. ಪರಾತ್ತು ತತ್‌ಶ್ರುತೇಃ – (ಬ್ರ.ಸೂ. 2-3-40)
ಪರಮಪುರುಷನ ಸಂಕಲ್ಪದಿಂದ ಹಾಗೇ ಶ್ರುತಿ ಹೇಳುತ್ತದೆ.

2. ಕೃತ ಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧಾ ವೈಯರ್ಥ್ಯಾದಿಭ್ಯಃ। – (ಬ್ರಹ್ಮ ಸೂತ್ರ 3-2-40)
ವೇದದಲ್ಲಿ ಹೇಳಲ್ಪಟ್ಟ ವಿಧಿ ನಿಷೇಧಗಳಿಗೆ ಪ್ರಯೋಜನವಿಲ್ಲದಿರುವಿಕೆ ಎಂಬುದು ಏರ್ಪಡದೇ ಇರಬೇಕಾದರೆ ಜೀವನು ಮಾಡುವ ಪ್ರಯತ್ನಗಳನ್ನು ಪರಮಾತ್ಮನು ಅಪೇಕ್ಷಿಸುತ್ತಾನೆ.

3. ಆದಾವೀಶ್ವರದತ್ತ್ಯೈವ ..................... ತತಸ್ಸರ್ವಸ್ಯ ಪುಂಸೋಹರಿಃ – (ತತ್ವಸಾರ 46)
ಆದಿಯಲ್ಲಿ ಜೀವನು ಈಶ್ವರನಿಂದ ಕೊಡಲ್ಪಟ್ಟ ಸ್ವಾತಂತ್ರವೆಂಬ ಶಕ್ತಿಯಿಂದ ತಾನೇ ಆಯಾಯಾ ಜ್ಞಾನವನ್ನೂ, ಇಚ್ಛೆಯನ್ನೂ ಪ್ರಯತ್ನಗಳನ್ನೂ ಉಂಟುಮಾಡಿರುತ್ತಾನೆ. ಅಲ್ಲಿ (ಅಶಾಸ್ತ್ರೀಯವಾದವುಗಳಲ್ಲಿ) ಉಪದೇಶಿಸಿ, ಶಾಸ್ತ್ರೀಯಗಳಲ್ಲಿ ಅನುಮತಿ ನೀಡಿ ನಿಗ್ರಹ ಅನುಗ್ರಹಗಳನ್ನು ಮಾಡಿ ಅದರಿಂದ ಎಲ್ಲ ಕರ್ಮ ಫಲಗಳನ್ನು ಸಮಸ್ತ ಚೇತನರಿಗೂ ಸರ್ವೇಶ್ವರನು ನೀಡುತ್ತಾನೆ.

4. ಏಷ ಏವ ........................ ತಂ ಯಮಧೋನಿನೀಷತಿ – (ಕೌಷೀತಕೀ ಉಪನಿಷತ್)
ಈ ಶ್ರೀಮನ್ನಾರಾಯಣನೇ ಯಾವ ಜೀವವನ್ನು ಈ ಲೋಕದಿಂದ ಉದ್ಧರಿಸಲು ಇಚ್ಛಿಸುತ್ತಾನೋ, ಆ ಜೀವನಿಂದ ಒಳ್ಳೆಯ ಕಾರ್ಯವನ್ನೇ ಮಾಡಿಸುತ್ತಾನೆ. ಈ ಶ್ರೀಮನ್ನಾರಾಯಣನೇ ಯಾವನನ್ನು ಅಧೋಗತಿಗೆ ತಳ್ಳಲು ಸಂಕಲ್ಪಿಸುತ್ತಾನೋ ಅವನಿಂದ ಕೆಟ್ಟ ಕಾರ್ಯಗಳನ್ನು ಮಾಡಿಸುತ್ತಾನೆ.

5. ಅಹಂ.............................. ಬುಧಾಭಾವ ಸಮನ್ವಿತಾಃ॥ – (ಭಗವದ್ಗೀತೆ 10-8)
ನಾನು ಎಲ್ಲದಕ್ಕೂ ಕಾರಣ ಭೂತನಾಗಿದ್ದೇನೆ. ನನ್ನಿಂದಲೇ ಎಲ್ಲವೂ ಪ್ರವರ್ತಿಸುತ್ತದೆ. ಈ ರೀತಿಯಾಗಿ ಅರಿತು ಜ್ಞಾನಿಗಳು ಪ್ರೀತಿಯಿಂದ ಕೂಡಿದವರಾಗಿ ನನ್ನನ್ನು ಪೂಜಿಸುತ್ತಾರೆ.

6. ತೇಷಾಂ............................ ಯೇನಮಾಮುಪಯಾಂತಿ ತೇ॥ – (ಭಗವದ್ಗೀತೆ 10-10)
ಯಾವುದರಿಂದ ಅವರುಗಳು ನನ್ನನ್ನು ಹೊಂದುತ್ತಾರೋ ನಿರಂತರ ನನ್ನನ್ನು ಭಜಿಸುತ್ತಾರೋ ಅಂತಹ ಬುದ್ಧಿಯೋಗವನ್ನು ಪ್ರೀತಿಪೂರ್ವಕವಾಗಿ ಅವರಿಗೆ ನಾನು ನೀಡುತ್ತೇನೆ.

7. ತೇಷಾಂ ........................ ಜ್ಞಾನದೀಪೇನ ಭಾಸ್ವತಾ। – (ಭಗವದ್ಗೀತೆ)

ಆ ರೀತಿಯಾಗಿರುವ ಭಕ್ತರುಗಳ ಅನುಗ್ರಹಾರ್ಥವಾಗಿಯೇ ಅವರೊಳಗಿದ್ದುಕೊಂಡು ಪ್ರಕಾಶಮಾನವಾಗಿರುವ ಜ್ಞಾನದೀಪದಿಂದ ಅಜ್ಞಾನದಿಂದ ಏರ್ಪಡುವ ಕತ್ತಲೆಯನ್ನು ನಾಶಪಡಿಸುತ್ತೇನೆ.

8. ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ – (ಭಗವದ್ಗೀತೆ 16-18)

ಆ ಅಸುರ ಸ್ವಭಾವವುಳ್ಳವರುಗಳನ್ನು ಜಗತ್ತು ಅಬ್ರಹ್ಮಾತ್ಮಕವೆಂದೂ ಪರಮಾತ್ಮನಿಂದ ನಿಯಮಿಸಲ್ಪಡುವುದಿಲ್ಲವೆಂದೂ ಹೇಳುತ್ತದೆ.

9. ಮಾಮಾತ್ಮ ಪರದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ। – (ಭಗವದ್ಗೀತೆ 16-18)

ತನ್ನ ಹಾಗೂ ಬೇರೆಯವರ ದೇಹಗಳಲ್ಲಿರುವ ನನ್ನನ್ನು ದ್ವೇಷಿಸುವವರಾಗಿಯೂ, ನನ್ನಲ್ಲಿ ಅಸೂಯೆಯುಳ್ಳವರಾಗಿಯೂ ಇರುತ್ತಾರೆ.

10. ತಾನಹಂ................................ ಆಸುರೀಷ್ವೇವ ಯೋನಿಷು – (ಭಗವದ್ಗೀತೆ 16-19)

ಯಾರು ನನ್ನನ್ನು ದ್ವೇಷಿಸುತ್ತಾರೆಯೋ ಅವರನ್ನು ಅಶುಭವಾದ ಆಸುರ ಯೋನಿಯಲ್ಲೇ ನಿರಂತರ ಎಸೆದು ಬಿಡುತ್ತೇನೆ.

## ಸೂತ್ರ- 36

1. ಯೋ ವಿಜ್ಞಾನೇ ತಿಷ್ಠನ್ – (ಪ್ರಶ್ನೋಪನಿಷತ್)

ಯಾವ ಪರಮಾತ್ಮನು ಜ್ಞಾನ ಸ್ವರೂಪನಾದ ಜೀವನಲ್ಲಿ ಇದ್ದು ಕೊಂಡು.

2. ವಿಜ್ಞಾನಂ................ ಯಜ್ಞಂ ತನುತೇ – (ತೈತ್ತಿರೀಯ ಉಪನಿಷತ್-ಅರಣ್ಯಕ 4-9)

ಜೀವನು ಯಜ್ಞವನ್ನು ಮಾಡುತ್ತಾನೆ.

3. ಜ್ಞಾನ ಸ್ವರೂಪ ಮತ್ಯಂತ ನಿರ್ಮಲಂ ಪರಮಾರ್ಥತಃ – (ಶ್ರೀವಿಷ್ಣು ಪುರಾಣ 1-2-6)

ನಿಜವಾಗಿ ವಿಚಾರಿಸಿದಲ್ಲಿ ಶುದ್ಧ ಜ್ಞಾನಸ್ವರೂಪನಾಗಿಯೂ, ಅತ್ಯಂತ ನಿರ್ಮಲನಾಗಿಯೂ ಇರುವ ಭಗವಂತನನ್ನು ದರ್ಶಿಸುತ್ತಾನೆ.

4. ಜ್ಞಾನ ಸ್ವರೂಪಮಖಿಲಂ ಜಗದೇತದಬುದ್ಧಯಃ – (ಶ್ರೀ ವಿಷ್ಣು ಪುರಾಣ 1-2-40)

ಬುದ್ಧಿ ಹೀನರಾದವರು ಜ್ಞಾನ ಸ್ವರೂನಾದ (ಬ್ರಹ್ಮಾತ್ಮಕವಾದ) ಸಮಸ್ತವಾದ ಈ ಜಗತ್ತನ್ನು

5. ವಿಜ್ಞಾನಂ ಪರಮಾರ್ಥೋಽಹಿ ದ್ವೈತಿನೋಽತಥ್ಯದರ್ಶಿನಃ – (ಶ್ರೀ ವಿ.ಪು 2-14-31)

ಎಲ್ಲದರಲ್ಲಿರುವ ಆತ್ಮ ಸ್ವರೂಪವೆಲ್ಲವೂ ಜ್ಞಾನಮಯವೆಂಬುದೇ ಪರಮಾರ್ಥವು. ಭಿನ್ನವೆಂದು ಭಾವಿಸುವವರು ಯಥಾರ್ಥವನ್ನರಿಯದವರು.

## ಸೂತ್ರ - 37

1. **ತದ್ಗುಣಸಾರತ್ವಾತ್.................. ದೋಷಸ್ತದರ್ಶನಾತ್। – (ಬ್ರಹ್ಮ ಸೂತ್ರ 2-3-30-31)**
ಪರಮಾತ್ಮನಂತೆ ಆ ಜ್ಞಾನ ಗುಣವನ್ನೇ ಪ್ರಧಾನವಾಗಿ ಉಳ್ಳವನಾಗಿರುವಿಕೆಯಿಂದ 'ಜ್ಞಾನ' ವೆಂಬ ವ್ಯವಹಾರವು. ಜ್ಞಾನ-ಆತ್ಮಾ ಇರುವವರೆಗೂ ಇರುವಂತಹುದು. ಲೋಕದಲ್ಲಿಯೂ ಹಾಗೆಯೇ ಕಂಡು ಬರುವುದರಿಂದಲೂ ಜ್ಞಾನ ಶಬ್ದದಿಂದಲೇ ಆತ್ಮನನ್ನು ನಿರೂಪಿಸುವುದರಲ್ಲಿ ಯಾವ ದೋಷವೂ ಇಲ್ಲ.

2. **ಜ್ಞಾನ ಮಾತ್ರ.............. ಉಪಪದ್ಯತೇ – (ವೇದಾಂತದೀಪಮ್)**
ಆತ್ಮವನ್ನು 'ಜ್ಞಾನ'ವೆಂದು ಹೇಳುವುದು; ಜ್ಞಾನವು ಪ್ರಧಾನಗುಣವಾಗಿರುವುದರಿಂದಲೂ, ಆತ್ಮ ಸ್ವರೂಪದೊಡನೆ ಸಂಬಂಧಿಸಿರುವುದರಿಂದಲೂ, ಸ್ವರೂಪವನ್ನು ನಿರೂಪಿಸುವ ಗುಣವಾಗಿರುವುದರಿಂದಲೂ, ಆತ್ಮ ಸ್ವರೂಪವು ಜ್ಞಾನದಂತೆ ಸ್ವಯಂ ಪ್ರಕಾಶಕವಾಗಿರುವುದರಿಂದಲೂ ಯುಕ್ತವಾಗಿದೆ.

## ಸೂತ್ರ - 38

1. **ಆತ್ಮನಿ ತಿಷ್ಠನ್.................. ಆತ್ಮಾನಂತರ್ಯಾಮ್ಯಮೃತಃ – (ಸುಬಾಲೋಪನಿಷತ್)**
ಯಾವ ಈಶ್ವರನು ಆತ್ಮನಲ್ಲಿದ್ದುಕೊಂಡಿದ್ದಾನೋ, ಅಂತಹ ಯಾವನನ್ನು ಆತ್ಮನು ತಿಳಿದಿಲ್ಲವೋ; ಯಾವ ಈಶ್ವರನಿಗೆ ಆತ್ಮವು ಶರೀರವೋ, ಯಾವ ಈಶ್ವರನು ಅಂತರಾತ್ಮನಾಗಿದ್ದು ನಿಯಮಿಸುತ್ತಾನೋ, ಆ ಅಂತರ್ಯಾಮಿಯೇ ನಿನಗೆ ಅಮೃತನಾದ ಆತ್ಮನಾಗಿದ್ದಾನೆ.

## ಸೂತ್ರ - 39

1. **ಏಷಃ ಸೇತುಃ ವಿದಾರಣಃ – (ಬೃಹದಾರಣ್ಯಕೋಪನಿಷತ್ 6-4-22)**
ಈ ಸರ್ವೇಶ್ವರನು ಧಾರಕವಾದ ದಡವಾಗಿದ್ದಾನೆ, -ಸೇತುವೆಯಾಗಿದ್ದಾನೆ.

2. **ಏತತ್ ಸರ್ವಂ ಪ್ರಜ್ಞಾನೇ ಪ್ರತಿಷ್ಠಿತಮ್ – (ಬೃಹ. ಉ.)**
ಈ ಸಕಲ ಪ್ರಪಂಚವೂ ಜ್ಞಾನಸ್ವರೂಪನಾದ ಈಶ್ವರನಲ್ಲೇ ನೆಲೆಗೊಂಡಿದೆ.

3. **ಏವಮೇವ ................ ಏವಾತ್ಮಾನಸ್ಸಮರ್ಪಿತಾಃ – (ಬೃ.ಉ.)**
ಈ ಪ್ರಕಾರವಾಗಿಯೇ ಈ ಪರಮಾತ್ಮನಲ್ಲಿ ಸಮಸ್ತವಾದ ಭೂತಗಳೂ , ಸಮಸ್ತ ಆತ್ಮಗಳೂ ಅವನಿಂದಲೇ ಧರಿಸಲ್ಪಟ್ಟು ಸುರಕ್ಷಿತವಾಗಿವೆ.

4. **ಏತಸ್ಯವಾ.................... ವಿಧೃತೌ ತಿಷ್ಠತಃ – (ಬೃ.ಉ.)**
ಎಲೈ ಗಾರ್ಗಿಯೇ। ಈ ನಾಶವಿಲ್ಲದ ಪರಮಾತ್ಮನ ಆಜ್ಞೆಯಿಂದಲೇ ಸೂರ್ಯನೂ ಚಂದ್ರನೂ ಧರಿಸಲ್ಪಟ್ಟು ನೆಲೆಯುಳ್ಳವರಾಗಿದ್ದಾರೆ.

5. **ಇಚ್ಛಾತ........... ಹಿ ನಿದರ್ಶನಂ ನಃ – (ಶ್ರೀವೈಕುಂಠಸ್ತವಂ -36)**
ವಿಭೂತಿಯಲ್ಲಿನ ಪದಾರ್ಥಗಳ ಉತ್ಪತ್ತಿಯಾದರೋ ನಿನ್ನ 'ಬಹುಸ್ಯಾಂ ಪ್ರಜಾಯೇಯ' ಎಂಬ ಇಚ್ಛಾರೂಪವಾದ ಸಂಕಲ್ಪ ಜ್ಞಾನದಿಂದಲೇ ಆಗಿದೆ. ನೀನು ನಿತ್ಯವಾಗಿರಬೇಕೆಂದು ಅಪೇಕ್ಷೆಪಟ್ಟವುಗಳು

ನಿತ್ಯಗಳಾಗಿರುತ್ತವೆ. ಏಕೆಂದರೆ ನಿತ್ಯವಾಗಿ ನಿನಗೊಬ್ಬನಿಗೇ ಪರತಂತ್ರವಾಗಿ ಆತ್ಮ ಸತ್ತೆಯನ್ನುಳ್ಳಂತಹ ನಿನ್ನ ಸರ್ವಜ್ಞತ್ವ, ಸರ್ವಶಕ್ತಿತ್ವಗಳೆಂಬ ಕಲ್ಯಾಣಗುಣಗಳು ನಮಗೆ ದೃಷ್ಟಾಂತವಾಗಿದೆ.

6. **ದ್ಯೌಸ್ಸಚಂದಾರ್ಕ ನಕ್ಷತ್ರಂ ಖಂ ದಿಶೋ ಭೂರ್ಮಹೋದಧಿಃ। – (ಶ್ರೀ ವಿಷ್ಣು ಸಹಸ್ರನಾಮಂ 135)**
ಚಂದ್ರಸೂರ್ಯ ನಕ್ಷತ್ರಗಳೊಡನೆ ಕೂಡಿರುವ ಪ್ರಸಿದ್ಧವಾದ ಆಕಾಶವೂ, ಕಾರ್ಯಾಕಾಶವೂ, ದಿಕ್ಕುಗಳೂ, ಭೂಮಿಯೂ, ವಿಶಾಲವಾದ ಸಮುದ್ರವೂ, ಮಹಾತ್ಮನಾದ ವಾಸುದೇವನ ವೀರ್ಯದಿಂದ ಅಂದರೆ ಸಂಕಲ್ಪದಿಂದ ಧರಿಸಲ್ಪಟ್ಟಿದೆ.

## ಸೂತ್ರ - 40

1. **ಪರಗತಾತಿಶಯಾಧಾನೇಚ್ಛಯೋಪಾದೇಯತ್ವೇನ ಪರಶ್ಶೇಷೀ – (ವೇದಾರ್ಥಸಂಗ್ರಹ)**
ಪರರಿಗೆ ಅತಿಯತೆಯನ್ನುಂಟುಮಾಡುವ ಇಚ್ಛೆಯಿಂದ ಉಪಾದೇಯತ್ವವೇ ಯಾರಿಗೆ ಸ್ವರೂಪವೋ ಅವನು 'ಶೇಷ' ಎನಿಸಲ್ಪಡುತ್ತಾನೆ. ಮತ್ತೊಬ್ಬನು ಶೇಷೀ ಎನಿಸುತ್ತಾನೆ.

2. **ಇಚ್ಛಾಯಾ ...................... ಶೇಷಶೇಷಿಣೌ॥**
ಯಾವ ಶೇಷಿಯ ಅತಿಶಯಸಿದ್ಧಿಯನ್ನು ಕುರಿತು ಯಾವ ವಸ್ತುವು ಇಚ್ಛೆಯಿಂದ ಉಪಾದೇಯ ವಾಗಿರುವುದೋ, ಇಬ್ಬರನ್ನು ಪಡೆದೂ, ಇಬ್ಬರನ್ನು ಪಡೆಯದೆಯೂ ಒಬ್ಬರನ್ನು ಪಡೆದ ಅವರುಗಳನ್ನು ಶೇಷ, ಶೇಷೀ ಎನ್ನಲಾಗುತ್ತದೆ.

3. **ಯಥೇಷ್ಟ ................. ವಿನಿಯುಜ್ಯತೇ॥**
ಇಷ್ಟ ಬಂದಂತೆ ವಿನಿಯೋಗಿಸಲು ಯೋಗ್ಯವಾಗಿರುವಂತಹುದು'ಶೇಷ' ಶಬ್ದದಿಂದ ಹೇಳಲ್ಪಡುತ್ತದೆ. ಈಶ್ವರನಿಂದ ಸಮಸ್ತವಾದ ಜಗತ್ತೂ ಅವನಿಷ್ಟದಂತೆಯೇ ವಿನಿಯೋಗಿಸಲ್ಪಡುತ್ತದೆ.

4. **ಯಸ್ಯಾಸ್ಮಿ ನ ತಮಂತರೇಮಿ – (ಯಜುರ್ವೇದ)**
ನಾನು ಯಾವ ಒಬ್ಬನಿಗೆ ಶೇಷ ಭೂತನಾಗಿರುವೆನೋ ಆ ಪರಮಾತ್ಮನನ್ನು ನಾನು ಅತಿಕ್ರಮಿಸುವುದಿಲ್ಲ.

5. **ಪರವಾನಸ್ಮಿ ಕಾಕುತ್ಸ್ಥ ತ್ವಯಿವರ್ಷಶತಂ ಸ್ಥಿತೇ – (ಶ್ರೀರಾಮಾಯಣ ಅರಣ್ಯಕಾಂಡ 15-6)**
ಕಕುತ್ಸ್ಥವಂಶದವನೇ (ಎಲೈ ರಾಮನೇ) ನೀನು ಅನೇಕ ಸಾವಿರ ವರ್ಷಗಳಿದ್ದರೂ ನಾನು ನಿನಗೆ ಪರತಂತ್ರನಾಗೇ ಇರುತ್ತೇನೆ.

6. **ದಾಸ ಭೂತಾಸ್ಸತ್ವಸ್ಸರ್ವೇಹ್ಯಾತ್ಮಾನಃ ............. ತಥೈವ ಚ । – (ಭಗವತ್ ಶಾಸ್ತ್ರ)**
ಈಶ್ವರನಿಗೆ ಎಲ್ಲ ಆತ್ಮಗಳೂ ಸ್ವರೂಪದಿಂದಲೇ ದಾಸಭೂತರು. ಅವರುಗಳಿಗೆ ಬದ್ಧಾವಸ್ಥೆಯಲ್ಲಿಯೂ, ಮೋಕ್ಷದೆಸೆಯಲ್ಲೂ ಬೇರೆ ಯಾವ ಲಕ್ಷಣವೂ ಇಲ್ಲ.

7. **ಸ್ವೋಜ್ಜೀವನೇಚ್ಛಾ ..................... ಸದಾಸ್ಮರ ॥ – (ಶ್ರೀ ವಿಷ್ಣುತತ್ತ್ವ)**
ನಿನಗೆ ನಿನ್ನ ಉಜ್ಜೀವನದಲ್ಲಿ ಇಚ್ಛೆಯಿರುವುದೇ ಆದರೆ, ಸ್ವರೂಪ ಹಾನಿಯಾಗಬಾರದೆಂಬ ಆಸೆಯಿರುವುದಾದರೆ, ಸ್ವಾಭಾವಿಕವಾದ ಆತ್ಮನ ದಾಸ್ಯವನ್ನೂ ಶ್ರೀ ಹರಿಯ ಸ್ವಾಮಿತ್ವವನ್ನೂ ಸದಾ ಸ್ಮರಿಸುತ್ತಿರು.

## ಸೂತ್ರ - 41

1. **ಸೋಮಃ .................. ಮನುಷ್ಯ ಜಾಃ। – (ಮಂತ್ರಪ್ರಶ್ನಂ 1-3)**
ಚಂದ್ರನನ್ನು ಮೊದಲು ಪತಿಯಾಗಿ ವರಿಸು. ಗಂಧರ್ವನನ್ನು ನಂತರದ ಪತಿಯಾಗಿ ವರಿಸು. ಅಗ್ನಿಯಾದವನು ನಿನಗೆ ಮೂರನೆಯ ಪತಿಯಾಗಲಿ. ಮನುಷ್ಯನು ನಿನಗೆ ನಾಲ್ಕನೆಯ ಪತಿಯಾಗಿ ಆಗಲಿ.

2. **ಅಯಮೇವಾತ್ಮ ...................... ಶೇಷ ಶೇಷಿ ಭಾವಶ್ಚ ॥ – (ವೇದಾರ್ಥ ಸಂಗ್ರಹಃ)**
ಇದು ಆತ್ಮಾ ಹಾಗೂ ಶರೀರದ ಲಕ್ಷಣವಾಗಿದೆ. ಬೇರ್ಪಡಿಸಲಾಗದಂತೆ ಶರೀರ ಆಧಾರವಾಗಿಯೂ, ಆತ್ಮಾ ಆಧೇಯವಾಗಿಯೂ, ಆತ್ಮಾ ನಿಯಂತಾವಾಗಿಯೂ, ಶರೀರವು ನಿಯಾಮ್ಯವಾಗಿಯೂ, ಶರೀರವು ಶೇಷವಾಗಿಯೂ ಆತ್ಮಾ ಶೇಷಿಯಾಗಿಯೂ ಇದೆ.

3. **ಯಸ್ಯ ಚೇತನಸ್ಯ ...................... ತತ್ತಸ್ಯ ಶರೀರಮ್ – (ವೇದಾರ್ಥ ಸಂಗ್ರಹಃ)**
ಯಾವ ಚೇತನನ ಯಾವ ದ್ರವ್ಯವು ಸರ್ವಪ್ರಕಾರಗಳಿಂದಲೂ ತನ್ನ ಪ್ರಯೋಜನಕ್ಕಾಗಿ ನಿಯಮಿಸಲೂ, ಧರಿಸಲೂ ಶಕ್ಯವಾಗಿರುವುದೋ, ಅವನಿಗೆ ಶೇಷಭೂತವಾಗಿರುವಿಕೆಯನ್ನೇ ಸ್ವರೂಪವುಳ್ಳದ್ದಾಗಿರುವುದೋ, ಅದು ಅವನಿಗೆ ಶರೀರವಾಗಿರುತ್ತದೆ.

4. **ಯಸ್ಯಾತ್ಮಾ ಶರೀರಮ್ ಯಸ್ಯಾಕ್ಷರಮ್ ಶರೀರಮ್ – (ಶ್ವೇತಾಶ್ವತರ ಉಪನಿಷತ್)**
ಯಾವನಿಗೆ ಜೀವಾತ್ಮಾ ಶರೀರವೋ, ಯಾವಾತ್ಮನಿಗೆ ಮೂಲಪ್ರಕೃತಿ ಶರೀರವೋ

## ಸೂತ್ರ - 44

1. **ಧರ್ಮೇಣ ಪಾಪಂ ಅಪನುದತಿ – (ಯಜುರ್ವೇದ)**
ಧರ್ಮಾಚರಣೆಯಿಂದ ಪಾಪವು ಕಳೆಯುತ್ತದೆ.

2. **ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ – (ತೈ. ಉ. 2-6-50)**
ಸದ್ಧರ್ಮಾನುಷ್ಠಾನಗಳಿಂದ ಜ್ಞಾನೋತ್ಪತ್ತಿ ವಿರೋಧಿಯಾದ ಪ್ರಾಚೀನ ಕರ್ಮವು ಕ್ಷಯಿಸಿದರೆ, ನಂತರ ಜ್ಞಾನವು ಪ್ರವರ್ತಿಸುತ್ತದೆ.

3. **ಜನ್ಮಾಂತರ ........................ ಪ್ರಜಾಯತೇ। – (ಲಘುಸ್ಮೃತಿಸ್ಮೃತಿ)**
ಅನೇಕ ಜನ್ಮಗಳಲ್ಲಿ ಮಾಡಿದ ತಪಸ್ಸಿನಿಂದಲೂ, ಧಾನ್ಯದಿಂದಲೂ, ಸಮಾಧಿಯಿಂದಲೂ ನಶಿಸಿದ ಪಾಪವುಳ್ಳ ಮನುಷ್ಯರಿಗೆ ಶ್ರೀ ಕೃಷ್ಣನಲ್ಲಿ ಭಕ್ತಿ ಉಂಟಾಗುತ್ತದೆ.

## ಸೂತ್ರ - 45

1. **ಅಹೃತ ಸಹಜದಾಸ್ಯಾ ಸೂರಯಸ್ಸರಸ್ತಪಂಥಾಃ – (ಶ್ರೀರಂಗರಾಜಸ್ತವ 2-32)**
ಯಾರಿಂದಲೂ ಅಪಹರಿಸಲಾಗದಂತಹ ಸಹಜದಾಸ್ಯವನ್ನುಳ್ಳಂತಹ (ಕೈಂಕರ್ಯವನ್ನುಳ್ಳಂತಹ) ಸಂಸಾರ ಬಂಧವೇ ಇಲ್ಲದ ನಿತ್ಯಸೂರಿಗಳು.

2. **ನಿವಾಸಶಯ್ಯಾಸನ .................... ಶೇಷ ಇತೀರಿತೇ ಜನೈಃ ॥ – (ಸ್ತೋತ್ರರತ್ನಂ-40) :**
ದಿವ್ಯವಾದ ಭವನವೂ, ಶಯ್ಯೆಯೂ, ಆಸನವೂ, ಪಾದುಕೆಯೂ, ವಸ್ತ್ರವೂ, ತಲೆದಿಂಬೂ, ಮಳೆಯನ್ನೂ, ಬಿಸಿಲನ್ನೂ, ತಡೆಯುವ ಕೊಡೆಯೂ ಇವೆಲ್ಲವೂ ಯಥೋಚಿತವಾಗಿ ತಮಗೆ ಶೇಷ ಭೂತವಾಗಿರುವಿಕೆಯನ್ನು ತನ್ನ ಶರೀರ ಭೇಧಗಳಿಂದ ಹೊಂದಿ 'ಶೇಷ' ನೆಂದು ನಿತ್ಯ ಸೂರಿಗಳಿಂದ ಹೇಳಲ್ಪಡುವ (ಆದಿಶೇಷನ ಮೇಲೆ)

3. **ತ್ವದೀಯ ಭುಕ್ತೋಜ್ಝಿತ ಶೇಷ ಭೋಜಿನಾ – (ಸ್ತೋತ್ರರತ್ನ -42)**
ತಾವು ಸ್ವೀಕರಿಸಿ ಉಳಿದದ್ದನ್ನು ಭುಜಿಸುವಂತಹವರಾದ

4. **ವನಾದ್ರಿನಾಥಸ್ಯ ......................... ಸೈನ್ಯಸತ್ಪತಿಃ। – (ಸುಂದರ ಬಾಹುಸ್ತವ -74)**
ಅತ್ಯಂತ ಸುಂದರನಾಗಿರುವ, ವನಾದ್ರಿನಾಥನ ನೈವೇದ್ಯವನ್ನು ಭುಜಿಸುವ ಸೇನಾಧಿಪತಿಯಾದ ವಿಷ್ವಕ್ಸೇನರು.

5. **ಶೇಷಶೇಷಾಸನ .............. ಚರಣಯುಗಳ – (ಶ್ರೀ ವೈಕುಂಠಗದ್ಯಮ್)**
ಆದಿಶೇಷ, ಸೇನಾಧಿಪತಿಯಾದ ವಿಷ್ವಕ್ಸೇನ, ಗರುಡ ಮುಂತಾದ ನಾನಾ ವಿಧವಾದ ಎಣಿಸಲಾಗದಷ್ಟಿರುವ ಪರಿಜನರುಗಳಿಂದ ಕೈಂಕರ್ಯ ಮಾಡಿಸಿಕೊಳ್ಳುವ ಚರಣ ದ್ವಂದ್ವಗಳುಳ್ಳವನೇ।.

## ಸೂತ್ರ - 46

1. **ನಿರ್ವಾಣಮಯ ................ಸೋಽವ್ಯಯಃ। – (ಶ್ರೀವಿಷ್ಣು ಪುರಾಣ 6-7-22)**
ಈ ಜೀವಾತ್ಮನು ಜ್ಞಾನ ಸ್ವರೂಪನಾಗಿಯೂ, ನಿರ್ಮಲನಾಗಿಯೂ, ಸುಖರೂಪನಾಗಿಯೂ ಇರುತ್ತಾನೆ. ದುಃಖಮಯವಾಗಿಯೂ, ಅಜ್ಞಾನಮಯವಾಗಿಯೂ, ದೋಷಮಯವಾಗಿಯೂ ಇರುವ ಆ ಧರ್ಮಗಳು ಪ್ರಕೃತಿಯ ಗುಣಗಳು. ಆತ್ಮನ ಗುಣಗಳಲ್ಲ, ನೀರಿಗೆ ಅಗ್ನಿಯೊಡನೆ ಸಂಬಂಧಪಟ್ಟ ಪಾತ್ರೆಯ ಸಂಪರ್ಕದಿಂದ ಅಧಿಕವಾದ ಶಬ್ದ, ತಾಪ, ಮುಂತಾದವುಗಳನ್ನು ಈ ಅಗ್ನಿಯು ಹೇಗೆ ಉಂಟುಮಾಡುತ್ತದೆಯೋ, ಅದೇ ರೀತಿ ಈ ಜೀವಾತ್ಮನು ಪ್ರಕೃತಿಯೊಡನ ಏರ್ಪಟ್ಟ ಸಂಬಂಧದಿಂದ ಅಹಂಕಾರ ಮಮಕಾರಗಳಿಂದ ದೂಷಿತನಾಗಿ ಪ್ರಾಕೃತವಾದ ಧರ್ಮಗಳನ್ನು ಪಡೆಯುತ್ತಾನೆ. ನಾಶರಹಿತನಾದ ಆ ಆತ್ಮಾ ಪ್ರಾಕೃತ ಧರ್ಮಗಳಿಗಿಂತ ವಿಲಕ್ಷಣನಾದವನು.

## ಸೂತ್ರ - 47

1. **ವಿನ್ನೈ ಪ್ಪಟಲಂ ...................ಎನ್ ಕೋಲೋ – (ಪೆರಿಯ ತಿರುಮೊಳಿ -76)**
2. **ಸರ್ವ ಹ ಪಶ್ಯಃ ಪಶ್ಯತಿ - (ಛಾಂದೋಗ್ಯ .ಉ. 7-26-21)**
ಬ್ರಹ್ಮದರ್ಶಿಯಾದವನು ಸಮಸ್ತವನ್ನೂ ನೋಡುತ್ತಾನೆ.

## ಸೂತ್ರ - 49

1. **ಸರ್ವಂ ಖಲ್ವಿದಂ ಬ್ರಹ್ಮ – (ಛಾಂದೋಗ್ಯ 3-16)**
ಕಾಣಿಸುತ್ತಿರುವ ಇದೆಲ್ಲವೂ ಬ್ರಹ್ಮವೇ.

2. **ಐತದಾತ್ಮ್ಯಮಿದಂ ಸರ್ವಂ – (ಛಾಂದೋಗ್ಯ 6-7-8)**
ಕಾಣುವ ಈ ಸಮಸ್ತ ಪ್ರಪಂಚವೂ ಆ ಪರಮಾತ್ಮನನ್ನು ಆತ್ಮವಾಗಿ ಉಳ್ಳದ್ದು.

3. **ಪುರುಷ ಏ ವೇದಂ ಸರ್ವಂ – (ಪುರುಷ ಸೂಕ್ತ)**
ಕಾಣುತ್ತಿರುವ ಈ ಸಮಸ್ತ ಪ್ರಪಂಚವೂ ಪರಮ ಪುರುಷನೇ.

4. **ಏಕಸ್ಸನ್ ಬಹುಧಾ ವಿಚಾರಃ – (ಯಜುರ್ವೇದ)**
ಒಂದಾಗಿದ್ದುಕೊಂಡೇ ಬಹುಪ್ರಕಾರವಾಗಿ ವ್ಯಾಪಿಸಿರುವುದು.

5. **ನೇಹ ನಾನಾಸ್ತಿ ಕಿಂಚನ – (ಕಠೋಪನಿಷತ್)**
ಈ ಪ್ರಪಂಚದಲ್ಲಿ ಅಬ್ರಹ್ಮಾತ್ಮಕವಾದ ಅನೇಕ ಪದಾರ್ಥಗಳಾವುದೂ ಇಲ್ಲ.

6. **ನತತ್ ಸಮಶ್ಚಾಭ್ಯಧಿಕಶ್ಚ ದೃಶ್ಯತೇ – (ಶ್ವೇತಾಶ್ವತರ)**
ಆ ಬ್ರಹ್ಮನಿಗೆ ಸಮನಾದದ್ದೂ, ಅಧಿಕವಾದದ್ದೂ ಯಾವುದೂ ಕಾಣಲ್ಪಡುವುದಿಲ್ಲ.

7. **ಪುಮಾನ್‌ನದೇವೋ.....................ದೇವಾದಿಭೇದೇಽ ಪಸ್ವಸ್ತೇ। – (ಶ್ರೀ ವಿಷ್ಣು ಪುರಾಣ 2-13-98)**
ಜೀವಾತ್ಮನಾದವನು ದೇವನಲ್ಲ, ಮನುಷ್ಯನಲ್ಲ, ಪಶುವಲ್ಲ, ವೃಕ್ಷವೂ ಅಲ್ಲ , ಹೀಗೆ ನಾಲ್ಕು ವಿಧವಾದ ಭೇಧವು ಮಿಥ್ಯಾಜ್ಞಾನದಿಂದ ಉಂಟಾದುದು, ದೇವಾದಿ ಭೇಧವಾದಗಳು ಇಲ್ಲವಾದಾಗ.

8. **ಬ್ರಹ್ಮಾದ್ವೈತಂ ................ ಶಾಸ್ತ್ರ ಪ್ರತಿಪಾದ್ಯಮ್ – (ಶ್ರುತ ಪ್ರಕಾಶಿಕಾ)**
ಬ್ರಹ್ಮಾದ್ವೈತವೆಂದೂ, ಜೀವಾದ್ವೈತವೆಂದೂ, ಅದ್ವೈತವು ಎರಡು ವಿಧವಾಗಿದೆ. ಎಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

## ಸೂತ್ರ - 53

1. **ಅನೇಕ ಜನ್ಮ ..................... ವಾಸುನಾರೇಣು ಕುಂಠಿತಃ॥ – (ವಿಷ್ಣು ಪುರಾಣ 6-7-19)**
ಅನೇಕ ಜನ್ಮಗಳಲ್ಲಿ ಸಂಸಾರ ಮಾರ್ಗವನ್ನು ಹೊಂದಿ ಈ ಜೀವನು ಕರ್ಮವಾಸನೆಗಳಿಂದ ತಡೆಯಲ್ಪಟ್ಟು ಅಜ್ಞಾನದಿಂದುಂಟಾದ ದುಃಖವನ್ನು ಹೊಂದುತ್ತಾನೆ.

2. **ತದ್ವಿಜ್ಞಾನಾರ್ಥಂ ............... ತತ್ವತೋ ಬ್ರಹ್ಮವಿದ್ಯಾಂ ॥ – (ಮುಂಡಕೋಪನಿಷತ್ 1-2-12-13)**
ಆ ಶಿಷ್ಯನು ಕೈಯಲ್ಲಿ ಸಮಿತ್ತನ್ನುಳ್ಳವನಾಗಿ, ಪರಬ್ರಹ್ಮನನ್ನು ಅರಿಯಲು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವನ್ನೇ ಹೊಂದಬೇಕು. ಆ ಗುರುವೂ ಸಮೀಪಸ್ಥನಾಗಿ, ಒಳ್ಳೆಯ ಶಾಂತಮನಸ್ಸುಳ್ಳವನಾಗಿಯೂ ಬಾಹ್ಯೇಂದ್ರಿಯಗಳನ್ನು ನಿಗ್ರಹಿಸಿದವನೂ ಆದ ಆ ಶಿಷ್ಯನನ್ನು ಕುರಿತು ಯಾವ ವಿದ್ಯೆಯಿಂದ ಸತ್ಯವಾದ, ನಾಶವಿಲ್ಲದ ಪರಮಪುರುಷನನ್ನು ಅರಿಯುತ್ತಾನೋ, ಅಂತಹ ಬ್ರಹ್ಮ ವಿದ್ಯೆಯನ್ನು ಯಥಾರ್ಥವಾಗಿ ಉಪದೇಶಿಸುವವನಾಗುತ್ತಾನೆ.

## ಸೂತ್ರ - 55

1. **ನಿತ್ಯೋ ನಿತ್ಯಾನಾಂ..................... ಕಾಮಾನ್ – (ಕಠೋಪನಿಷತ್ 2-5-13)**
ನಿತ್ಯನಾದ ಒಬ್ಬ ಚೇತನನಾದ ಸರ್ವೇಶ್ವರನು, ನಿತ್ಯರುಗಳಾದ ಅನೇಕವಾಗಿರುವ ಜೀವರುಗಳಿಗೆ ಅವರ ಇಷ್ಟಗಳನ್ನು ನೀಡುತ್ತಾನೆ.

## ಸೂತ್ರ - 56

2. **ಅನ್ಯೋಂತರ ಆತ್ಮಾ ವಿಜ್ಞಾನಮಯಃ – (ತೈತ್ತಿರೀಯ ಉಪನಿಷತ್ 4-8)**
ಮನೋಮಯನಿಗಿಂತಲೂ ಬೇರೆಯಾದ ಅವನೊಳಗಿರುವ ಜ್ಞಾನ ಸ್ವರೂಪನಾದ ಜೀವನೇ ಆತ್ಮಾ.

3. **ಯಸ್ಮಿನ್ ಪದೇ ವಿರಾಜಂತೇ ಮುಕ್ತಾಃ ಸಂಸಾರ ಬಂಧನೈಃ – (ಕಠೋಪನಿಷತ್ 2-5-18)**
ಸಂಸಾರ ಬಂಧನದಿಂದ ಬಿಡಲ್ಪಟ್ಟವರು ಯಾವ ಪರಮಪದದಲ್ಲಿ ಪ್ರಕಾಶಿಸುವರೋ

## ಸೂತ್ರ - 57

1. **ಸದಾ ಪಶ್ಯಂತಿ ಸೂರಯಃ – (ಪುರುಷ ಸೂಕ್ತಂ)**
ಸರ್ವಕಾಲದಲ್ಲೂ ನಿತ್ಯ ಸೂರಿಗಳು ಪರಮಾತ್ಮನನ್ನು ಕಾಣುತ್ತಾರೆ.

2. **ಮಮ ಸಾಧರ್ಮ್ಯಂ ಆಗತಾಃ – (ಭಗವದ್ಗೀತಾ 14-2)**
ನನಗೆ ಸಮಾನವಾದ ಧರ್ಮವನ್ನು ಹೊಂದಿದವರು.

3. **ಮುಕ್ತಾನಾಂ ಪರಮಾಗತಿಃ – (ಶ್ರೀ ವಿಷ್ಣು ಸಹಸ್ರನಾಮ ಮಹಾಭಾರತ -ಆನುಶಾಸನಿಕ ಪರ್ವ 15-16)**
ಮುಕ್ತಾತ್ಮರಿಗೆ ಉತ್ಕೃಷ್ಟವಾದ ಪ್ರಾಪ್ಯನಾಗಿದ್ದಾನೆ.

4. **ಸಾಯುಜ್ಯಂ ಪ್ರತಿಪನ್ನಾಯೇ – (ಶ್ವೇತಾಶ್ವತರ ಉಪನಿಷತ್)**
ಯಾವ ಮುಕ್ತರು ಸಾಯುಜ್ಯವನ್ನು (ಪರಬ್ರಹ್ಮನಿಗೆ ಸಮಾನವಾದ ಅನುಭವ) ಹೊಂದಿರುತ್ತಾರೋ

## ಸೂತ್ರ - 65

1. **ಪೊಯ್‌ನಿನ್ರ ........................ ಉಡಮ್ಬುಂ – (ತಿರುವಿರುತ್ತಂ -1)**

## ಸೂತ್ರ - 67

1. **ಸ ಚಾಽನಂ ತ್ಯಾಯ ಕಲ್ಪತೇ – (ಶ್ವೇತಾಶ್ವತರ 5-9)**
ಆ ಮುಕ್ತಿಯನ್ನು ಹೊಂದಿದವನು ಸಮಸ್ತವನ್ನೂ ಸಾಕ್ಷಾತ್ಕರಿಸುವುದಕ್ಕೆ ಯೋಗ್ಯನಾಗಿ ಸಮರ್ಥನಾಗಿದ್ದಾನೆ.

2. **ಯಃ ಕ್ಷೇತ್ರಜ್ಞ ಶಕ್ತಿಸ್ಸಾ ವೇಷ್ಟಿತಾ ನೃಪ ಸರ್ವತಾ – (ಶ್ರೀ ವಿಷ್ಣು ಪುರಾಣ 6-7-23)**
ಸರ್ವ ಶರೀರವನ್ನು ಉಳ್ಳ ಈ ಜೀವನೆಂಬ ಶಕ್ತಿಯು ಯಾವ ಅಜ್ಞಾನದಿಂದ ಆವರಿಸಲ್ಪಟ್ಟಿದೆಯೋ.

3. **ತಯಾತಿರೋಹಿತತ್ವಾಚ್ಚ .................. ತತೋಧಿಕಾ। – (ಶ್ರೀ ವಿಷ್ಣು ಪುರಾಣ 6-7-43)**
ಅರಸನೇ । ಅಜ್ಞಾನದಿಂದ ಆವರಿಸಲ್ಪಟ್ಟಿರುವುದರಿಂದ 'ಕ್ಷೇತ್ರಜ್ಞ' ನೆಂಬ ಹೆಸರನ್ನುಳ್ಳ ಶಕ್ತಿಯು, ಸಮಸ್ತ ಭೂತಗಳಲ್ಲಿಯೂ ತಾರತಮ್ಯದಿಂದ ಇರುತ್ತದೆ. ಪ್ರಾಣವಿಲ್ಲದೆ ಇರುವ ಭೂತಗಳಲ್ಲಿ ಜೀವಶಕ್ತಿಯು ಸ್ವಲ್ಪವಾಗಿರುತ್ತದ. ಸ್ಥಾವರ ಭೂತಗಳಲ್ಲಿ ಪ್ರಾಣವಿಲ್ಲದ ಭೂತಗಳಿಗಿಂತ ಜೀವಶಕ್ತಿಯು ಅಧಿಕವಾಗಿರುತ್ತದೆ.

4. **ಇಂದ್ರಿಯಾಣಾಂ............... ಪಾದಾದಿವೋದಕಮ್ – (ಮಾನವ ಸ್ಮೃತಿ 2-99)**
ಸಮಸ್ತವಾದ ಇಂದ್ರಿಯಗಳಲ್ಲಿ ಒಂದು ಇಂದ್ರಿಯವು ವಿಷಯಗಳನ್ನು ಕುರಿತು ಹೋಗುವುದು ಎಂಬುದು ಈ ಚೇತನನ ಜ್ಞಾನವು ಚಿಕ್ಕ ರಂಧ್ರದ ಮೂಲಕ ನೀರು ಹೊರಗೆ ಹೋಗುವಂತೆ.

## ಸೂತ್ರ - 68

1. **ನಹಿ ವಿಜ್ಞಾತುರ್ವಿಜ್ಞಾತೇ ................. ವಿದ್ಯತೇ ॥ – (ಬೃ. ಉ. 6-3-23)**
ಜ್ಞಾತಾವಿಗೂ (ಅರಿಯುವವನಿಗೂ) ಜ್ಞಾನಕ್ಕೂ (ಅರಿವಿಗೂ) ನಿತ್ಯತ್ವವಾದ್ದರಿಂದ ನಾಶವು ಇಲ್ಲ. ಏಕೆಂದರೆ ದೃಷ್ಟಿಗೆ ನಾಶವಿಲ್ಲವಾದ್ದರಿಂದ.
2. **ಜ್ಞಾನಂ ವೈರಾಗ್ಯಮೈಶ್ವರ್ಯಂ ................. ನಿತ್ಯ ಏವಾತ್ಮನೋಹಿತೇ – (ವಿಷ್ಣು ಧರ್ಮ)**
ಓ ರಾಜನೇ! ಜ್ಞಾನವೂ, ವೈರಾಗ್ಯವೂ, ಐಶ್ವರ್ಯವೂ, ಧರ್ಮವೂ ಎಂಬ ಈ ನಾಲ್ಕೂ ಬ್ರಹ್ಮಭೂತನಾದ ಆತ್ಮನಿಗೆ (ಮುಕ್ತನಿಗೆ) ನಿತ್ಯವಾಗಿರುತ್ತದೆ. ಹೇಗೆಂದರೆ ಬಾವಿಯನ್ನು ತೋಡುವುದರಿಂದ ಜಲವು ಏರ್ಪಡುವುದಿಲ್ಲ. ಇರುವಂತಹ ನೀರೇ ವ್ಯಕ್ತವಾಗುತ್ತದೆ (ತೋರುತ್ತದೆ.) ಅಲ್ಲಿ ಇಲ್ಲದೇ ಇರುವ ನೀರು ಹೇಗೆ ಬರಲು ಸಾಧ್ಯ? ಹಾಗೆಯೇ ಹೇಯಗುಣವು ಕಳೆಯುವುದರಿಂದಲೇ ಜ್ಞಾನ ಮೊದಲಾದ ಸದ್ಗುಣಗಳು ಪ್ರಕಾಶಿಸುತ್ತವೆಯೇ ವಿನಃ ಅವುಗಳು ಅಲ್ಲಿ ಉತ್ಪತ್ತಿಯಾಗುವುದಿಲ್ಲ. ಆ ಜ್ಞಾನ ಮೊದಲಾದ ಗುಣಗಳು ಆತ್ಮನಿಗೆ ನಿತ್ಯವಾಗಿದೆಯಲ್ಲವೇ.

## ಸೂತ್ರ - 70

1. **ಕ್ರಿಯಾಶ್ರಯೋ ದ್ರವ್ಯಮ್. ಗುಣಾಶ್ರಯೋ ದ್ರವ್ಯಮ್ – (ತರ್ಕ ಸಂಗ್ರಹ)**
ಕ್ರಿಯೆಗೆ ಆಶ್ರಯವಾಗಿರುವುದು ದ್ರವ್ಯ. ಗುಣಕ್ಕೆ ಆಶ್ರಯವಾಗಿರುವುದು ದ್ರವ್ಯ.
2. **ಆಶ್ರಯಾದನ್ಯತೋ ............... ಉಪಪದ್ಯತೇ – (ಸಿದ್ಧಿತ್ರಯಂ)**
ಆಶ್ರಯಕ್ಕಿಂತಲೂ ಬೇರೆಡೆಯಲ್ಲಿ ಇರುವುದರಿಂದಲೂ, ಆಶ್ರಯದೊಡನೆ ಕೂಡಿರುವುದರಿಂದಲೂ ದ್ರವ್ಯತ್ವವೂ, ಗುಣತ್ವವೂ, ಧರ್ಮಭೂತಜ್ಞಾನಕ್ಕೆ ಹೊಂದುತ್ತದೆ.

## ಸೂತ್ರ - 75

1. **ಜಗತ್ಸರ್ವಂ ಶರೀರಂ ತೇ – (ರಾಮಾಯಣ ಯು. ಕಾಂ. 120-126)**
ಲೋಕವೆಲ್ಲವೂ ನಿನಗೆ ಶರೀರವಾಗಿದೆ.
2. **ತಾನಿ ಸರ್ವಾಣಿ ತದ್ವಪುಃ – (ವಿ. ಪು. 1-22-86)**
ಅವೆಲ್ಲವೂ ಅವನಿಗೆ ಶರೀರ.
3. **ತತ್ಸರ್ವಂ ವೈ ಹರೇಸ್ತನುಃ – (ವಿ.ಪು. 1-22-78)**
ಅವೆಲ್ಲವೂ ಹರಿಯ ಶರೀರವಲ್ಲವೇ?

## ಸೂತ್ರ - 76

1. ವಸ್ತ್ವೇಕ ಮೇವ ದುಃಖಾಯ .................. ಕಿಂಚಿತ್ ಸುಖಾತ್ಮಕಮ್ – (ಶ್ರೀ ವಿಷ್ಣು ಪುರಾಣಮ್)
ಯಾವ ಕಾರಣದಿಂದ ಒಂದು ವಸ್ತುವು ದುಃಖಕ್ಕೂ ಸುಖಕ್ಕೂ ಅಸೂಯೆಯುಂಟುಮಾಡುವುದಕ್ಕೂ. ಕೋಪಕ್ಕೂ ಕಾರಣವಾಗುತ್ತದೆಯೋ, ಆ ವಸ್ತು ಒಂದೇ ವಿಧವಾಗಿ ಇರಲು ಹೇಗೆ ಸಾಧ್ಯ? ಯಾವ ಕಾರಣದಿಂದ ಒಂದು ವಸ್ತು ಪ್ರಿಯವಾಗಿ ಮತ್ತೆ ಅದೇ ದುಃಖವುಂಟುಮಾಡುವುದಾಗಿ ಆಗುವುದೋ ಅದೇ ಕೋಪವನ್ನು ಮತ್ತೆ ತಾಳ್ಮೆಯನ್ನು ಉಂಟುಮಾಡುವುದೋ, ಆ ಕಾರಣದಿಂದಲೇ ಯಾವುದೂ ದುಃಖಾತ್ಮಕವೂ ಅಲ್ಲ ಹಾಗೆಯೇ ಸುಖಾತ್ಮಕವೂ ಅಲ್ಲ.

|| ಚಿತ್ ಪ್ರಕರಣಂ ಸಂಪೂರ್ಣಮ್||

|| ವಾನಮಾಮಲೈ ಜೀಯರ್ ತಿರುವಡಿಗಳೇ ಶರಣಮ್ ||

# ಅಚಿತ್ ಪ್ರಕರಣಮ್

## ಸೂತ್ರ - 3

1. **ಕ್ಷಯಂತಮಸ್ಯ ರಜಸಃ ಪರಾಕೇ – (ಯಜು, 2 ಕಾಂಡ 2 ಪ್ರಶ್ನೆ)**
ರಜೋಮಯವಾದ ಪ್ರಪಂಚಕ್ಕೆ ಮೇಲಾದ ಪರಮ ಪದದಲ್ಲಿ ನಿತ್ಯರೊಡನೆ ಬಿಜಯಮಾಡಿಸಿರುವ.

2. **ಆದಿತ್ಯವರ್ಣಂ ತಮಸಸ್ತು ಪಾರೇ – (ಪುರುಷ ಸೂಕ್ತ)**
ಬೆಳಗುವ ಸೂರ್ಯನ ಕಾಂತಿಯಿಂದ ಇರುವುದು. ಈ ಪ್ರಕೃತಿಗಿಂತ ಆಚೆಗೆ ಇರುವುದು.

3. **ತಮಸಃ ಪರಸ್ತಾತ್ – (ಪುರುಷ ಸೂಕ್ತ)**
ಪ್ರಕೃತಿಗಿಂತ ಮೇಲಾಗಿ ಅಚೆ ಇರುವ.

4. **ಪಂಚಶಕ್ತಿಮಯೇ ದಿವ್ಯೇ ಶುದ್ಧಸತ್ವೇ ಸುಖಾಕರೇ – (ತೈತ್ತಿರೀಯ ಉಪನಿಷತ್)**
ಪರಮೇಷ್ಠಿ, ಪುಮಾನ್, ವಿಶ್ವಂ, ನಿವೃತ್ತಿಃ, ಸರ್ವಃ ಎಂಬ ಐದು ಶಕ್ತಿಗಳನ್ನು ಸ್ವರೂಪವಾಗುಳ್ಳ, ಸುಖಕ್ಕೆ ಸ್ಥಾನವಾಗಿರುವ ಶುದ್ಧ ಸತ್ವದಲ್ಲಿ. (ಪರಮ ಪದದಲ್ಲಿ)

5. **ತದಕ್ಷರೇ ಪರಮೇ ವ್ಯೋಮನ್ – (ತೈ. ಉ. 2-12)**
ಅದು ನಾಶವಿಲ್ಲದ ಪರಮಾಕಾಶದಲ್ಲಿ.

6. **ಕಾಲಾತೀತ ............. ಸನ್ಯಸ್ತಮಾನಸೈಃ**
ಯಾವ ಪರಮ ಪದವು ತ್ರಿಕಾಲವನ್ನೂ ಮೀರಿದುದಾಗಿಯೂ, ಆದಿ ಅಂತ್ಯವಿಲ್ಲದ್ದಾಗಿಯೂ, ಅಪ್ರಾಕೃತವಾಗಿಯೂ, ಅಚಲವಾಗಿಯೂ ನನ್ನಲ್ಲಿ ನೆಟ್ಟ ಮನಸ್ಸುಳ್ಳ ಸತ್ಪುರುಷರುಗಳಿಂದ ಅರ್ಚಿರಾದಿ ಮಾರ್ಗದಲ್ಲಿ ಹೊಂದತಕ್ಕದ್ದಾಗಿಯೋ.

7. **ಯತ್‌ತತ್ ಪುರಾಣಮಾಕಾಶಮ್ ಸರ್ವಸ್ಮಾತ್ ಪರಮಂ ಧ್ರುವಂ ಯತ್ಪದಂ ಸರ್ವಕಿಲ್ಬಿಷೈಃ**
ಯಾವ ಪ್ರಸಿದ್ಧವಾದ ಪರಮಪದ ಸ್ಥಾನವು ಅನಾದಿಯಾಗಿಯೂ ಪರಮಾಕಾಶ ಪದ ವಾಚ್ಯವಾಗಿಯೂ, ಎಲ್ಲಕ್ಕಿಂತ ಉತ್ಕೃಷ್ಟವಾಗಿಯೂ, ಸ್ಥಿರವಾಗಿಯೂ, ಇರುವುದೋ, ಯಾವ ಪರಮಪದವನ್ನು ಹೊಂದಿ ತತ್ತ್ವವನ್ನರಿತವರು ಸಮಸ್ತ ಪಾಪಗಳಿಂದಲೂ ಬಿಡಲ್ಪಡುತ್ತಾರೋ.

8. **ದೇವಾನಾಂ ಪೂರಯೇಧ್ಯಾ ............. ಪುರೀಮ್ – (ಅರಣ್ಯಕ-1)**
ದೇವತೆಗಳ ಪಟ್ಟಣವಾದರೋ 'ಆಯೋಧ್ಯೆ' ಎಂದು ಹೆಸರನ್ನುಳ್ಳದ್ದು. ಅಲ್ಲಿ ಸ್ವರ್ಣಮಯವಾದ ಬೊಕ್ಕಸವಿದೆ. ಮುಕ್ತನು ಪರಬ್ರಹ್ಮನ ಅಮೃತದಿಂದ ಆವರಿಸಲ್ಪಟ್ಟ ಆ ಪಟ್ಟಣವನ್ನು ಅರಿಯುತ್ತಾನೆ.

9. **ಅಪರಾಜಿತಾ ಪೂರ್ ಬ್ರಹ್ಮಣಃ – (ಅರಣ್ಯಕ)**
ಆ ಬ್ರಹ್ಮನ ಪಟ್ಟಣವು ಜಯಿಸಲಾಗದಂತಹುದು. (ಪರಮ ಪದವು ಅಪರಾಜಿತಾ ಎಂಬ ಹೆಸರನ್ನುಳ್ಳದ್ದು)

10. **ಪ್ರಜಾ ಪತೇ ಸ್ಸಭಾಂ ವೇಶ್ಮಪ್ರಪದ್ಯೇ – (ಛಾಂದೋಗ್ಯ ಉಪನಿಷತ್ 8-14-1)**
ಆ ಉಪಾಸಕನು ಪರಬ್ರಹ್ಮನ ಸಭಾರೂಪವಾದ ಗ್ರಹದಲ್ಲಿ ಪ್ರವೇಶಿಸುವನು.

11. ದಿವ್ಯಾವರಣ ಶತ ಸಹಸ್ರೈರಾವೃತೇ ............... ದಿವ್ಯಾ ಸ್ಥಾನ ಮಂಡಪೇ – (ವೈಕುಂಠ ಗದ್ಯಮ್)
ದಿವ್ಯವಾದ ನೂರಾರು ಆವರಣಗಳಿಂದ ಕೂಡಿದ, ದಿವ್ಯವಾದ ಕಲ್ಪವೃಕ್ಷಗಳಿಂದ ಪ್ರಕಾಶಿಸುವ , ದಿವ್ಯವಾದ ನೂರಾರು ಕೋಟಿ ಉದ್ಯಾನವನಗಳಿಂದ ಶೋಭಿಸುವ, ಎಲ್ಲ ಅಳತೆಗಳನ್ನು ಅತಿಕ್ರಮಿಸುವಷ್ಟು ಅಧಿಕವಾಗಿಯೂ ಇರುವ, ಒಂದು ದಿವ್ಯವಾದ ಸ್ಥಾನದಲ್ಲಿ ವಿಚಿತ್ರವಾದ ದಿವ್ಯರತ್ನಮಯವಾದ ದಿವ್ಯಾಸ್ಥಾನ ಮಂಟಪದಲ್ಲಿ.

12. ನ ತತ್ರ ಸೂರ್ಯೋ................... ಕುತೋಯಮಗ್ನಿಃ – (ಕಠೋಪನಿಷತ್-2)
ಆ ಪರಬ್ರಹ್ಮನ ಸ್ಥಾನದಲ್ಲಿ ಸೂರ್ಯನು ಪ್ರಕಾಶಿಸುವುದಿಲ್ಲ, ಚಂದ್ರನ ನಕ್ಷತ್ರಗಳ ಪ್ರಕಾಶವಿಲ್ಲ, ಮಿಂಚುಗಳ ಪ್ರಕಾಶವಿಲ್ಲ. ಈ ಅಗ್ನಿಯಾದವನು ಅಲ್ಲಿ ಎಲ್ಲ ತಾನೇ ಆಗಿ ಪ್ರಕಾಶಿಸುತ್ತಾನೆ.

13. ಅತ್ಯರ್ಕಾನಲ ದೀಪ್ತಂ ............ ದೇವತಾನ ವೈಃ – (ಮಹಾಭಾರತ -ಅರಣ್ಯಪರ್ವ)
ಮಹಾರಾಜನೇ। ಸೂರ್ಯ ಚಂದ್ರಾಗ್ನಿಗಳಿಗಿಂತ ಕೋಟಿಸೂರ್ಯನಂತೆ ಬೆಳಗುವ ಮಹಾತ್ಮನಾದ ವಿಷ್ಣುವಿನ ಆ ಸ್ಥಾನವು ತನ್ನ ಕಾಂತಿಯಿಂದ ದೇವಾಸುರರುಗಳಿಂದಲೂ ಕಾಣಲಾಗದಂತಿದೆ.

14. ತೇಷಾಮಪಿ .................. ಪರಿಚ್ಛೇತ್ತುಮಯೋಗ್ಯೇ – (ಶ್ರೀವೈಕುಂಠ ಗದ್ಯ)
ಆ ನಿತ್ಯಸೂರಿಗಳಿಗೂ ಇಷ್ಟು ಪರಿಮಾಣವುಳ್ಳದ್ದು, ಇಷ್ಟು ಐಶ್ವರ್ಯವುಳ್ಳದ್ದು, ಇಂತಹ ಸ್ವಭಾವವುಳ್ಳದ್ದು ಎಂಬುದಾಗಿ ಪರಿಚ್ಛೇದಿಸಲು ಸಾಧ್ಯವಿಲ್ಲದ್ದು.

15. ದೇವಿ ತ್ವನ್ಮಹಿಮಾವಧಿರ್ ............ ಭ್ರಾಂತ್ಯೋಯ ಮಿತ್ಯುಚ್ಯತೇ – (ಶ್ರೀ ಸ್ತವಂ. 8)
ಹೇ ದೇವಿ। ನಿನ್ನ ಮಾಹಾತ್ಮ್ಯದ ಸೀಮೆಯು ವಿಷ್ಣುವಿನಿಂದಲೂ, ಅರಿಯಲ್ಪಡಲಿಲ್ಲ, ನಿಮ್ಮಿಂದಲೂ ಅರಿಯಲ್ಪಡಲಿಲ್ಲ, ಹೀಗಿದ್ದರೂ ನಿಮಗೆ ಸರ್ವಜ್ಞತ್ವವು ಸ್ವಲ್ಪವೂ ಕಡಿಮೆಯಾಗಲಿಲ್ಲ, ಯಾವುದು ಇಲ್ಲವೋ ಅದರ ಅಜ್ಞಾನವನ್ನು ಸರ್ವಜ್ಞತೆಗೆ ಅನುಗುಣವಾಗಿ ಅರಿಯುತ್ತಾರೆ. ಆಕಾಶ ಕಮಲವನ್ನು (ಇಲ್ಲದೇ ಇರುವುದನ್ನು) 'ಹೀಗಿದೆ' ಎಂದು ತಿಳಿಯುವವನು 'ಭ್ರಾಂತಿಯುಳ್ಳವನು' ಎನಿಸುತ್ತಾನೆ.

## ಸೂತ್ರ - 4

1. ಇಹ ಜಡಮಾದಿಮಾಂ ಕೇಚಿದಾಹುಃ – (ತತ್ವಮುಕ್ತಾಕಲಾಪಂ)
ಇಲ್ಲಿ ಶುದ್ಧ ವಸ್ತುವನ್ನು ಜಡವೆಂಬುದಾಗಿ ಕೆಲವರು ಹೇಳುತ್ತಾರೆ.

## ಸೂತ್ರ - 6

1. ಯೋ ವೇತ್ತಿ .................. ಪ್ರಚಕ್ಷ್ಮಹೇ – (ನ್ಯಾಯತತ್ತ್ವಂ)
ಯಾವ ಸರ್ವೇಶ್ವರನು ಏಕಕಾಲದಲ್ಲಿ ಸಮಸ್ತವನ್ನೂ ಪ್ರತ್ಯಕ್ಷವಾಗಿ ಸರ್ವಕಾಲದಲ್ಲಿಯೂ ಸ್ವಯಂ ಆಗಿ ಅರಿಯುತ್ತಾನೋ ಆ ಪರಮಾತ್ಮನನ್ನು ನಮಸ್ಕರಿಸಿ ನ್ಯಾಯತತ್ವವೆಂಬ ಶಾಸ್ತ್ರವನ್ನು ಹೇಳುತ್ತೇನೆ.

2. ಧಿಯಃ ಸ್ವಯಂ ........ ನಿಯಮ್ಯತೇ। – (ಶ್ರೀ ರಹಸ್ಯತ್ರಯಸಾರ)
ಮುಕ್ತಾವಸ್ಥೆಯಲ್ಲಿ ಏರ್ಪಡುವ ಧರ್ಮಭೂತಜ್ಞಾನದ ಸ್ವಾಭಾವಿಕವಾದ ಸ್ವಯಂಪ್ರಕಾಶತ್ವವು,

ಬದ್ಧಾವಸ್ಥೆಯ ಒಂದು ಕಾಲದಲ್ಲಿ ಹೇಗೆ ತಡೆಯಲ್ಪಟ್ಟಿತೋ ಹಾಗೆಯೇ ಇಲ್ಲೂ ನಿಯಮಿಸಲ್ಪಡುತ್ತದೆ. (ಅಂದರೆ ಶುದ್ಧ ಸತ್ವವು ಬದ್ಧರಿಗೆ ಪ್ರಕಾಶಿಸುವುದಿಲ್ಲ ಎಂದರ್ಥ)

## ಸೂತ್ರ - 9

1. **ತ್ರಿಗುಣಂ ತಜ್ಞಗದ್ಯೋನಿರನಾದಿ ಪ್ರಭವಾಪ್ಯಯಮ್ – (ವಿ.ಪು. 1-2-23)**
ಅನಾದಿಯಾಗಿಯೂ, ಉತ್ಪತ್ತಿನಾಶವಿಲ್ಲದ್ದಾಗಿಯೂ, ಸತ್ವರಜಸ್ತಮಸ್ ಎಂಬ ತ್ರಿಗುಣಗಳಿಂದ ಕೂಡಿದ ಆ ಪ್ರಕೃತಿಯು ಜಗತ್ತಿಗೆಲ್ಲಾ ಕಾರಣವಾಗಿದೆ.

2. **ತ್ರಿಗುಣಂ ಕರ್ಮಿಣಾಂ ಕ್ಷೇತ್ರಂ ಪ್ರಕೃತೇ; ರೂಪಮುಚ್ಯತೇ – (ಪರಮ ಸಂಹಿತೆ)**
ತ್ರಿಗುಣವನ್ನುಳ್ಳ ಪ್ರಕೃತಿ ಪುಣ್ಯಪಾಪ ರೂಪ ಕರ್ಮಗಳನ್ನುಳ್ಳವರಿಗೆ ಅದರ ಫಲವಾದ ಸುಖ ದುಃಖಗಳನ್ನು ಅನುಭವಿಸುವ ಸ್ಥಾನವಾಗಿದೆ ಎಂದು ಪ್ರಕೃತಿಯ ರೂಪವು ಹೇಳಲ್ಪಡುತ್ತದೆ.

3. **ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ – (ಭಗವದ್ಗೀತೆ 14-5)**
ಸತ್ವ, ರಜಸ್, ತಮಸ್ ಎಂಬ ಮೂರುಗುಣಗಳೂ ಪ್ರಕೃತಿಯಿಂದ ಉಂಟಾದವು.

4. **ಅಹೃತಸಹಜ ದಾಸ್ಯಾ ............. ಸ್ಥಾವರಾಶ್ರಯಂತೇ – (ಶ್ರೀರಂಗರಾಜಸ್ತವ1-33)**
ತಡೆಯಿಲ್ಲದೆ, ಸ್ವತ ಸ್ಸಿದ್ಧವಾಗಿರುವ ಭಗವತ್ ಕೈಂಕರ್ಯವುಳ್ಳ ನಿತ್ಯಸೂರಿಗಳೂ, ಕಳೆಯಲ್ಪಟ್ಟ ಕರ್ಮ ಸಂಬಂಧವುಳ್ಳ ಮುಕ್ತರೂ, ನಿರ್ಮಲವಾದ ಚರಮದೇಹವುಳ್ಳ ಮುಮುಕ್ಷುಗಳೂ, ಎಂದು ಹೇಳಲ್ಪಡುವವರುಗಳೂ ಮಹಾತ್ಮರಾದ ಮನುಷ್ಯ, ತಿರ್ಯಕ್, ಸ್ಥಾವರಗಳಾಗಿ ಶ್ರೀರಂಗಸ್ಥಾನವನ್ನು ಆಶ್ರಯಿಸುತ್ತಾರೆ.

5. **ಅನೀಶಯಾ ಶೋಚತಿ ಮುಹ್ಯಮಾನಃ – (ಮುಂಡಕೋಪನಿಷತ್ 3-1-2)**
ಭೋಗ್ಯಭೂತವಾದ ಪ್ರಕೃತಿಯಿಂದ ಮುಚ್ಚಲ್ಪಟ್ಟವನಾಗಿ ದುಃಖಿಸುತ್ತಾನೆ.

6. **ಅನಾದಿ ಮಾಯಯಾ ಸುಪ್ತಃ – (ಮಾಂಡೂಕ್ಯ ಉಪನಿಷತ್ 2-21)**
ಅನಾದಿಯಾದ ಮಾಯೆಯಿಂದ ನಿದ್ರೆಗೆ ಒಳಗಾದವನು.

7. **ಭಗವನ್ಮಾಯಾ ತಿರೋಹಿತ ಸ್ವಪ್ರಕಾಶಃ – (ಶರಣಾಗತಿ ಗದ್ಯಂ)**
ಪರಮಾತ್ಮನ ಮಾಯೆಯಾದ ಪ್ರಕೃತಿ ಸಂಬಂಧದಿಂದ ಮುಚ್ಚಲ್ಪಟ್ಟ ತನ್ನ ಪ್ರಕಾಶವುಳ್ಳವನು.

8. **ಭಗವತ್ ಸ್ವರೂಪ ತಿರೋಧಾನಕರೀಂ ವಿಪರೀತ ಜ್ಞಾನ ಜನನೀಂ – (ಶರಣಾಗತಿ ಗದ್ಯ)**
ಭಗವಂತನ ಸ್ವರೂಪವನ್ನು ಮರೆಸುವಂತಹ, ವಿಪರೀತ ಜ್ಞಾನವನ್ನುಂಟುಮಾಡುವ

9. **ಗೌರನಾದ್ಯನಂತವತೀ ಸಾ ಜನಿತ್ರೀಭೂತ ಭಾವಿನೀ – (ಮಂತ್ರಿಕೋಪನಿಷತ್)**
ಪ್ರಕೃತಿಯು ಆದಿ ಅಂತ್ಯವಿಲ್ಲದ್ದು, ಅದು ಸಮಷ್ಟಿ ಸೃಷ್ಟಿ ಮಾಡುವಂತಹುದು, ಮತ್ತು ವ್ಯಷ್ಟಿ ಸೃಷ್ಟಿಯನ್ನು ಮಾಡುವಂತಹುದು.

10. ಅಚೇತನಾ ಪರಾರ್ಥತಾ ಚ ನಿತ್ಯಾ ಸತತ ವಿಕ್ರಿಯಾ – (ಪರಮ ಸಂಹಿತಾ)
ಅಚೇತನವಾಗಿಯೂ, ಪರರಿಗಾಗಿಯೇ ಇರುವುದೂ, ನಿತ್ಯವಾಗಿ, ಸರ್ವಕಾಲದಲ್ಲೂ ವಿಕಾರವನ್ನುಳ್ಳದ್ದೂ ಆಗಿದೆ.

11. ವಿಕಾರ ಜನನೀಂ ಅಜ್ಞಾಂ ಅಷ್ಟ ರೂಪಾಮಜಾಂ ಧ್ರುವಾಂ – (ಮಂತ್ರಿಕೋಪನಿಷತ್)
ವಿಕಾರಾಸ್ಪದವಾಗಿಯೂ, ಜ್ಞಾನ ಶೂನ್ಯವಾಗಿಯೂ, ಎಂಟು ರೂಪವುಳ್ಳದ್ದಾಗಿಯೂ, ಹುಟ್ಟಿಲ್ಲದುದಾಗಿಯೂ, ಶಾಶ್ವತವಾಗಿಯೂ ಇರುವುದು.

12. ಕ್ರೀಡತೋ ಬಾಲಕ ಸ್ಯೇವ ಚೇಷ್ಟಾಂ ತಸ್ಯ ನಿಶಾಮಯ – (ಶ್ರೀ ವಿ. ಪು. 1-2-18)
ಆಟವಾಡುವ ಮಕ್ಕಳಂತಿರುವ ಆ ವಿಷ್ಣುವಿನ ಚೇಷ್ಟೆಗಳನ್ನು ಕೇಳು.

13. ಅಪ್ರಮೇಯೋ................. ಕ್ರೀಡನಕೈರಿವ – (ವಿ.ಪು. 1-2-20)
ಅಳೆಯಲು ಅಸಾಧ್ಯವಾದಂತಹವನಾಗಿಯೂ, ಅವಾಪ್ತ ಸಮಸ್ತಕಾಮನಾಗಿಯೂ, ಸರ್ವವನ್ನೂ ವಶಪಡಿಸಿಕೊಳ್ಳುವಂತಹವನಾಗಿಯೂ, ಇರುವ ಭಗವಂತನು ಲೀಲಾವಿಭೂತಿಯಲ್ಲಿ ಭೂತಗಳಿಂದಾದ ಕ್ರೀಡಾ ಸಾಧನಗಳಾದ ಚೆಂಡು ಮೊದಲಾದವುಗಳಿಂದ ಬಾಲಕನಂತೆ ಸಂತೋಷಿಸುತ್ತಾನೆ.

14. ತ್ವಂ ನ್ಯಂ ಚ .................. ಜಂತುಭಿಃ – (ವಿಷ್ಣು ಧರ್ಮ ಪುರಾಣ)
ಹೇ ಹರಿಯೇ - ನೀನು ಕೆಳಗಿರುವುದೂ, ಮೇಲಿರುವುದೂ ಆದ ಕರ್ಮಸೂತ್ರಗಳಿಂದ ಕಟ್ಟಲ್ಪಟ್ಟ ಆಟಕ್ಕಾಗಿ ಇರುವ ಚೆಂಡಿನಂತೆ ಜಂತುಗಳಿಂದ ಆಟವಾಡುವೆ.

15. ಸಿತಾ ಸಿತಾ ಚ ರಕ್ತಾ ಚ ಸರ್ವಕಾಮಧುಕಾ ವಿಭೋಃ – (ಯಜುರ್ವೇದ)
ಬಿಳಿದಾಗಿಯೂ, ಕಪ್ಪಾಗಿಯೂ, ಕೆಂಪಾಗಿಯೂ,ಭಗವಂತನಿಗೆ ಸಮಸ್ತ ಕಾಮುಗಳನ್ನು ನೀಡುವುದಾಗಿಯೂ ಇರುವುದು.

16. ದೈವೀ ಹ್ಯೇಷಾ ....................... ತರಂತಿತೇ – (ಭಗವದ್ಗೀತೆ 7-14)
ಈ ತ್ರಿಗುಣಾತ್ಮಕವಾದ ಪ್ರಕೃತಿಯು ಯಾವ ಕಾರಣದಿಂದ ಕ್ರೀಡೆಯಲ್ಲಿ ಪ್ರವರ್ತಿಸಿತೋ ಅದೇ ಕಾರಣದಿಂದ ದಾಟಲು ಅಸಾಧ್ಯವಾಗಿದೆ. ಸತ್ವ ಸಂಕಲ್ಪ ವಿಶಿಷ್ಟವಾದ ನನ್ನನ್ನೇ ಯಾರು ಶರಣಾಗುತ್ತಾರೋ ಅವರು ಮಾತ್ರವೇ ಈ ಮಾಯೆಯನ್ನು ದಾಟುತ್ತಾರೆ.

17. ಗುಣಸಾಮ್ಯ ಮನುದ್ರಿಕ್ತ ಮನ್ಯೂನಮ್
ಗುಣಸಾಮ್ಯವಿರುವಾಗ ಅಧಿಕವಾಗಿಲ್ಲದೆಯೂ, ಕಡಿಮೆಯಿಲ್ಲದಾಗಿಯೂ, ಇರುವುದು.

## ಸೂತ್ರ - 10

1. ಮೂಲ ಪ್ರಕೃತಿಃ ಅವಿಕೃತಿಃ
ಮೂಲ ಪ್ರಕೃತಿಯು ವಿಕಾರವಿಲ್ಲದ್ದು.

2. ಪ್ರಕೃತಿಶ್ಚ ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್ – (ಬ್ರಹ್ಮಸೂತ್ರ 1-4-23)
ಉಪಾದಾನ ಕಾರಣವು ಬ್ರಹ್ಮ ಎಂದು ಅಂಗೀಕರಿಸಬೇಕು. ಹೇಗೆಂದರೆ 'ಏಕ ವಿಜ್ಞಾನೇನ ಸರ್ವ ವಿಜ್ಞಾನಂ ಭವತಿ' ಎಂಬ ಪ್ರತಿಜ್ಞೆಗೂ ದೃಷ್ಟಾಂತಕ್ಕೂ ವಿರೋಧವು ಬಾರದಿರುವುದಕ್ಕಾಗಿ.

## ಸೂತ್ರ - 13

1. **ಅವ್ಯಕ್ತಮಕ್ಷರೇ .........ಏಕೀ ಭವತಿ – (ಸುಬಾಲೋಪನಿಷತ್)**

ಸಂಹಾರ ಸಮಯದಲ್ಲಿ ಅವ್ಯಕ್ತಾವಸ್ಥೆಯು ಅಕ್ಷರಾವಸ್ಥೆಯಾಗಿ ಲಯಿಸುತ್ತದೆ. ಅಕ್ಷರವೂ ಲಯವಾಗಿ ಅತಿ ಸೂಕ್ಷ್ಮವಾಗಿ, ತಮಶ್ಶಬ್ದ ವಾಚ್ಯವಾಗಿ ಲಯಿಸುತ್ತದೆ. ಅದೂ ನಾಮರೂಪ ವಿಭಾಗ ಅನರ್ಹವಾಗುವಂತೆ ಸರ್ವೇಶ್ವರನಲ್ಲಿ ಏಕೀಭವಿಸುತ್ತದೆ.

2. **ಪ್ರಾದುರಾಸೀತ್ ತಮೋನುದಃ**

ತಮೋವಸ್ಥೆಯನ್ನು ಕಳೆದುಕೊಂಡು ವಿಭಕ್ತವಾಗಿ ಕಾರ್ಯೋನ್ಮುಖವಾಗುವುದು.

3. **ಗುಣ ವೈಷಮ್ಯ .............. ಇತಿ ವಿವೇಕಃ – (ಶ್ರುತಪ್ರಕಾಶಿಕಾಚಾರ್ಯರ ಸುಬಾಲೋಪನಿಷತ್ ವ್ಯಾಖ್ಯಾನ)**

ಮೂರು ಗುಣ ವೈಷಮ್ಯವುಳ್ಳ ಅವಸ್ಥೆಗೆ ಮುಂಚಿನದು ಗುಣ ಸಾಮ್ಯಾವಸ್ಥೆ. ಸಾಮ್ಯವಾಗಿರುವುದು **'ಅವ್ಯಕ್ತಾ'**ವಸ್ಥೆ. ಯಾವ ಅವಸ್ಥೆಯಲ್ಲಿ ಗುಣ ಸಾಮ್ಯ, ವೈಷಮ್ಯಗಳೆರಡೂ ವ್ಯಕ್ತವಾಗಿ ಕಂಡು ಬರುವುದಿಲ್ಲವೋ, ಆ ಅವಸ್ಥೆಯನ್ನು ಹೊಂದಿರುವಲ್ಲಿ ಚೇತನ ಸಮೂಹವು ಅಡಗಿರುವುದು. ಅದು **'ಅಕ್ಷರ'** ಶಬ್ದದಿಂದ ಹೇಳಲ್ಪಡುವುದು. ಏಕೆಂದರೆ ಜೀವನು ಮಾತ್ರವೇ ಅಕ್ಷರ ಶಬ್ದ ವಾಚ್ಯನಲ್ಲ. ಅದು ಅವ್ಯಕ್ತಾಕಾರವಾಗಿಯೂ, ತಮಸ್ಸಿಗೆ ಕಾರ್ಯವಾಗಿಯೂ ಇರುವುದರಿಂದಲೂ, ಉತ್ಪತ್ತಿಯಾಗದೇ ಇರುವುದರಿಂದಲೂ; ಪ್ರಕೃತಿ ತತ್ವದಿಂದಾರಂಭಿಸಿ ಪೃಥಿವೀ ತತ್ವದವರೆಗಿನ ತತ್ವಗಳೆಲ್ಲವನ್ನೂ ಚೇತನಾ ಚೇತನ ಸ್ವರೂಪಗಳಾಗಿ ಭಾವಿಸಬೇಕು. **'ಪ್ರಧಾನ'** -ಎಂದರೆ ಮೂಲ ಪ್ರಕೃತಿಯಿಂದಾರಂಭಿಸಿ ವಿಶೇಷದವರೆಗೆ ಚೇತನವಾಗಿಯೂ ಅಚೇತನವಾಗಿಯೂ ಇರುತ್ತದೆ. ಎಂಬುದು ಪರಾಶರ ವಚನವನ್ನು ಆಧರಿಸಿದ್ದು. ಇಲ್ಲಿ ಚೇತನ ಸಮಷ್ಟಿ ಗರ್ಭವಾದ ವಸ್ತುವಿನಲ್ಲಿ 'ಅಕ್ಷರ' ಶಬ್ದವು ಔಪಚಾರಿಕವಾಗಿ ಹೇಳಲ್ಪಟ್ಟಿದೆ. ಶಬ್ದದ ಪ್ರಯೋಜನವು ಅನ್ಯಥಾ ಸಿದ್ಧವಾಗಿರುವಾಗ ಬೇರೆ ಶಕ್ತಿಯನ್ನು ಕಲ್ಪಿಸಬಾರದು ಎಂದು ಚಿತ್ ಗರ್ಭ ಪ್ರಕಾರವೂ (ಚೇತನನ್ನು ತನ್ನಲ್ಲಿ ಉಳ್ಳ) ಅಚಿತ್ವವೂ ಯಾವ ಅವಸ್ಥೆಯಲ್ಲಿ ಬೇರ್ಪಡಿಸಿ ಅರಿಯಲು ಸಾಧ್ಯವಾಗಿರುವುದೋ ಅಂತಹ ಅತಿ ಸೂಕ್ಷ್ಮವಾದ ಅವಸ್ಥೆಯು **'ಪ್ರಧಾನ '**. **'ತಮಸ್ '**ಶಬ್ದಗಳಿಂದ ಹೇಳಲ್ಪಡುವುದು. ಅಕ್ಷರಾವಸ್ಥೆಯನ್ನು ಹೊಂದಲು ಉನ್ಮುಖವಾಗಿರುವ ಆದೇ 'ತಮಸ್' **'ವಿಭಕ್ತ ತಮಸ್'** ಎನಿಸುತ್ತದೆ. ಹಾಗ ಉನ್ಮುಖವಾಗಿಲ್ಲದಿದ್ದರೆ **'ಅವಿಭಕ್ತ ತಮಸ್'** ಎನಿಸುತ್ತದೆ. ಇದು ಪರಮಾತ್ಮನ ಶರೀರವೆಂದು ಭಾವಿಸಲೂ ಅಶಕ್ಯವಾಗಿ, ನೀರಲ್ಲಿ ಕರಗಿದ ಉಪ್ಪು, ಚಂದ್ರಕಾಂತಶಿಲೆಯ ನೀರು, ಸೂರ್ಯಕಾಂತ ಶಿಲೆಯ ಅಗ್ನಿ, ಇವುಗಳಂತೆ ಇದ್ದು, ಸರ್ವಜ್ಞನಾದ ಪರಮಾತ್ಮನೊಬ್ಬನಿಂದ ಮಾತ್ರ ಅರಿಯಲ್ಪಡುವುದಾಗಿಯೂ ಇರುತ್ತದೆ. ಭೂಮಿಯಲ್ಲಿ ಬಿತ್ತಿದ ಬೀಜದಂತಿರುವ. 'ಅವಿಭಕ್ತ ತಮಸ್' ನೀರೊಡನೆ ಬೆರೆತು, ಊರಿ, ಶಿಥಿಲ ಅವಯವವಾದ ಬೀಜದಂತಿರುವುದು **'ಅಕ್ಷರ'**ವು; ಚೆನ್ನಾಗಿ ಉಬ್ಬಿ ಬಾಯ್ಬಿಟ್ಟ ಅವಸ್ಥೆ **'ಅವ್ಯಕ್ತ'**; ಮೊಳಕೆಯೊಡೆದ ಬೀಜ **' ಮಹಾನ್'**; ಎಂದು ತಿಳಿಯಬೇಕು.

## ಸೂತ್ರ - 16

1. **ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ – (ಭಗವದ್ಗೀತೆ14-5)**

ಸತ್ವ, ರಜಸ್, ತಮಸ್ಸೆಂಬ ಗುಣಗಳು ಪ್ರಕೃತಿಯಿಂದ ಉಂಟಾದವುಗಳು.

2. ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ – (ಭಗವದ್ಗೀತೆ 3-27)
ಪ್ರಕೃತಿಯ ಸತ್ವ ಮೊದಲಾದ ಗುಣಗಳಿಂದ ಅನೇಕ ವಿಧವಾಗಿ ಅನುಗುಣವಾಗಿ ಮಾಡಲ್ಪಟ್ಟ ಕರ್ಮಗಳನ್ನು (ನಾನು ಮಾಡಿದೆ ಎಂದು ಭಾವಿಸುತ್ತಾನೆ.)

3. ಮೂಲ ಪ್ರಕೃತಿರ್ನಾಮ ........... ಸತ್ವ ರಜಸ್ತಮಾಂಸಿ ದ್ರವ್ಯಾಣಿ – (ಚಿತ್ ಪ್ರಕರಣ ಸೂತ್ರ 31 ರಲ್ಲಿ ನೋಡಿ)

4. ಸತ್ವ ರಜಸ್ತಮಾಂಸಿ ................. ಮಹದಾದಿಷೂದ್ಭೂತಾಃ – (ಗೀತಾಭಾಷ್ಯ 14-5)
ಸತ್ವ ರಜಸ್ ತಮಸ್ ಎಂಬ ಮೂರು ಗುಣಗಳು ಪ್ರಕೃತಿಯ ಸ್ವರೂಪವನ್ನವಲಂಬಿಸಿವೆ. ಅವುಗಳ ಸ್ವಭಾವ ವಿಶೇಷಗಳು ಅವುಗಳ ಕಾರ್ಯಗಳಿಂದಲೇ ನಿಶ್ಚಯಿಸಲ್ಪಡುವಂತಹುದಾಗಿ ಪ್ರಕೃತಿ ಅವಸ್ಥೆಯಲ್ಲಿ ಪ್ರಕಾಶಿಸದೆ ಆ ಪ್ರಕೃತಿಯ ವಿಕಾರವಾದ ಮಹದಾದಿಗಳಲ್ಲಿ ಪ್ರಕಾಶಿಸುತ್ತವೆ.

## ಸೂತ್ರ - 17

1. ತತ್ರ ಸತ್ವಂ ......................... ಜ್ಞಾನ ಸಂಗೇನ ಚಾನಘ ॥ – (ಭಗವದ್ಗೀತೆ 14-6)
ಎಲೈ ಪಾಪರಹಿತನೇ। ಆ ಸತ್ವ ರಜಸ್ತಮೋಗುಣಗಳಲ್ಲಿ ಸತ್ವವು ನಿರ್ಮಲವಾಗಿರುವುದರಿಂದ ಪ್ರಕಾಶಕವಾಗಿಯೂ, ವ್ಯಾಧಿ ರಹಿತವಾಗಿಯೂ ಇದೆ. ಸತ್ವ ಗುಣವಾದರೋ ಸುಖ ಸಂಬಂಧದಿಂದಲೂ, ಜ್ಞಾನ ಸಂಬಂಧದಿಂದಲೂ ಬಂಧಿಸುತ್ತದೆ.

## ಸೂತ್ರ - 18

1. ರಜೋರಾಗಾತ್ಮಕಂ ...................... ದೇಹಿನಾಮ್ – (ಭಗವದ್ಗೀತೆ 14-7)
ಹೇ ಕುಂತೀ ಪುತ್ರನೇ। ರಜೋಗುಣವನ್ನು ರಾಗಕ್ಕೆ ಕಾರಣವಾಗಿಯೂ, ಆಸೆಯನ್ನೂ, ಬಂಧುಗಳಲ್ಲಿ ಸಂಗವನ್ನೂ ಉಂಟುಮಾಡುವುದಾಗಿ ತಿಳಿ. ಆ ರಜೋಗುಣವಾದರೋ ದೇಹವುಳ್ಳ ಆತ್ಮಗಳನ್ನು ಕರ್ಮಗಳಿಂದ ಬಂಧಿಸುತ್ತದೆ.

## ಸೂತ್ರ - 19

1. ತಮಸ್ತು ಅಜ್ಞಾನ ................. ಭಾರತ – (ಭಗವದ್ಗೀತೆ 14-8)
ಹೇ ಭರತವಂಶಜನೇ। ತಮೋಗುಣವು ಅಜ್ಞಾನವನ್ನುಂಟುಮಾಡುವುದಾಗಿಯೂ, ವಿಪರೀತ ಜ್ಞಾನವನ್ನುಂಟು ಮಾಡುವುದಾಗಿಯೂ, . ಎಲ್ಲ ದೇಹಿಗಳಲ್ಲೂ ಅನ್ಯಥಾಜ್ಞಾನವನ್ನುಂಟು ಮಾಡುವುದಾಗಿಯೂ ತಿಳಿ. ಈ ತಮೋಗುಣವು ಭ್ರಮೆ, ಸೋಮಾರಿತನ, ನಿದ್ರೆಗಳಿಂದ ಬಂಧಿಸುತ್ತದೆ.

## ಸೂತ್ರ - 21

1. ಗುಣ ಸಾಮ್ಯಾತ್ ................ ದ್ವಿಜೋತ್ತಮ। – (ಶ್ರೀ ವಿಷ್ಣು ಪುರಾಣ 1-2-36)
ಎಲೈ ಮನನ ಶೀಲರಾದ ಮೈತ್ರೇಯರೇ। ನಂತರ ಸೃಷ್ಟಿ ಕಾಲದಲ್ಲಿ ಗುಣ ಸಾಮ್ಯವುಳ್ಳದ್ದೂ, ಕ್ಷೇತ್ರಜ್ಞನಾದ

ಆತ್ಮನಿಂದ ಅಧಿಷ್ಠಿತವಾಗುವುದೂ ಆದ ಆ ಪ್ರಕೃತಿಯಿಂದ ಪ್ರಕಾಶವುಳ್ಳ, ಗುಣವೃದ್ಧಿಗೆ ಹೇತುವಾದ 'ಮಹತ್' ಉಂಟಾಗುತ್ತದೆ.

## ಸೂತ್ರ - 22

1. **ಸಾತ್ವಿಕೋ ರಾಜಸಶ್ಚೈವ ತಮಸಶ್ಚ ತ್ರಿಧಾ ಮಹಾನ್। – (ಶ್ರೀ ವಿಷ್ಣು ಪುರಾಣ 1-2-36)**
ಮಹತ್ ತತ್ತ್ವವು ಸಾತ್ವಿಕ, ರಾಜಸ, ತಾಮಸ ಎಂದು ಮೂರು ವಿಧವಾಗಿರುತ್ತದೆ.

2. **ಮಹಾನ್ ವೈ ಬುದ್ಧಿ ಲಕ್ಷಣಃ**
ಮಹತ್ ತತ್ತ್ವವು 'ಬುದ್ಧಿ' ಯನ್ನು ಲಕ್ಷಣವಾಗುಳ್ಳದ್ದು.

3. **ಪ್ರವೃತ್ತಿಂ ಚ ..................... ಪಾರ್ಥ ಸಾತ್ವಿಕೀ – (ಭಗವದ್ಗೀತೆ 18-30)**
ಹೇ ಪಾರ್ಥನೇ। ಧರ್ಮದಲ್ಲಿ ಪ್ರವೃತ್ತಿಯನ್ನೂ , ಮೋಕ್ಷಸಾಧನಭೂತವಾದ ನಿವೃತ್ತಿ ಧರ್ಮವನ್ನೂ, ಇವುಗಳಲ್ಲಿ ತೊಡಗಿರುವವನಿಗೆ ಬೇಕಾದ ತ್ಯಾಜ್ಯ, ಉಪಾದೇಯಗಳನ್ನು ; ಶಾಸ್ತ್ರವನ್ನು ಮೀರುವುದು ಭಯಾವಹವೆಂದೂ, ಶಾಸ್ತ್ರವಶನಾಗಿರುವುದು ನಿರ್ಭಯವೆಂದೂ; ಸಂಸಾರ ಬಂಧನವನ್ನೂ , ಮೋಕ್ಷವನ್ನೂ, ಯಾವ ಬುದ್ಧಿಯು ಯಥಾವತ್ತಾಗಿ ಅರಿಯುವುದೋ ಆ ಬುದ್ಧಿಯನ್ನು 'ಸಾತ್ವಿಕೀ' ಎಂದು ಅರಿಯುವವನಾಗು.

4. **ಯಯಾ ಧರ್ಮಂ ಅಧರ್ಮಂ ಚ ........ ಪಾರ್ಥ ರಾಜಸೀ। – (ಭಗವದ್ಗೀತೆ 18-31)**
ಯಾವ ಬುದ್ಧಿಯಿಂದ ಪ್ರವೃತ್ತಿ ನಿವೃತ್ತಿರೂಪವಾದ ಧರ್ಮವನ್ನೂ, ಅಧರ್ಮವನ್ನು ಮಾಡುವಂತಹುದನ್ನೂ ಯಥಾವತ್ತಾಗಿಲ್ಲದೆ ತಿಳಿಯುವನೋ ಆ ಬುದ್ಧಿಯನ್ನು 'ರಾಜಸೀ' ಎಂದು ತಿಳಿ.

5. **ಅಧರ್ಮಂ ಧರ್ಮಮಿತಿ .................... ಪಾರ್ಥ ತಾಮಸೀ – (ಗೀತೆ 18-32)**
ಯಾವ ಬುದ್ಧಿಯು ಅಜ್ಞಾನದಿಂದ ಆವರಿಸಲ್ಪಟ್ಟು ಅಧರ್ಮವನ್ನು ಧರ್ಮವೆಂದೂ, ಸಕಲ ಪದಾರ್ಥಗಳನ್ನೂ ವಿಪರೀತಗಳಾಗಿ ತಿಳಿಯುವುದೋ ಅದನ್ನು 'ತಾಮಸೀ' ಎಂದು ಅರಿಯುವವನಾಗು.

## ಸೂತ್ರ - 23

1. **ವೈಕಾರಿಕಃ ....................... ತತ್ತ್ವಾಥಜಾಯತ – (ಶ್ರೀ ವಿಷ್ಣು ಪುರಾಣ 1-2-37)**
ವೈಕಾರಿಕವೆಂದೂ (ಸಾತ್ವಿಕ ಅಹಂಕಾರವೆಂದೂ) ತೈಜಸವೆಂದೂ (ರಾಜಸ ಅಹಂಕಾರ) ತಾಮಸ (ತಾಮಸಾಹಾಂಕಾರ) ವಾದ ಭೂತಾದಿಯೆಂದೂ ಈ ಮೂರು ವಿಧವಾದ ಅಹಂಕಾರವು 'ಮಹತ್' ತತ್ವದಿಂದ ಉಂಟಾಗುತ್ತದೆ.

## ಸೂತ್ರ - 25

1. **ತೈಜಸಾನಿ ...........................ವೈಕಾರಿಕಾ ಸ್ಮೃತಮ್ – (ಶ್ರೀವಿ.ಪು. 1-2-48)**
ಹತ್ತು ಸಂಖ್ಯೆಯಲ್ಲಿರುವ ಇಂದ್ರಿಯಗಳು, ರಾಜಸಾಹಂಕಾರದ ಕಾರ್ಯವೆಂದು ಕೆಲವರು ಹೇಳುತ್ತಾರೆ. ದೇವಾದಿಷ್ಠವಾದ ಇಂದ್ರಿಯಗಳು ಸಾತ್ವಿಕಾಹಾಂಕಾರದ ಕಾರ್ಯವೆಂದು ಇನ್ನು ಕೆಲವರು ಹೇಳುತ್ತಾರೆ.

ಅವುಗಳಲ್ಲಿ ಹನ್ನೊಂದನೆಯದಾದ ಮನಸ್ಸು ಕೂಡ ದೇವತೆಗಳಿಂದ ಅಧಿಷ್ಠಿತವಾದ್ದರಿಂದ, ದೇವ ಶಬ್ದದಿಂದ ಹೇಳಲು ಯೋಗ್ಯವಾದ ಇಂದ್ರಿಯಗಳೂ ಸಾತ್ವಿಕ ಅಹಂಕಾರದ ಕಾರ್ಯವೆಂದು ಹೇಳಲ್ಪಟ್ಟಿವೆ.

2. **ಅಗ್ನಿರ್ ವಾಕ್ ಭೂತ್ವಾ ................. ಪ್ರಾವಿಶತ್ – (ಐತರೇಯ ಉಪನಿಷತ್2-1-4)**

ಅಗ್ನಿಯು ವಾಕ್ ಆಗಿ ಮುಖವನ್ನು (ಬಾಯನ್ನೂ )ಪ್ರವೇಶಿಸಿದನು. ವಾಯುವು ಘ್ರಾಣೇಂದ್ರಿಯವಾಗಿ ಮೂಗನ್ನು ಪ್ರವೇಶಿಸಿದನು. ಆದಿತ್ಯನು (ಸೂರ್ಯನು) ಚಕ್ಷುಸ್ ಆಗಿ ಕಣ್ಣುಗಳಲ್ಲಿ ಪ್ರವೇಶಿಸಿದನು. ದಿಕ್ಕಿಗೆ ಅಭಿಮಾನಿ ದೇವತೆಯು ಶ್ರೋತ್ರವಾಗಿ ಕಿವಿಯನ್ನು ಪ್ರವೇಶಿಸಿದನು. ಔಷಧಿಗಳ ಅಭಿಮಾನಿ ದೇವತೆಯು, ವೃಕ್ಷಗಳ ಅಭಿಮಾನಿ ದೇವತೆಯೂ, ರೋಮಗಳಾಗಿ ತ್ವಕ್ (ಚರ್ಮ)ನ್ನು ಪ್ರವೇಶಿಸಿದವು. ಚಂದ್ರನು ಮನಸ್ಸಾಗಿ ಹೃದಯವನ್ನು ಪ್ರವೇಶಿಸಿದನು. ಮೃತ್ಯುವು ಅಪಾನವಾಗಿ ನಾಭಿಯನ್ನು ಪ್ರವೇಶಿಸಿದನು. ಜಲಾಭಿಮಾನಿ ದೇವತೆ ರೇತಸ್ ಆಗಿ ಪುರುಷ ಲಿಂಗವನ್ನು ಪ್ರವೇಶಿಸಿದನು.

3. **ತೇಷಾಂತ್ವವಯವಾನ್ ...................... ನಿರ್ಮಮೇ – (ಮನುಸ್ಮೃತಿ 1-16)**

ಅಧಿಕವಾದ ತೇಜಸ್ಸುಳ್ಳ ಆರು ಇಂದ್ರಿಯಗಳ ಸೂಕ್ಷ್ಮವಾದ ಅವಯವಗಳನ್ನು ಆತ್ಮ ಮಾತ್ರೆಗಳಲ್ಲಿ (ಅವು ಅವುಗಳ ಮಾತ್ರೆಗಳಲ್ಲಿ) ಸೇರಿಸಿ ಸಮಸ್ತ ಭೂತಗಳನ್ನೂ ಸೃಷ್ಟಿಸಿದನು.

4. **ಶರೀರಂ ಯದವಾಪ್ನೋತಿ ................... ಗಂಧಾ ನಿವಾಶಯಾತ್ – (ಭಗವದ್ಗೀತೆ 15-8)**

ಇಂದ್ರಿಗಳಿಗೆ ನಿಯಾಮಕವಾದ ಜೀವನು ಯಾವ ಶರೀರವನ್ನು ಹೊಂದುತ್ತಾನೋ, ಯಾವ ಶರೀರದಿಂದ ಹೊರ ಹೋಗುತ್ತಾನೋ ಆಗ ವಾಯುವು ಪರಿಮಳದ ಆಶ್ರಯದಿಂದ (ಹೂಮಾಲೆ, ಚಂದನಾದಿಗಳಿಂದ) ಹೇಗೆ ಪರಿಮಳವನ್ನು ಸೆಳೆದುಕೊಂಡು ಹೋಗುತ್ತಾನೋ ಹಾಗೆ ಇಂದ್ರಿಯಗಳನ್ನು ಸೂಕ್ಷ್ಮಗಳೊಡನೆ ಎಳೆದುಕೊಂಡು ಹೋಗುತ್ತಾನೆ.

## ಸೂತ್ರ - 26

1. **ಭೂತತನ್ಮಾತ್ರ ಸರ್ಗೋಯಮಹಂಕಾರಾತ್ತು ತಾಮಸಾತ್ – (ಶ್ರೀ ವಿ.ಪು. 1-2-48)**

ಈ ಭೂತಗಳ, ತನ್ಮಾತ್ರೆಗಳ ಸೃಷ್ಟಿಯು ತಾಮಸ ಅಹಂಕಾರದಿಂದ ಆಗುತ್ತದೆ.

2. **ಅಷ್ಟೌ ಪ್ರಕೃತಯಃ ಷೋಡಶ ವಿಕಾರಾಃ – (ಗರ್ಭೋಪನಿಷತ್)**

ಎಂಟು ಪ್ರಕೃತಿಗಳು- ಪ್ರಕೃತಿ, ಮಹತ್, ಅಹಂಕಾರ, ಐದು ತನ್ಮಾತ್ರೆಗಳು ಇವು ಕಾರಣಗಳು. ಹದಿನಾರು ವಿಕಾರಗಳು- ಶಬ್ದಾದಿ ಗುಣಗಳು ಐದು, ಹನ್ನೊಂದು ಇಂದ್ರಿಯಗಳು.

3. **ಈಶ್ವರಾತ್ ಪ್ರಕೃತಿ ಪುರುಷೌ................ ಗಂಧತನ್ಮಾತ್ರಾತ್ ಪೃಥಿವೀ.**

ಈಶ್ವರನಿಂದ ಪ್ರಕೃತಿ ಪುರುಷರು. ಪ್ರಕೃತಿಯಿಂದ ಮಹತ್. ಮಹತ್ತಿನಿಂದ ಅಹಂಕಾರ , ಅಹಂಕಾರದಿಂದ ಶಬ್ದ ತನ್ಮಾತ್ರೆ, ಶಬ್ದತನ್ಮಾತ್ರೆಯಿಂದ ಆಕಾಶ ಮತ್ತು ಸ್ಪರ್ಶತನ್ಮಾತ್ರೆ, ಸ್ಪರ್ಶತನ್ಮಾತ್ರೆಯಿಂದ ರೂಪ ತನ್ಮಾತ್ರೆ, ರೂಪತನ್ಮಾತ್ರೆಯಿಂದ ತೇಜಸ್, ರಸ ತನ್ಮಾತ್ರೆ, ರಸತನ್ಮಾತ್ರೆಯಿಂದ ಗಂಧತನ್ಮಾತ್ರೆ, ಗಂಧತನ್ಮಾತ್ರೆಯಿಂದ ಪೃಥಿವೀ.

## ಸೂತ್ರ - 27

1. **ಆಕಾಶಸ್ತು ವಿಕುರ್ವಾಣಃ ಸ್ಪರ್ಶಮಾತ್ರಂ ಸಸರ್ಜಹ – (ಶ್ರೀ. ವಿ.ಪು. 1-2-41)**
ಆಕಾಶವು ವಿಕಾರ ಹೊಂದಿ ಸ್ಪರ್ಶ ತನ್ಮಾತ್ರೆಯನ್ನು ಸೃಷ್ಟಿಸುತ್ತದೆ.

2. **ಅಷ್ಟೌ ಪ್ರಕೃತಯಃ .......... ಯಥಾತ್ಮ ಗತಿ ಚಿಂತಕಾಃ – (ಮೋಕ್ಷಧರ್ಮಪುರಾಣ - ಯಾಜ್ಞವಲ್ಕ್ಯ ಜನಕ ಸಂವಾದ)**
ಪ್ರಕೃತಿಗಳು ಎಂಟು ಎಂದು ಹೇಳಲ್ಪಟ್ಟಿದೆ. ವಿಕಾರಗಳು ಹದಿನಾರು ಎಂದೂ, ಅನಂತರ ಏಳೇ ವ್ಯಾಹೃತಿಗಳೆಂದೂ, ಅಧ್ಯಾತ್ಮ ಚಿಂತಕರು ಹೇಳುವರು. ಪ್ರಕೃತಿಯೂ, ಮಹಾನ್,ಅಹಂಕಾರವೂ, ಪೃಥಿವಿಯೂ, ವಾಯು, ಆಕಾಶ, ತೇಜಸ್ ಎಂಬ ಈ ಐದೂ, ಈ ಎಂಟೂ ಪ್ರಕೃತಿಗಳು -ಎಂದರೆ ಒಂದಕ್ಕೊಂದು ಕಾರಣಗಳು. ಇನ್ನು ವಿಕಾರಗಳನ್ನೂ ನನ್ನಿಂದ ಕೇಳು. ಶ್ರೋತ್ರೇಂದ್ರಿಯವೂ, ತ್ವಗಿಂದ್ರಿಯವೂ, ಚಕ್ಷುರಿಂದ್ರಿಯ, ರಸನೇಂದ್ರಿಯವೂ, ಐದನೆಯದಾದ ಘ್ರಾಣೇಂದ್ರಿಯವೂ-ಈ ಐದೂ ಜ್ಞಾನೇಂದ್ರಿಯಗಳು; ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ 5 ಕರ್ಮೇಂದ್ರಿಯಗಳು (ಮಾತು, ಕೈ, ಕಾಲು, ಮಲ ವಿಸರ್ಜನ ಸ್ಥಾನ, ರೇತಸ್‌ವಿಸರ್ಜನ ಸ್ಥಾನ) ಶಬ್ದ, ಸ್ಪರ್ಶಗಳೂ, ರೂಪ, ರಸ, ಗಂಧವೂ ಈ ವಿಶೇಷಗಳು. ಎಲೈ ರಾಜೇಂದ್ರನೇ! ಮಿಥಿಲಾಧಿ ಪತಿಯಾದ ಜನಕನೇ- ಐದಾಗಿರುವ ಮಹಾ ಭೂತಗಳಿಂದ ನಂತರ ವಿಶೇಷಗಳೊಡನೆ ಕೂಡಿದ ಈ ಭೂತಗಳೂ, ಹತ್ತು ಇಂದ್ರಿಯಗಳೂ, ಹದಿನಾರನೆಯದಾಗಿ ಮನಸ್ಸೂ ಎಂದು ಅಧ್ಯಾತ್ಮ ಚಿಂತಕರು ಹೇಳುತ್ತಾರೆ.

3. **ಮನೋಬುದ್ಧಿರಹಂಕಾರ .................. ವಿಕಾರಾಷ್ಷೋಡಷ ಸ್ಮೃತಾಃ – (ಯಮಸ್ಮೃತಿ)**
ಮನಸ್ಸು, ಬುದ್ಧಿ, ಅಹಂಕಾರ, ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಈ ಎಂಟೂ ಪ್ರಕೃತಿಗಳು. ಉಳಿದ ವಿಕಾರಗಳು ಹದಿನಾರು. ಅವೆಂದರೆ ಶ್ರೋತ್ರ, ಚಕ್ಷು, ರಸನಾ, ಘ್ರಾಣ, ತ್ವಕ್ ಎಂಬ ಜ್ಞಾನೇಂದ್ರಿಯಗಳೂ, ಮನಸ್ಸೂ, ನಂತರ ಶಬ್ದ, ರೂಪ, ರಸ, ಗಂಧ, ಸ್ಪರ್ಶವೆಂಬ ವಿಷಯಗಳೂ ನಂತರ ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಕರ್ಮೇಂದ್ರಿಯಗಳೂ ಹದಿನಾರು ವಿಕಾರಗಳು.

4. **ತ್ವಚಾ ಬೀಜ ಮಿವಾವೃತಂ – (ಶ್ರೀ ವಿ.ಪು. 1-2-37)**
ಸಿಪ್ಪೆಯಿಂದ ಮುಚ್ಚಲ್ಪಟ್ಟ ಬೀಜದಂತೆ.

5. **ಆದ್ಯಾದ್ಯಸ್ಯ ................. ಪರಃ ಪರಃ – (ಮನುಸ್ಮೃತಿ 1-20)**
ಮುಂಚು ಮುಂಚಿನ ತತ್ವಗಳ ಗುಣಗಳನ್ನು ನಂತರದ ತತ್ವಗಳು ಹೊಂದುತ್ತವೆ.

6. **ಆಕಾಶಂ ......................... ರಸಮಾತ್ರಮ್ ಸಮಾವಿಶನತ್ – (ಶ್ರೀ ವಿ.ಪು.)**
ಆಕಾಶವು ಶಬ್ದ ತನ್ಮಾತ್ರೆಯನ್ನೂ, ಸ್ಪರ್ಶತನ್ಮಾತ್ರೆಯನ್ನೂ ಪ್ರವೇಶಿಸುತ್ತದೆ. ಆ ಪ್ರಕಾರವೇ ಎರಡಾಗಿರುವ ಶಬ್ದ ಸ್ಪರ್ಶ ಗುಣಗಳು ತೇಜಸ್ಸಿಗೆ ಕಾರಣವಾದ ರೂಪ ತನ್ಮಾತ್ರೆಯನ್ನು ಹೊಂದುತ್ತದೆ. ಶಬ್ದ, ಸ್ಪರ್ಶ, ರೂಪಗಳು ಜಲಕ್ಕೆ ಕಾರಣವಾದ ರಸತನ್ಮಾತ್ರೆಯನ್ನು ಹೊಂದುತ್ತವೆ. ಆದ್ದರಿಂದ ಇಂದ್ರಿಯಗಳಿಂದ ಗ್ರಹಿಸತಕ್ಕವುಗಳಾಗಿಯೂ, ವಿಶೇಷಗಳನ್ನುಳ್ಳ ಜಲವು ನಾಲ್ಕು ಗುಣಗಳಿಂದ ಕೂಡಿರುತ್ತದೆ.

7. ತೇಭ್ಯಃ ತನ್ಮಾತ್ರೇಭ್ಯೋ.................... ಪಂಚ ಜಾಯತೇ – (ಶ್ರೀ ವಿ.ಪು)
ಈ ಐದಾಗಿರುವ ಈ ತನ್ಮಾತ್ರೆಗಳಿಂದ ಎಣಿಕೆಯನ್ನು ಮೀರದೆ ಕ್ರಮವಾಗಿ ಆಕಾಶ, ವಾಯು, ಅಗ್ನಿ, ಜಲ, ಭೂಮಿ ರೂಪಗಳಾದ ಐದು ಭೂತಗಳು ಉಂಟಾಗುತ್ತದೆ.

8. ಪ್ರಧಾನತ್ವಮುದ್ಭೂತಂ ತತ್ ಸಮಾವೃಣೋತ್ – (ಶ್ರೀ ವಿ. ಪು.1-2-32)
ಉಂಟಾಗಿರುವ ಆ ಪ್ರಧಾನ ತತ್ವವು (ಪ್ರಕೃತಿ ತತ್ವವು) ಮಹತ್ ತತ್ವವನ್ನು ಆವರಿಸಿರುತ್ತದೆ.

9. ಯಥಾ ಪ್ರಧಾನೇನ ಮಹಾನ್ ಮಹತಾ ಸ ತಥಾವೃತಃ – (ಶ್ರೀ ವಿ.ಪು.1-2-36)
ಹೇಗೆ ಪ್ರಧಾನದಿಂದ ಆ ಮಹತ್ ತತ್ವವು ಆವರಿಸಲ್ಪಟ್ಟಿದೆಯೋ, ಹಾಗೆಯೇ ಅಹಂಕಾರವು ಮಹತ್ತಿನಿಂದ ಆವರಿಸಲ್ಪಟ್ಟಿದೆ.

10. ಶಬ್ದ ಮಾತ್ರಂ ತದಾಕಾಶಂ ಭೂತಾದಿ ಸ್ಸಮಾವೃಣೋತ್ – (ಶ್ರೀ ವಿ.ಪು. 2-42)
ಶಬ್ದ ತನ್ಮಾತ್ರೆಯನ್ನೂ, ಆಕಾಶವನ್ನೂ ಭೂತಾದಿ (ತಾಮಸಾಹಂಕಾರ)ಯು ಆವರಿಸಿರುತ್ತದೆ.

11. ಸ್ಪರ್ಶಮಾತ್ರಾಸ್ತು ವೈ ವಾಯುರೂಪಮಾತ್ರಂ ಸಮಾವೃಣೋತ್ – (ಶ್ರೀ ವಿ.ಪು. 1-2-43)
ವಾಯುವು ಸ್ಪರ್ಶತನ್ಮಾತ್ರೆಯನ್ನೂ ರೂಪ ತನ್ಮಾತ್ರೆಯನ್ನು ಆವರಿಸುತ್ತದೆ.

12. ರಸಮಾತ್ರಾಣಿ ಚಾಂಭಾಂಸಿ ರೂಪಮಾತ್ರಂ ಸಮಾವೃಣೋತ್ – (ಶ್ರೀ ವಿ.ಪು 1-2-45)
ಜಲ ತತ್ವವು ರಸತನ್ಮಾತ್ರೆಯನ್ನೂ, ರೂಪ ತನ್ಮಾತ್ರೆಯನ್ನೂ ಆವರಿಸಿರುತ್ತದೆ.

13. ಶಬ್ದ ಮಾತ್ರಂ .................... ವಿಶೇಷಂ ಚಾವೃಣೋದಿತಿ ದರ್ಶಿತಮ್ – (ಶ್ರೀ ವಿ. ಪು. 1-2-40-ವಿಷ್ಣು ಚಿತ್ತೀಯ ವ್ಯಾಖ್ಯಾನ)
ಶಬ್ದ ತನ್ಮಾತ್ರೆಯನ್ನು ಆ ಪ್ರಕಾರ ಸ್ಥೂಲಾಕಾಶವನ್ನೂ ಭೂತಾದಿಯು ಆವರಿಸಿರುತ್ತದೆ. ಹೀಗೆ ಹೇಳಲ್ಪಟ್ಟಿರುವುದರಿಂದ ಮುಂಚು ಮುಂಚಿನ ತನ್ಮಾತ್ರೆಯು ನಂತರದ ತನ್ಮಾತ್ರೆಗಳನ್ನೂ ಅವುಗಳ ವಿಶೇಷಗಳನ್ನೂ ಆವರಿಸಿರುತ್ತದೆ ಎಂಬುದು ನಿರೂಪಿಸಲ್ಪಟ್ಟಿತು.

## ಸೂತ್ರ - 28

1. ತಸ್ಮಿಂಸ್ತಸ್ಮಿಂ ಸ್ತು ................ ಅವಿಶೇಷಿಣಃ – (ಶ್ರೀ ವಿ.ಪು. 1-2-46, 47)
ಆ ಆಕಾಶಾದಿ ಭೂತಗಳಲ್ಲಿ ವಿಶೇಷ ರಹಿತವಾದ ಶಬ್ದ ಸ್ಪರ್ಶಾದಿ ಗುಣ ಮಾತ್ರವೇ ಇರುವುದೋ, ಆ ಕಾರಣದಿಂದಲೇ ಆ ತತ್ತ್ವದಲ್ಲಿ ತನ್ಮಾತ್ರೆಯನ್ನುಳ್ಳದ್ದಾಗಿರುವುದು ಸ್ಮರಿಸಲ್ಪಡುತ್ತದೆ. ತನ್ಮಾತ್ರೆಗಳು ಅವಿಶೇಷಗಳೆಂದು ಹೇಳಲ್ಪಡುತ್ತದೆ. ಆದ್ದರಿಂದ ಆ ಶಬ್ದಾದಿಗಳು ಅವಿಶೇಷಗಳೇ. ಶಾಂತವಾದ ಸಾತ್ವಿಕ ಗುಣವಿಲ್ಲದವೋ, ಘೋರವಾದ ರಜೋಗುಣವಿಲ್ಲದ್ದವೋ, ತಾಮಸ ಗುಣವಿಲ್ಲದವೋ ಆದ್ದರಿಂದ ಈ ಮೂರು ಗುಣಗಳಿಂದುಂಟಾದ ವಿಶೇಷವಿಲ್ಲದ್ದರಿಂದಲೇ ಅವಿಶೇಷಗಳೆನ್ನಲಾಗುತ್ತದೆ.

2. ತನ್ಮಾತ್ರಾಣ್ಯವಿಶೇಷಾಃ .........ಪೃಥಿವೀ – (ಶ್ರೀ ಯಾದವ ಪ್ರಕಾಶರ ವಿವರಣೆ)
ಇವುಗಳನ್ನೇ ತನ್ಮಾತ್ರೆಗಳೆಂದೂ, ಅವಿಶೇಷಗಳೆಂದೂ ಹೇಳಲಾಗುವುದು. ಶಾಂತತ್ವ, ಘೋರತ್ವ, ಮೂಢತ್ವಗಳೆಂದು ಮೂರು ಗುಣಗಳನ್ನು ಸ್ವರೂಪವಾಗಿ ಉಳ್ಳ ಮೂರು ವಿಶೇಷಗಳು, ಆ ತನ್ಮಾತ್ರೆಗಳಿಗೆ

ಇಲ್ಲವಾದ್ದರಿಂದ ಸೂಕ್ಷ್ಮವಾದ ಆಕಾಶವು, ಅವಿಶೇಷ ಲಕ್ಷಣತೆಯನ್ನುಳ್ಳದ್ದಾಗಿರುವುದು. ಆ ಶಬ್ದದಿಂದ ತನ್ಮಾತ್ರೆಯು ಹೇಳಲ್ಪಡುತ್ತದೆ. ಈ ಪ್ರಕಾರವಾಗಿ ಸೂಕ್ಷ್ಮವಾದ ವಾಯು, ಸೂಕ್ಷ್ಮವಾದ ತೇಜಸ್ಸು ಸೂಕ್ಷ್ಮವಾದ ಜಲ, ಸೂಕ್ಷ್ಮವಾದ ಪೃಥಿವೀ ಎಂದು ಹೇಳಿದ್ದಾರೆ.

## ಸೂತ್ರ - 30

1. **ಅಯಮತ್ರೇಂದ್ರಿಯಸೃಷ್ಟಿಕ್ರಮಃ ...... ಮನಸ್ ಸೃಷ್ಟಿರಿತಿ – (ಶ್ರೀವಿ.ಪು.1-2-46 ವಿಷ್ಣುಚಿತ್ತೀಯ ವಾಖ್ಯಾನ)**

ಇದು ಇಂದ್ರಿಯಗಳ ಸೃಷ್ಟಿಕ್ರಮಗಳು. ಸಾತ್ವಿಕಾಹಂಕಾರದಿಂದ ಕ್ರಮೇಣ 'ಶಬ್ದ' ಮೊದಲಾದ ಐದು ತನ್ಮಾತ್ರೆಗಳ ಸಹಾಯದಿಂದ 'ಶೋತ್ರ,' ಮೊದಲಾದ ಐದು ಜ್ಞಾನೇಂದ್ರಿಯಗಳ ಸೃಷ್ಟಿಯಾಗುತ್ತದೆ. ಆ ಜ್ಞಾನೇಂದ್ರಿಯಗಳ ಸಹಾಯದಿಂದ 'ವಾಕ್' ಮೊದಲಾದ ಐದು ಕರ್ಮೇಂದ್ರಿಯಗಳ ಸೃಷ್ಟಿಯಾಗುತ್ತದೆ. ಯಾವೊಂದರ ಸಹಕಾರವೂ ಇಲ್ಲದೆ ಸಾತ್ವಿಕಾಹಂಕಾರದಿಂದ ಮನಸ್ಸಿನ ಸೃಷ್ಟಿಯಾಗುತ್ತದೆ.

## ಸೂತ್ರ – 33

1. **ಶಬ್ದಃ ಶ್ರೋತ್ರಂ ತಥಾ .................. ಭೂಮಿ ಗುಣಾಃ ಸ್ಮೃತಾಃ। – (ಮಹಾಭಾರತ- ಮೋಕ್ಷ ಧರ್ಮ -ಅಂತರಿಕ್ಷ ಪರ್ವ)**

ಶಬ್ದವೂ ಶ್ರೋತ್ರವೂ ಆ ಪ್ರಕಾರವಾಗಿ ಪಕ್ಷಿಗಳಿಗೆ ವಾಸಸ್ಥಾನವಾದ ಆಕಾಶ ಮೊದಲಾದ ಮೂರೂ ಆಕಾಶದಿಂದ ಉಂಟಾಯಿತು. 'ಸ್ಪರ್ಶ' ವೂ ಚೇಷ್ಟಾ, ತ್ವಕ್ ಈ ಮೂರೂ ವಾಯುವಿನಿಂದ ಉಂಟಾಯಿತು. ರೂಪ, ಚಕ್ಷುಸ್, ಪ್ರಕಾಶ ಈ ಮೂರೂ ತೇಜಸ್ಸಿನಿಂದ ಉಂಟಾಯಿತು. ರಸ, ಆರ್ದ್ರತೆ, ಜಿಹ್ವಾ ಈ ಮೂರೂ ಜಲಗುಣಗಳೆಂದು ಹೇಳಲ್ಪಡುತ್ತವೆ. ಘ್ರಾಣ, ವಾಸಾನಾ ಪದಾರ್ಥ, ಶರೀರ ಈ ಮೂರೂ ಭೂಮಿಗುಣಗಳೆಂದು ಹೇಳಲ್ಪಡುತ್ತವೆ.

2. **ಅಹಂಕಾರಸ್ಯೇಂದ್ರಿಯಾಣಿ .............. ನಿರ್ದೇಶಾಪತ್ತೇಃ - (ಶ್ರೀ ವಿ.ಪು.-ವಿಷ್ಣುಚಿತ್ತೀಯ ವ್ಯಾಖ್ಯಾನ - 21-2-48)**

ಅಹಂಕಾರವು ಇಂದ್ರಿಯಗಳಿಗೆ ನಿಮಿತ್ತ ಕಾರಣ ಮಾತ್ರ. ಉಪಾದಾನ ಕಾರಣವು ಭೂತಗಳೇ. ಎಲೈ ಸೋಮಪಾನಾರ್ಹನಾದ ಶ್ವೇತಕೇತುವೇ! ಮನಸ್ಸು ಅನ್ನಮಯವಾದುದು. ಎಂದರೆ ಪೃಥ್ವೀಮಯ; ಪ್ರಾಣವು ಆಪೋಮಯ. ಎಂದರೆ ಜಲಮಯ; ವಾಕ್ ತೇಜೋಮಯ. ಎಂದು ಶ್ರುತಿ ಹೇಳುವುದರಿಂದ ಭೂತಗಳೇ ಉಪದಾನಗಳು ಎಂದು ಹೇಳುವುದುಂಟು. ಆದರೆ ಅದು ಯುಕ್ತವಲ್ಲ. ಅಹಂಕಾರವು ಉಪಾದಾನವಾಗಿಯೂ, ಭೂತಗಳನ್ನು ಆಪ್ಯಾಯಕಗಳಾಗಿಯೂ ಇವೆ ಎನ್ನುವುದು ಯುಕ್ತವಾಗಿರುವಾಗ ಭೂತಗಳು ಉಪದಾನಗಳಾಗುವುದಿಲ್ಲ.

2. **ಏಕಾದಶಂ ಮನಶ್ಚಾತ್ರ ದೇವಾ ವೈಕಾರಿಕಾ ಸ್ಮೃತಾಃ – (ಸೂತ್ರ 25 ನೋಡಿ)**

3. **ಇತಿಹಾಸ ಪುರಾಣಾಭ್ಯಾಂ .................. ಮಾಮಯಂ ಪ್ರತರಿಷ್ಯತಿ - (ಮಹಾಭಾರತ-ಆದಿಪರ್ವ)**

ಇತಿಹಾಸ ಪುರಾಣಗಳಿಂದ ವೇದವು ವಿವರಿಸಲ್ಪಡಬೇಕು. ಹಾಗಿಲ್ಲದಿದ್ದರೆ ವೇದವು ಅಲ್ಪ ಅರಿವುಳ್ಳವರಿಂದ 'ಇವನು ನನ್ನನ್ನು ವಂಚಿಸುತ್ತಾನೆ' ಎಂದು ಭಯ ಪಡುತ್ತದೆ.

4. ಘ್ರಾಣಾದೀನಾಂ ಇಂದ್ರಿಯಾಣಾಂ .......... ತನ್ಮಯಂ – (ಸುಬಾಲೋಪನಿಷತ್ ವ್ಯಾಖ್ಯಾನ-ಶ್ರುತಿ ಪ್ರಕಾಶಿಕಾಚ್ಯಾರರ್)

ಘ್ರಾಣ ಮೊದಲಾದ ಇಂದ್ರಿಯಗಳಿಗೆ ಪೃಥಿವ್ಯಾದಿ ಭೂತಗಳಿಂದ ವೃದ್ಧಿ ಏರ್ಪಡುವುದು ಎಂಬುದು ಶ್ರುತಿ ಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ. ಆಕಾಶದಿಂದ ಶ್ರೋತ್ರೇಂದ್ರಿಯವೂ, ಪೃಥಿವಿಯಿಂದ ಘ್ರಾಣೇಂದ್ರಿಯವೂ, ಹೇಳಲ್ಪಟ್ಟಿತು. ಎಂದಾರಂಭಿಸಿ ಸ್ಪರ್ಶವನ್ನು ವಾಯ್ವಾತ್ಮಕವಾಗಿಯೂ, ಶ್ರೋತ್ರೇಂದ್ರಿಯವನ್ನು ಆಕಾಶಾತ್ಮವಾಗಿಯೂ ಹೇಳಿದ್ದಾರೆ.

5. ಆಪ್ಯಾಯಂತೇ ಚ ತೇ ನಿತ್ಯಂ ತಾದವಸ್ಥೈಸ್ತು ಪಂಚಭಿಃ – (ಮೋಕ್ಷಧರ್ಮ 184-54)

ಐದಾಗಿರುವ ಆ ಭೂತಗಳಿಂದ ಆ ಧಾತುಗಳು ಸರ್ವಕಾಲದಲ್ಲೂ ವೃದ್ಧಿ ಹೊಂದುತ್ತವೆ.

## ಸೂತ್ರ - 34

1. ನಾನಾ ವೀರ್ಯಾಃ ಪೃಥಕ್ ಭೂತಾಸ್ತತಸ್ತೇ ........... ಕೃತ್ಸ್ನಶಃ – (ಶ್ರೀವಿ.ಪು.1-2-52)

ನಂತರ ದ್ರವ್ಯತ್ವ , ಕಠಿಣತ್ವ ಮೊದಲಾದ ಹಲವು ವೀರ್ಯಗಳನ್ನುಳ್ಳದ್ದಾಗಿಯೂ, ಬೇರೆ ಬೇರೆಯಾಗಿರುವ ಆ ಮಹದಾದಿಗಳು ಒಂದಾಗಿ ಸೇರದಿದ್ದಲ್ಲಿ ಪ್ರಜೆಗಳನ್ನು ಸೃಷ್ಟಿಸಲು ಶಕ್ಯವಾಗುವುದಿಲ್ಲ.

2. ಸಮೇತ್ಯಾನ್............ ಉತ್ಪಾದಯಂತಿ ತೇ – (ಶ್ರೀ ವಿ.ಪು.1-2-53)

ಒಂದನ್ನೊಂದು ಆಶ್ರಯಿಸಿದವುಗಳಾಗಿ, ಒಂದಕ್ಕೊಂದು ಸಂಬಂಧ ಹೊಂದಿ, ಸಮಸ್ತವೂ ಐಕ್ಯವನ್ನು ಹೊಂದಿ ಒಂದೇ ಗುಂಪಿನ ಲಕ್ಷಣವುಳ್ಳದ್ದಾಗಿ, ಮಹದಾದಿಗಳವರೆಗೆ ವಿಶೇಷವನ್ನುಳ್ಳ ಅವುಗಳು ಅಂಡವನ್ನು ಉಂಟುಮಾಡುತ್ತವೆ.

3. ಭೂತೇಭ್ಯೋSಂಡಂ ಮಹಾಬುದ್ಧೇ ಬೃಹತ್ ತದುದಕೇಶಯಮ್ – (ಶ್ರೀ ವಿ.ಪು.1-2-55)

ಎಲೈ ಮಹಾಬುದ್ಧಿವಂತನೇ। ಭೂತಗಳಿಂದ ಅಂಡವು ಉಂಟಾಗುತ್ತದೆ. ಬೃಹತ್ತಾದ ಆ ಅಂಡವಾದರೋ ನೀರಿನಲ್ಲಿರುತ್ತದೆ.

4. ಅಪಏವ ಸಸರ್ಜಾದೌ..................... ಸಮಪ್ರಭಂ – (ಮನುಸ್ಮೃತಿ 1-7-9)

ಸೃಷ್ಟಿ ಕಾಲದಲ್ಲಿ ನೀರನ್ನೇ ಸೃಷ್ಟಿಸಿದ. ಆ ನೀರಿನಲ್ಲಿ ವೀರ್ಯವನ್ನು ಸೃಷ್ಟಿಸಿದ. ಆ ಅಂಡವು ಸುವರ್ಣಮಯವಾಗಿಯೂ, ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳದ್ದಾಗಿಯೂ ಆಯಿತು.

## ಸೂತ್ರ - 35

1. ಸೋಭಿಧ್ಯಾಯ..................... ಸಹಸ್ರಾಂಶು ಸಮಪ್ರಭಮ್ – (ಮನುಸ್ಮೃತಿ 1-8-9)

ಆ ಪರಮಾತ್ಮನು ಧ್ಯಾನಮಾಡಿ ಅಂದರೆ ಸಂಕಲ್ಪಮಾಡಿ ತನ್ನ ಶರೀರದಿಂದ ನಾನಾ ವಿಧವಾದ ಪ್ರಜೆಗಳನ್ನು ಸೃಷ್ಟಿಸಬೇಕೆಂದು ಇಚ್ಛೆಯುಳ್ಳವನಾಗಿ.

2. ಸರ್ವಸ್ಯ ಚಾಹಂ ............... ಅಪೋಹನಂ ಚ – (ಭಗವದ್ಗೀತೆ 15-15)

ನಾನು ಎಲ್ಲರ ಮನಸ್ಸಿನಲ್ಲೂ ಇರುತ್ತೇನೆ. ನನ್ನಿಂದಲೇ ಸ್ಮೃತಿಯೂ, ಮರೆವೂ ಏರ್ಪಡುತ್ತದೆ.

3. **ಯತ್ಕಿಂಚಿತ್..................... ಹರೇಸ್ತನುಃ** – (ಶ್ರೀವಿ.ಪು 1-12-38)

ಹೇ ಬ್ರಾಹ್ಮಣ। ಯಾವ ಸತ್ವ ಸಮೂಹದಿಂದ ಎಂದರೆ ಬ್ರಹ್ಮಾದಿಗಳಿಂದ ಯಾವ ವಸ್ತುವು ಸೃಷ್ಟಿಸಲ್ಪಡುವುದೋ ಆ ವಸ್ತುವಿನ ಉತ್ಪತ್ತಿಯಲ್ಲಿ ಈಶ್ವರನು ಕಾರಣವಾಗಿರುತ್ತಾನೆ. ಆದ್ದರಿಂದಲೇ ಸೃಷ್ಟಿಸಲ್ಪಟ್ಟ ಸಮಸ್ತ ಪದಾರ್ಥಗಳೂ ಹರಿಯ ಶರೀರವೆಂದು ಪ್ರಸಿದ್ಧವಾಗಿದೆ.

## ಸೂತ್ರ - 36

1. **ಅಂಡಾನಾಂತು ................. ಕೋಟಿ ಶತಾನಿ ಚ** – (ಶ್ರೀ ವಿ.ಪು. 2-7-27)

ಆ ಪ್ರಕೃತಿಯಲ್ಲಿ ಸಾವಿರ ಅಂಡಗಳ ಸಾವಿರಗಳೂ, ಹಲವು ಸಾವಿರಗಳೂ, ಇಂತಹ ಅಂಡಗಳ ಅನೇಕ ಕೋಟಿಗಳೂ ಇರುತ್ತವೆ.

2. **ಸಪ್ತತಿಸ್ತು ಸಹಸ್ರಾಣಾಂ ............ ಚೈವ ಸಪ್ತಮಮ್** – (ಶ್ರೀವಿ.ಪು. 2-5-1-2)

ಎಲೈ ಬ್ರಾಹ್ಮಣನೇ। ಭೂಮಿಯ ಉದ್ದವು 70,000 ಯೋಜನವೆಂದು ಹೇಳಲ್ಪಟ್ಟಿದೆ. ಹೇ ಮುನಿ ಶ್ರೇಷ್ಠರಾದ ಮೈತ್ರೇಯರೇ, ಪಾತಾಳವು ಒಂದೊಂದೂ ಹತ್ತು ಸಹಸ್ರ ಯೋಜನ ಉದ್ದ ಅಗಲವುಳ್ಳದ್ದು. ಅತಳ, ವಿತಳ, ಗಭಸ್ತಿಮತ್, ನಿತಳ, ಮಹಾತಳವೆಂದೂ ಹೆಸರುಳ್ಳದ್ದೂ, ಸುತಳವೆಂದೂ, ಶ್ಲಾಘ್ಯವಾದ ಪಾತಾಳವೆಂದೂ ಹೇಳಲ್ಪಟ್ಟ ಅಧೋಲೋಕಗಳು ಏಳು ಇರುತ್ತವೆ.

3. **ಶುಕ್ಲ ಕೃಷ್ಣಾಃ ............. ಶೋಭಿತಾಃ** – (ಶ್ರೀ ವಿ.ಪು.2-5-3)

ಹೇ ಮೈತ್ರೇಯ - ಯಾವ ಲೋಕಗಳಲ್ಲಿ ವಿಲಕ್ಷಣವಾದ ಮಾಳಿಗೆಗಳಿಂದ ಶೋಭಿಸುವ ಭೂಮಿಯು ಬಿಳುಪಾಗಿಯೂ, ಕಪ್ಪಾಗಿಯೂ, ಕೆಂಪಾಗಿಯೂ, ಹಳದಿಯಾಗಿಯೂ, ಪರ್ವತಮಯವಾಗಿಯೂ, ಸ್ವರ್ಣಮಯವಾಗಿಯೂ ಇರುತ್ತದೆಯೋ.

4. **ವಿನಿವೃತ್ತಾಧಿಕಾರಸ್ತು ಮಹರ್ಲೋಕವಾಸಿನಃ** – (ಶ್ರೀ. ವಿ.ಪು.)

ಮಹರ್ಲೋಕದಲ್ಲಿ ವಾಸಿಸುವರು (ಇಂದ್ರಾದಿ) ಅಧಿಕಾರಿಗಳಂತಹವರು.

5. **ತೇಷಾಮೇಷಾಂ ಕೇಚನ ............. ತಾನುಪಾಸ್ಯ ವ್ರಜಂತಿ** – (ಶ್ರೀ ವಿ.ಪುರಾಣ 2-5-8)

ಕೆಲವರು ಸತ್ಯಲೋಕಗಳಲ್ಲಿ ಬ್ರಹ್ಮ ಲೋಕಗಳಿರುತ್ತವೆ. ಅಲ್ಲಿಯೇ ರುದ್ರನ ಲೋಕಗಳೂ ಇರುತ್ತವೆ ಎಂದು ಹೇಳುವರು. ಇನ್ನು ಕೆಲವರು ವಿಷ್ಣುವಿನ ವಿಶಾಲವಾದ ಲೋಕಗಳು ಇರುತ್ತವೆ ಎಂದು ಹೇಳುವರು. ಆಯಾಯಾ ದೇವತೆಗಳನ್ನು ಉಪಾಸನೆ ಮಾಡಿ ಆಯಾಯಾ ಲೋಕಗಳನ್ನು ಸೇರುತ್ತಾರೆ.

6. **ಸೂರ್ಯಾಂಡ ಗೋಲಯೋರ್ಮಧ್ಯೇ ಕೋಟ್ಯಸ್ಸ್ಯುಃ ಪಂಚವಿಂಶತಿಃ** – (ಶ್ರೀಭಾಗವತಂ 5-20-42)

ಸೂರ್ಯ ಮತ್ತು ಅಂಡಗೋಳಗಳ ಮಧ್ಯೆ ಇಪ್ಪತ್ತೈದು ಕೋಟಿ ಯೋಜನ ವಿಸ್ತೀರ್ಣವಿದೆ.

7. **ಏತದಂಡ ಕಟಾಹೇನ .................... ಸಮಾವೃತಮ್** – (ಶ್ರೀ ವಿ.ಪು. 2-7-22)

ಈ ಲೋಕಗಳು ಅಂಡಕಟಾಹದಿಂದ ಅಡ್ಡಕ್ಕೂ, ಉದ್ದಕ್ಕೂ, ಹಾಗೆಯೇ ಕೆಳಗೂ ಬೇಲದ ಕರಟದಲ್ಲಿ ಬೇಲದ ಹಣ್ಣಿನ ಬೀಜ ಅಂಟಿಕೊಂಡು ನಾಲ್ಕೂ ದಿಕ್ಕಿನಲ್ಲೂ ವ್ಯಾಪಿಸಿರುವುದೋ ಹಾಗೆಯೇ ವ್ಯಾಪಿಸಿರುತ್ತವೆ.

8 . **ಕೋಟಿ ಯೋಜನ ಮಾನಸ್ತು ಕಟಾಹಸ್ಸಂವ್ಯವಸ್ಥಿತಃ – (ಶಿವ ಪುರಾಣ)**
ಅಂಡಕಟಾಹವು ಕೋಟಿಯೋಜನ ಪ್ರಮಾಣವಾಗಿ ಇರುತ್ತದೆ.

9. **ದಶೋತ್ತರೇಣ ಪಯಸಾ ಮೈತ್ರೇಯ ಅಂಡಂ ಚ ತದ್ವೃತಮ್। – (ಶ್ರೀವಿ.ಪು. 2-7-23)**
ಹೇ ಮೈತ್ರೇಯ । ಭೂಮಿಗಿಂತ ಹತ್ತು ಪಟ್ಟು ಅಧಿಕವಾದ ನೀರಿನಿಂದ ಆ ಅಂಡವು ಸುತ್ತುವರಿಯಲ್ಪಟ್ಟಿರುವುದು.

10. **ಪಂಚಾಶತ್ ಕೋಟಿ ............... ಸದ್ವೀಪಾಪ್ತಿ ಮಹೀಧರಾ – (ಶ್ರೀ ವಿ.ಪು. 2-4-98)**
ಮಹಾಮುನೇ। ದ್ವೀಪ, ಸಮುದ್ರ ಇವುಗಳೊಡನೆ ಕೂಡಿದ ಅಂಡಕಟಾಹದೊಡನೆಯೇ ಆ ಭೂಮಿಯು ಐವತ್ತು ಕೋಟಿ ಯೋಜನ ವಿಸ್ತಾರವಾಗಿದೆ.

11. **ಭೂಮಂಡಲಂ ತು ಶತಕೋಟಿ ವಿಸ್ತಾರಂ ಸಾಂಡ ಕಟಾಹಮ್ – (ವರಾಹ ಪುರಾಣ)**
ಅಂಡಕಟಾಹದೊಡನೆ ಕೂಡಿದ ಭೂಮಂಡಲವು ನೂರು ಕೋಟಿ ಯೋಜನ ವಿಸ್ತಾರವುಳ್ಳದ್ದು.

12. **ವಾರಿವಹ್ನಿ ಅನಿಲಾಕಾಶ ............. ಪ್ರಾಕೃತೈರ್ವೃತಮ್ – (ಶ್ರೀ ವಿ.ಪು. 1-3-60).**
ಅನಂತರ ಹೊರಗಡೆ ನೀರು, ಅಗ್ನಿ, ವಾಯು, ಆಕಾಶ, ಇವುಗಳಿಂದಲೂ, ಅಹಂಕಾರದಿಂದಲೂ, ಹೊರಗಡೆ ಅಂಡವಾದರೋ ಒಂದಕ್ಕೊಂದು ಹತ್ತು ಪಟ್ಟು ಅಧಿಕವಾಗಿ ಆವರಿಸಲ್ಪಟ್ಟಿರುವುದು. ತಾಮಸಾಹಂಕಾರವು ಮಹತತ್ತ್ವದಿಂದ ಹಾಗೇ ಆವರಿಸಲ್ಪಟ್ಟಿರುವುದು. ಆ ಸಮಸ್ತವಾದ ಆವರಣಗಳೊಡನೆ ಕೂಡಿದ ಮಹತತ್ತ್ವವು ಅವ್ಯಕ್ತದಿಂದ ಆವರಿಸ್ಪಟ್ಟಿರುವುದು. ಏಳಾಗಿ ಇರುವ, ಈ ಪ್ರಾಕೃತಗಳಾದ ಆವರಣಗಳಿಂದ ಅಂಡವು ಆವರಿಸಲ್ಪಟ್ಟಿರುವುದು.

13. **ನ ಕ್ರಮೇಣ ವಿವೃತ್ತಂ ತತ್ ಜಲಬುದ್ಬುದವತ್ ಸಮಂ – (ಶ್ರೀ ವಿ.ಪು. 1-2-56)**
ಆ ಅಂಡವು ಕ್ರಮವಾಗಿ ಸಂಖ್ಯೆಯಲ್ಲಿ ಹೆಚ್ಚಾಗಲಿಲ್ಲ. ನೀರಿನ ಗುಳ್ಳೆಗಳಂತೆ ಏಕಕಾಲದಲ್ಲೇ ಎಲ್ಲವೂ ಉಂಟಾದವು.

14. **ಏಕಕಾಲೇನ ಸೃಜ್ಯತೇ – (ಶ್ರೀ ವಿ.ಪು. 1-3-17)**
ಏಕಕಾಲದಲ್ಲೇ ಸೃಷ್ಟಿಸಲ್ಪಟ್ಟವು.

## ಸೂತ್ರ - 37

1. **ಅಸ್ಯ ದೇಹಸ್ಯ .................. ವಿವಿಕ್ತತಾ – (ಶ್ರೀ ವಿ.ಪು. 1-3-18)**
ಹೇ ಮೈತ್ರೇಯ । ಈ ದೇಹಕ್ಕೆ ಆಕಾಶದಿಂದ ಲಘುತ್ವವನ್ನೂ, ಸೂಕ್ಷ್ಮತ್ವವನ್ನೂ, ಶಬ್ದವನ್ನೂ, ಕಿವಿಯನ್ನೂ ಫಲವಾಗುಳ್ಳದ್ದಾಗಿರುವಿಕೆಯೂ ಉಂಟಾಗುತ್ತದೆ.

2. **ವಾಯೋ ಸ್ಪರ್ಶೇಂದ್ರಿಯ ............. ಸ್ವೀಕರೋತಿ ಸದುತ್ತಮ – (ಶ್ರೀ ವಿ.ಪು)**
ಹೇ ಉತ್ತಮನೇ। ವಾಯುವಿನಿಂದ ಸ್ಪರ್ಶೇಂದ್ರಿಯವನ್ನೂ, ಚೇಷ್ಟೆಯನ್ನೂ, ಕಠಿನವಾಗಿರುವಿಕೆಯನ್ನೂ, ಸ್ಪರ್ಶವನ್ನೂ, ವ್ಯೂಹನವನ್ನೂ, ವಹಿಸು (ಹೊರುವುದು) ವುದನ್ನೂ ದೇಹವು ಗ್ರಹಿಸುತ್ತದೆ.

3. **ಅಗ್ನೇಃ ಔಷ್ಣಂ .................. ದ್ವಿಜರ್ಷಭ – (ಶ್ರೀ ವಿ.ಪು)**

ಹೇ ಬ್ರಾಹ್ಮಣಶ್ರೇಷ್ಠನೇ! ಅಗ್ನಿಯಿಂದ ಉಷ್ಣವಾಗಿರುವಿಕೆಯನ್ನೂ, ಪ್ರಕಾಶವನ್ನೂ, ರೂಪೇಂದ್ರಿಯವನ್ನೂ, ಅಸಹನೆಯನ್ನೂ, ಸಂತಾಪವನ್ನೂ, ಶೌರ್ಯವನ್ನೂ, ತೀಕ್ಷ್ಣತೆಯನ್ನೂ, ವರ್ಣವನ್ನೂ, ಪಚನಶಕ್ತಿಯನ್ನೂ, ಸಾಹಸವನ್ನೂ, ದೇಹವು ಏಕಕಾಲದಲ್ಲಿ ಹೊಂದುತ್ತದೆ.

4. **ಅದ್ಭ್ಯಶ್ಚ.................. ಕ್ಲೇದನಂ ಚೈವ – (ಶ್ರೀ ವಿ.ಪು)**

ನೀರಿನಿಂದ ಶೈತ್ಯವನ್ನೂ, ಸ್ನಿಗ್ಧತ್ವವನ್ನೂ, ತಿಳಿಯಾಗಿರುವಿಕೆಯನ್ನೂ, ಮೃದುವಾಗಿರುವಿಕೆಯನ್ನೂ, ಪಿಂಡೀಕರಣವನ್ನೂ, (ಚೆನ್ನಾಗಿ ಕೂಡಿಸುವಿಕೆ) ಒದ್ದೆಯಾಗಿಸುವಿಕೆಯನ್ನೂ ಹೊಂದುವುದು ಪ್ರಸಿದ್ಧವಾಗಿದೆ.

5. **ಭೂಮೇರ್ ಗಂಧಗುಣಂ ............ ಸ್ವೀಕರೋತಿ ಯಥಾತಥಮ್। – (ಶ್ರೀ ವಿ.ಪು.)**

ಭೂಮಿಯಿಂದ ಗಂಧಗುಣವನ್ನೂ, ಘ್ರಾಣೇಂದ್ರಿಯವನ್ನೂ, ಗುರುತ್ವವನ್ನೂ, ಧಾರಣೆಯನ್ನೂ, ಮೂರ್ತಿಮತ್ವವನ್ನೂ, ಸಹನೆಯನ್ನೂ, ದೇಹವು ಗ್ರಹಿಸಿರುತ್ತದೆ.

## ಸೂತ್ರ - 38

1. **ತ್ವಕ್ ಚಕ್ಷುರ್ ............. ಬುದ್ಧಿಯುಕ್ತಾನಿ ವೈದ್ವಿಜ ! – (ಶ್ರೀ ವಿ.ಪು. 1-2-48)**

ಹೇ ಮೈತ್ರೇಯ! ಇಲ್ಲಿಯಾದರೋ ತ್ವಕ್ ಇಂದ್ರಿಯವೂ, ಕಣ್ಣೂ , ಮೂಗೂ, ನಾಲಿಗೆಯೂ ಮತ್ತು ಕಿವಿಯೂ ಶಬ್ದ ಮೊದಲಾದ ವಿಷಯಗಳನ್ನು ಹೊಂದುವುದಕ್ಕಾಗಿ ಬುದ್ಧಿತತ್ವದೊಡನೆ ಕೂಡಿಕೊಂಡಿರುತ್ತದೆ.

2. **ಪಾಯೂಪಸ್ಥೌ ................. ತೇಷಾಂ ಚ ಕಥ್ಯತೇ। – (ಶ್ರೀ ವಿ.ಪು. 1-2-50)**

ಹೇ ಮೈತ್ರೇಯ - ಪಾಯುವೂ, ಉಪಸ್ಥವೂ, ಕೈಗಳೂ, ಕಾಲುಗಳೂ, ವಾಕ್ಕೂ (ಈ ಐದು ಕರ್ಮೇಂದ್ರಿಯಗಳೂ) ಮಲ ಮೂತ್ರ ವಿಸರ್ಜನ, ಶಿಲ್ಪ ಗಮನ, ಉಕ್ತಿ, ಎಂಬ ಕರ್ಮಗಳನ್ನು ಉಳ್ಳದ್ದಾಗಿವೆ.

## ಸೂತ್ರ - 40

1. **ತೇಜೋವಾರಿಮೃದಾಂ ಯಥಾ ವಿನಿಮಯಃ – (ಶ್ರೀ ಭಾಗವತಂ 1-1-1)**

ತೇಜಸ್ಸು, ನೀರು, ಮಣ್ಣು ಇವುಗಳು ಹೇಗೆ ವಿನಿಮಯಗೊಂಡಿದೆಯೋ (ವಿನಿಮಯ -ವೆಂದರೆ ಪರಸ್ಪರ ಸಮ್ಮಿಶ್ರಣವಾಗಿರುವಿಕೆ ಎನ್ನುತ್ತಾರೆ ಶ್ರುತ ಪ್ರಕಾಶಿಕಾಚಾರ್ಯರು)

2. **ಏವಂ ಜಾತೇಷು ಭೂತಾನಿ ............ ವ್ಯೋಮತೇಜಃ ಪಯೋಭುವಾಮ್।**

ಈ ಪ್ರಕಾರವಾಗಿ ಉಂಟಾಗಿದ್ದರೂ ಭೂತಗಳು ನಂತರ ಬೇರೆ ಬೇರೆಯಾಗಿ ಎರಡು ಭಾಗ ಆಗುತ್ತವೆ. ಒಂದು ಭಾಗವು ನಾಲ್ಕಾಗಿ ವಿಂಗಡಿಸಲ್ಪಡುತ್ತದೆ. ಉಳಿದ ಅರ್ಧಭಾಗ ಹಾಗೆಯೇ ಇರುತ್ತದೆ. ಆಕಾಶದ ಅರ್ಧಭಾಗ ವಾಯು, ತೇಜಸ್ಸು, ಜಲ, ಪೃಥಿವೀ ಇವುಗಳ ನಾಲ್ಕು ಭಾಗಗಳೂ ಸೇರಿಯೂ ; ವಾಯುವಿನ ಅರ್ಧಭಾಗವು ಆಕಾಶ, ತೇಜಸ್, ಜಲ, ಪೃಥಿವೀ ಇವುಗಳ ನಾಲ್ಕು ಭಾಗವೂ ಸೇರಿಯೂ ಪಂಚೀಕರಣವಾಗುತ್ತದೆ.

## ಸೂತ್ರ - 41

1. ಯದಗ್ನೇ ............. ತದನ್ವಸ್ಯ – (ಛಾಂದೋಗ್ಯ ಉಪನಿಷತ್ 6-4-1)

ಬೆಂಕಿಗೆ ಕೆಂಪು ಬಣ್ಣ ಯಾವುದುಂಟೋ ಅದು ತೇಜಸ್ಸಿನ ರೂಪ, ಯಾವುದು ಬಿಳುಪೋ ಅದು ಜಲದ ರೂಪ, ಯಾವುದು ಕಪ್ಪೋ ಅದು ಪೃಥಿವಿಯ ರೂಪ.

2. ಯದಗ್ನೇ ............... ಸರ್ವತ್ರ ಸಂಗತಾಃ – (ಶ್ರೀಭಾಷ್ಯಂ.)

ಅಗ್ನಿಯ ಯಾವ ಕೆಂಪು ರೂಪವುಂಟೋ ಅದು ತೇಜಸ್ಸಿನ ಭಾಗ, ಬಿಳಿಪು ಜಲದ ಭಾಗ, ಕಪ್ಪು ಪೃಥಿವಿಯ ಭಾಗ. ಅಗ್ನಿಯಲ್ಲೇ ಮೂರು ರೂಪಗಳುಂಟಾಗಿರುವುದು ಶ್ರುತಿಯಲ್ಲೇ ಹೇಳಲ್ಪಟ್ಟಿದೆ. ಆದ್ದರಿಂದ ಎಲ್ಲದರಲ್ಲಿಯೂ ಎಲ್ಲವೂ ಸೇರಿಕೊಂಡಿದೆ.

## ಸೂತ್ರ - 42

1 ಆಕಾಶಂ ಶಬ್ದ ಮಾತ್ರಂ ತು ............. ವಿಶೇಷಾಶ್ಚೇಂದ್ರಿಯಗ್ರಹಾಃ

(ಸೂತ್ರ 27, 6 ರಲ್ಲಿ ನೋಡಿ)

## ಸೂತ್ರ - 44

1. ಪ್ರಕೃತಿಂ ಪುರುಷ ............... ಸರ್ಗಕಾಲೇ ವ್ಯಯಾಽವ್ಯಯೌ। – (ಶ್ರೀ ವಿ.ಪು. 1-2-31)

ಶ್ರೀ ಮಹಾವಿಷ್ಣುವು 'ಬಹುಸ್ಯಾಂ ಪ್ರಜಾಯೇಯ' ಎಂಬ ತನ್ನ ಸಂಕಲ್ಪದಿಂದ ಸೃಷ್ಟಿಕಾಲ ಬಂದಾಗ ವಿಕಾರಿಯೂ, ಅವಿಕಾರಿಯೂ ಆಗಿರುವ ಪ್ರಕೃತಿಯನ್ನೂ ಪುರುಷನನ್ನೂ ವಿಷಯೀಕರಿಸಿ ಕ್ಷೋಭೆಯುಂಟು ಮಾಡಿದ. ಎಂದರೆ ಸೃಷ್ಟಿಗೆ ಉಪಯುಕ್ತವಾಗುವಂತೆ ಗುಣ ವೈಷಮ್ಯವನ್ನು ಉಂಟುಮಾಡಿದ.

2. ಕಾಲೇ ಶಂಸತಿ .................. ಅಂಡನಾವರಣೈಃ ಸಹಸ್ರಮಕರೋತ್। – (ಶ್ರೀ ಗುಣರತ್ನಕೋಶಂ-)

ಹೇ ಶ್ರೀರಂಗೇಶ್ವರ ದೇವಿ। ಸೃಷ್ಟಿಕಾಲವು ಸೃಷ್ಟಿಗೆ ಉಪಯುಕ್ತವಾಗಿರುವಿಕೆಯನ್ನು ಸೂಚಿಸಿದಾಗ, ಪ್ರಕೃತಿ ಪುರುಷರುಗಳು ಒಂದಕ್ಕೊಂದು ಸೇರಿರುವಾಗ, ಪೃಥಿವ್ಯಾದಿ ಭೂತಗಳೂ ಅಹಂಕಾರ ತತ್ತ್ವವೂ, ಮಹತ್‌ತತ್ತ್ವವೂ, ಐದು ಜ್ಞಾನೇಂದ್ರಿಯಗಳೂ, ಮನಸ್ಸು, ವಾಗಾದಿ ಐದು ಕರ್ಮೇಂದ್ರಿಯಗಳೂ ಕೂಡಿ ಏಳು ಆವರಣಗಳೊಡನೆ ಅನೇಕ ಅಂಡಗಳನ್ನೂ ಸೃಷ್ಟಿಸಿದ ಆ ಪರಮಾತ್ಮ.

3. ಕಾಷ್ಠಾ ಪಂಚದಶ ಖ್ಯಾತಾ ................ ಕೃತತ್ರೇತಾದಿ ಸಂಜ್ಞಿತಃ । - (ಶ್ರೀ ವಿ.ಪು. 1-38-26)

ಮುನಿಶ್ರೇಷ್ಠನೇ। ನಿಮಿಷಗಳು ಹದಿನೈದು, ಕಾಷ್ಠಾ ಮೂವತ್ತು, ಕಲಾ ಮೂವತ್ತರಿಂದ ಕೂಡಿರುವುದು ಮೂಹೂರ್ತದ ಒಂದು. ಅದೇ ಸಂಖ್ಯೆಯ ಮುಹೂರ್ತಗಳಿಂದ ಮನುಷ್ಯನ ಹಗಲಿರುಳಿಂದ ಕೂಡಿರುವುದು ದಿನವೊಂದಾಗಿ ಹೇಳಲ್ಪಡುವುದು. ಹಾಗೆಯೇ ಮೂವತ್ತು ದಿನಗಳಿಂದ ಕೂಡಿ ಪಕ್ಷದ್ವಯಾತ್ಮಕವಾಗಿರುವುದು ಒಂದು ಮಾಸ. ಅಂತಹ ಆರುಮಾಸಗಳಿಂದ ಕೂಡಿರುವುದು ಒಂದು ಅಯನ. ಉತ್ತರಾಯಣ, ಮತ್ತು ದಕ್ಷಿಣಾಯನಗಳೆಂಬ ಎರಡು ಅಯನಗಳಿಂದ ಕೂಡಿರುವುದು ಒಂದು ವರುಷ. ದೇವತೆಗಳಿಗೆ ದಕ್ಷಿಣಾಯನ ರಾತ್ರಿ. ಉತ್ತರಾಯಣವು ಹಗಲು. ಹನ್ನೆರಡು ಸಾವಿರ ದೇವವರ್ಷಗಳು ಕೃತ.

ತ್ರೇತ, ದ್ವಾಪರ, ಕಲಿ ಎಂಬ ಹೆಸರುಳ್ಳ ಚತುರ್ಯುಗವಾಗಿ ಆಗುತ್ತವೆ. ಈ ಚತುರ್ಯುಗಗಳ ವಿಪಾಕವನ್ನು ನನ್ನಿಂದ ಕೇಳಿ ತಿಳಿ. ಕೃತಯುಗ ಮೊದಲಾದ ಯುಗಗಳಲ್ಲಿ ಕ್ರಮವಾಗಿ 4 ಸಾವಿರ ದೇವ ಸಂವತ್ಸರವು ಕೃತವೆಂದೂ, ಮೂರು ತ್ರೇತಾ, ಎರಡು ದ್ವಾಪರವೆಂದೂ, ಒಂದು ಸಾವಿರ ದೇವ ಸಂವತ್ಸರವು ಕಲಿಯೆಂದೂ ಜ್ಞಾನಿಗಳು ಹೇಳುತ್ತಾರೆ. ಆ ಯುಗಗಳಲ್ಲಿನ ನಡುವಿನ ಸಂಧಿಯು ಅದೇ ಪ್ರಮಾಣಗಳಲ್ಲಿ ನೂರಾಗಿ ಇರುತ್ತವೆ. ಯುಗದ ನಂತರ ಅಪರ ಸಂಧಿಯು ಮೊದಲಿನ ಸಂಧಿಕಾಲದಷ್ಟೇ ಇರುವುದು. ಪೂರ್ವ ಸಂಧಿ, ಉತ್ತರ ಸಂಧಿ ಇವುಗಳ ಮಧ್ಯಕಾಲವು ಕೃತ, ತ್ರೇತಾ, ದ್ವಾಪರ, ಕಲಿ ಯುಗಗಳೆಂದು ಹೇಳಲ್ಪಡುತ್ತವೆ, ಎಂದು ತಿಳಿಯಬೇಕು.

ಈ ಪ್ರಕಾರವಾಗಿ ಬ್ರಹ್ಮನ ವರುಷವು ಇದೆ. ಬ್ರಹ್ಮನಿಗೆ ನೂರು ಸಂವತ್ಸರ ಆಯುಸ್ಸು. ಬ್ರಹ್ಮನ ಈ ಆಯುಸ್ಸಿಗೆ 'ಪರ'ವೆಂದು ಹೆಸರು.

4. **ಅನಾದಿರ್ಭಗವಾನ್ ಕಾಲೋ ನಾಂತೋಽಸ್ಯ ದ್ವಿಜ ವಿದ್ಯತೇ – (ಶ್ರೀವಿ.ಪು.1-2-28)**
ಪೂಜ್ಯವಾದ ಕಾಲವಾದರೋ ಅನಾದಿಯಾದದ್ದು. ಈ ಕಾಲಕ್ಕೆ ಅಂತ್ಯವೇ ಇಲ್ಲ.

5. **ನ ಕಾಲಸ್ತತ್ರವೈ ಪ್ರಭುಃ – (ಮೋಕ್ಷ ಧರ್ಮ ಪುರಾಣ)**
ಆ ಪರಮ ಪದದಲ್ಲಿ ಕಾಲವು ಆಳುವಂತಹುದಲ್ಲ ಎಂಬುದು ಪ್ರಸಿದ್ಧ.

6. **ಪರಸ್ಯ ಬ್ರಹ್ಮಣೋ ರೂಪಂ ................ ಕಾಲಸ್ಯ ತಥಾಪರಂ – (ಶ್ರೀವಿ.ಪು.1-2-17)**
ಹೇ ಬ್ರಾಹ್ಮಣನೇ! ಬೃಹತ್ವವೆಂಬ ಗುಣದೊಡನೆ ಕೂಡಿದ ಪರಮ ಪುರುಷನಿಗೆ ಜೀವಾತ್ಮವು ಪ್ರಥಮ ಶರೀರವು. ಆ ಪ್ರಕಾರವೇ ವಿಲಕ್ಷಣವಾದ ವ್ಯಕ್ತಾವ್ಯಕ್ತಗಳು ಶರೀರಗಳು ನಂತರ ಕಾಲವೂ ಶರೀರ.

7. **ಪ್ರಧಾನ ಪುರುಷ ................ ಹೇತವಃ – (ಶ್ರೀ ವಿ.ಪು. 1-2-19)**
ಪ್ರಧಾನ ಪುರುಷ. ವ್ಯಕ್ತ, ಕಾಲಗಳು ಪರಮ ಪುರುಷನ ರೂಪಗಳು. ಒಂದೊಂದೂ ವಿಕಾರಿತ್ವ, ಭೋಕ್ತೃತ್ವ ಮೊದಲಾದ ಸ್ವಭಾವಗಳನ್ನುಳ್ಳದ್ದಾಗಿ ಸೃಷ್ಟಿ, ಸ್ಥಿತಿ, ನಾಶ, ಪ್ರಕಾಶ, ಸದ್ಭಾವ ಇವುಗಳಿಗೆ ಕಾರಣಗಳಾಗಿರುತ್ತವೆ.

8. **ವಿಷ್ಣೋಃ ಸ್ವರೂಪಾತ್................ ಕಾಲ ಸಂಜ್ಞಮ್ – (ಶ್ರೀ ವಿ.ಪು. 1-2-26)**
ಹೇ ಮೈತ್ರೇಯ! ಸರ್ವೋತ್ತಮನಾದ ವಿಷ್ಣುವಿನ ಶರೀರದಿಂದ ಪ್ರಧಾನ ಪುರುಷ ಎಂಬ ಎರಡು ರೂಪಗಳು ಯಾವುದು ಉಂಟಾಗಿದೆಯೋ ಅವುಗಳು ಸೃಷ್ಟಿಗೆ ಅನುಗುಣವಾಗಿ ಹೇಗೆ ಆಗುತ್ತವೆಯೋ ಹಾಗೆ, ಆ ಪರಮಾತ್ಮನ ಯಾವ ಶರೀರದಿಂದ ಧರಿಸಲ್ಪಟ್ಟಿದೆಯೋ ಅದು ಕಾಲವೆಂದು ಹೇಳಲ್ಪಡುವ ರೂಪ.

## ಸೂತ್ರ - 50

1. **ಕಲಾ ಮುಹೂರ್ತಾಃ ............... ಸರ್ವಶಃ – (ತೈತ್ತಿರೀಯ ಉಪನಿಷತ್ 2-1-8)**
ಹದಿನೈದು ನಿಮಿಷಗಳನ್ನೊಳಗೊಂಡದ್ದು ಕಾಷ್ಠೆ, ಮೂವತ್ತು ಕಾಷ್ಠೆಯಿಂದ ಕೂಡಿದ್ದು ಕಲಾ, ಕಲಾ ಮೂವತ್ತನ್ನುಳ್ಳದ್ದು ಮುಹೂರ್ತವೂ, ಅಹೋರಾತ್ರಗಳಿಂದ ಅಂದರೆ ದಿನವೂ, ಪಕ್ಷವೂ, ಚಿತ್ತಾ ಮೊದಲಾದ ಮಾಸವೂ, ಋತುಗಳೂ, ಪ್ರಭವಾದಿ ಸಂವತ್ಸರಗಳೂ, ಸಮಸ್ತವೂ ಶ್ರೀಮನ್ನಾರಾಯಣನಿಂದ ಸೃಷ್ಟಿಸಲ್ಪಟ್ಟವು.

2. **ಮಧುಶ್ಚ ಮಾಧವಶ್ಚ .................. ಗ್ರೈಷ್ಮಾವೃತೂ – (ಯಜುರ್ವೇದ ಕಠವಲ್ಲಿ -4)**
ಚೈತ್ರಮಾಸವೂ, ವೈಶಾಖ ಮಾಸವೂ, ವಸಂತ ಋತುವೆಂದು ಹೇಳಲ್ಪಡುವುದು. ಜೇಷ್ಠ, ಅಷಾಢ ಮಾಸವು, ಗ್ರೀಷ್ಮ ಋತುವೆಂದೂ ಹೇಳಲ್ಪಡುವುದು.

3. **ಕಾಲ ಸ್ವರೂಪಂ .................. ತವಾನಘ – (ಶ್ರೀ ವಿ.ಪು. 1-3-6)**
ನಿರ್ದುಷ್ಪರಾದ ಮೈತ್ರೇಯರೇ- ಯಾವ ವಿಷ್ಣುವಿನ ಕಾಲಸ್ವರೂಪವು ನನ್ನಿಂದ ಹೇಳಲ್ಪಟ್ಟಿದೆಯೋ.

## ಸೂತ್ರ - 51

1. **ದ್ರವ್ಯಾಣಿ .................. ನ ವೈವ – (ತರ್ಕ ಸಂಗ್ರಹಃ)**
ಭೂಮಿ, ಜಲ, ಅಗ್ನಿ, ಆಕಾಶ, ಕಾಲ, ದಿಕ್ಕು, ಆತ್ಮಾ, ಮನಸ್ಸುಗಳೆಂಬುದಾಗಿ ಒಂಭತ್ತು ಇವೆ.

2. **ಪುರಾವೋ ....................... ನವ ತದ್ವಿಧಃ**
ಭೂಮಿ, ಜಲ, ವಾಯು, ಆಕಾಶ, ಕಾಲ, ಆ ಪ್ರಕಾರವೂ ದಿಕ್ಕುಗಳು ಆತ್ಮಾ, ಮನಸ್ಸುಗಳೆಂಬ ದ್ರವ್ಯಗಳು ಒಂಭತ್ತು ಎಂದು ಬಲ್ಲವರು ಹೇಳುತ್ತಾರೆ.

## ಸೂತ್ರ - 52

1. **ನೈ ವಾಸ್ತಮಯಮರ್ಕಸ್ಯ ................ ಯತಃ।**
ಸಮಸ್ತ ಕಾಲದಲ್ಲೂ ಇರುವ ಸೂರ್ಯನಿಗೆ ಅಸ್ತಮಾನವು ಇಲ್ಲ, ಉದಯವೂ ಇಲ್ಲ. ಸೂರ್ಯನ ದರ್ಶನ, ಅದರ್ಶನ ಇವುಗಳನ್ನು, ಉದಯಾಸ್ತಮಾನಗಳೆಂದು ಹೇಳುತ್ತಾರೋ, ಯಾವ ಕಾರಣದಿಂದ ಸಮಸ್ತವಾದ ದ್ವೀಪ, ವರ್ಷಗಳಿಗೆ ಎಂದರೆ ಭೂಮಿಯ ವಿಪಾಕಗಳಿಗೆ ಮೇರು ಪರ್ವತವು ಉತ್ತರಕ್ಕಿರುವುದೋ ಅದರಿಂದ ಆಗಿದೆ.

## ಸೂತ್ರ - 53

1. **ನ ಚ .................. ಶಕ್ಯಮ್ – (ಶ್ರೀ ಭಾಷ್ಯ 2-2-23)**
ಪೃಥಿವ್ಯಾದಿಗಳ ಅಭಾವವು ಆಕಾಶವು ಎಂದು ಹೇಳಲ್ಪಡುವುದು ಸಮರ್ಪಕವಲ್ಲ.

## ಸೂತ್ರ - 54

1. **ಅತ್ರ ............ ಪತತಿ।**
ಈ ಆಕಾಶದಲ್ಲಿ ಪಕ್ಷಿ ವಿಶೇಷವು ಹಾರುತ್ತದೆ. ಇಲ್ಲಿ ಹದ್ದು ಹಾರುತ್ತದೆ.

2. **ಆಕಾಶೇ ಚಾವಿಶೇಷಾತ್ – (ಬ್ರಹ್ಮ ಸೂತ್ರ, 2-2-23)**
ಆಕಾಶದಲ್ಲೂ ತುಚ್ಛ ಸ್ವರೂಪವು ಹೇಳಲ್ಪಡಕೂಡದು. ಏಕೆಂದರೆ ಪೃಥ್ವಿಯಂತೆ ಇದಕ್ಕೂ ಅಬಾಧಿತವಾದ

ಪ್ರತೀತಿಯಲ್ಲಿ ವಿಶೇಷವಿಲ್ಲದ್ದರಿಂದ. ಇಲ್ಲಿ 'ಹದ್ದು ಹಾರುತ್ತದೆ' ಎಂದು ಹಾರುವಿಕೆಗೆ ಇದು ಆಶ್ರಯವಾಗಿರುವುದರಿಂದ ಆಕಾಶವು ತೋರುವುದು.

3. **ಆಕಾಶೇ ಚ .................. ಶ್ಯೇನಾದಿಪತನ ದೇಶತ್ವೇನ – (ಶ್ರೀ ಭಾಷ್ಯಂ 2-2-23)**

ಆಕಾಶವು ರೂಪವಿಲ್ಲದ್ದು ಎಂಬುದು ಯುಕ್ತವಲ್ಲ. ಭಾವ ರೂಪವಾಗಿ ಒಪ್ಪಿಕೊಳ್ಳಲ್ಪಟ್ಟ ಪೃಥಿವ್ಯಾದಿಗಳಂತೆ ಆಕಾಶಕ್ಕೂ ಅಬಾಧಿತವಾದ ಜ್ಞಾನಕ್ಕೆ ವಿಷಯವಾಗುವುದರಲ್ಲಿ ಯಾವ ಕೊರತೆಯೂ ಇಲ್ಲದ್ದರಿಂದ. ಈ ಸ್ಥಳದಲ್ಲಿ ಪಕ್ಷಿ ಸಂಚರಿಸುತ್ತದೆ. ಇಲ್ಲಿ ಹದ್ದು ಸಂಚರಿಸುತ್ತದೆ ಎಂದು ಪಕ್ಷಿ ವಿಶೇಷಗಳು ಸಂಚರಿಸುವ ದೇಶವಾಗಿ ಆಕಾಶವು ಪ್ರಸಿದ್ಧವಾಗಿ ಕಾಣಲ್ಪಡುವುದರಿಂದ.

## ಸೂತ್ರ – 56

1. **ಅಂಡಾಂತರ್ವರ್ತೀ .................. ಚಕ್ಷುತ್ವೇಪಿ ಅವಿರೋಧಃ – (ಶ್ರೀ ಭಾಷ್ಯಂ 2-2-23)**

ಅಂಡದಲ್ಲಿರುವ ಆಕಾಶಕ್ಕೂ ತ್ರಿವೃತ್ಕರಣೋಪದೇಶದಿಂದ ತೋರಲ್ಪಡುವ ಪಂಚೀಕರಣದಿಂದಲೂ, ಪೃಥಿವ್ಯಾದಿಗಳ ಭಾಗಗಳನ್ನು ಸೇರಿಸಿ ಆಕಾಶವನ್ನು ಉಂಟುಮಾಡಿದ ಎಂಬುದರಿಂದ ತೋರುವುದರಿಂದಲೂ, ಕಣ್ಣಿನಿಂದ ನೋಡಲ್ಪಡುವಂತಹುದಾಗಿರುವುದರಿಂದಲೂ ವಿರೋಧವಿಲ್ಲ.

**|| ಅಚಿತ್ ಪ್ರಕರಣಮ್ ಸಂಪೂರ್ಣಂ ||**

**| ವಾನಮಾಮಲೈಜೀಯರ್ ತಿರುವಡಿಗಳೇ ಶರಣಮ್ |**

# ಈಶ್ವರ ಪ್ರಕರಣಮ್

## ಸೂತ್ರ - 1

1. ಸತ್ಯಂ ಜ್ಞಾನಂ ಅನಂತಂ ಬ್ರಹ್ಮ – (ತೈತ್ತಿರೀಯ ಉಪನಿಷತ್. 1-1)
ಬ್ರಹ್ಮವು ವಿಕಾರರಹಿತವಾದದ್ದು, ಸ್ವಯಂ ಪ್ರಕಾಶವಾದದ್ದು. ಅಪರಿಚ್ಛಿನ್ನವಾದುದು.

2. ಅಖಿಲಹೇಯ ಪ್ರತ್ಯನೀಕ .............. ಸ್ವರೂಪ – (ಶರಣಾಗತಿ ಗದ್ಯಂ)
ಸಮಸ್ತವಾದ ಹೇಯಗಳಿಗೆ ವಿರುದ್ಧವಾಗಿಯೂ, ಕಲ್ಯಾಣಗುಣಗಳಿಗೆ ಮುಖ್ಯಾಶ್ರಯವಾಗಿಯೂ, ತನ್ನ ಹೊರತಾದ ಸಮಸ್ತ ವಸ್ತುಗಳಿಗಿಂತ ವಿಲಕ್ಷಣವಾಗಿಯೂ, ಎಲ್ಲೆಯಿಲ್ಲದ ಜ್ಞಾನಾನಂದಗಳನ್ನುಳ್ಳ ಸ್ವರೂಪನಾದವನೇ।

3. ಯಸ್ಸರ್ವಜ್ಞಃ ಸರ್ವವಿತ್ – (ಮುಂಡಕೋಪನಿಷತ್ 2-2-9)
ಯಾರು ಸರ್ವವನ್ನೂ ಅರಿತವನೋ, ಸರ್ವದ ಪ್ರಕಾರಗಳನ್ನೂ ಅರಿತವನೋ.

4. ಪರಾಸ್ಯಶಕ್ತಿಃ ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ – (ಶ್ವೇತಾಶ್ವತರೋಪನಿಷತ್)
ಹೀಗಿರುವ ಈ ಬ್ರಹ್ಮನಿಗೆ ಉತ್ಕೃಷ್ಟವಾದುದೂ, ಸ್ವತಸ್ಸಿದ್ಧವಾದದ್ದೂ, ಆದ ಜ್ಞಾನಶಕ್ತ್ಯಾದಿಗಳು ಅನೇಕ ಪ್ರಕಾರಗಳಾಗಿರುತ್ತವೆಯೆಂದು ಪ್ರಸಿದ್ಧವಾಗಿದೆ. ಜ್ಞಾನ ಬಲಗಳ ನಿಯಮವೂ ಸ್ವತಸ್ಸಿದ್ಧವಾಗಿದೆ.

5. ಸಕಲಕಲ್ಯಾಣಗುಣಾಮೃತೋಽಸೌ – (ಶ್ರೀ ವಿ.ಪು. 6-5-84)
ಈ ಈಶ್ವರನು ಸಮಸ್ತ ಕಲ್ಯಾಣಗುಣಗಳನ್ನು ಸ್ವಾಭಾವಿಕವಾಗಿಯೇ ಉಳ್ಳವನು.

6. ಯತೋ ವಾ ..................... ತದ್ಬ್ರಹ್ಮ – (ತೈ ಉಪನಿಷತ್. ಶಿಕ್ಷಾವಲ್ಲಿ)
ಯಾರಿಂದ ಈ ಸಮಸ್ತ ಭೂತಗಳೂ ಉಂಟಾಗುತ್ತವೋ, ಯಾರಿಂದ ಉಂಟಾದವುಗಳು ಜೀವಿಸುತ್ತವೋ, ಯಾರಿಂದ ನಾಶವನ್ನು ಹೊಂದುತ್ತವೋ ಅವನನ್ನು ಬ್ರಹ್ಮ ಎಂದು ತಿಳಿಯುವವನಾಗು.

7. ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ – (ಭಗವದ್ಗೀತೆ 7-16)
ಕಳೆದುಕೊಂಡ ಐಶ್ವರ್ಯವನ್ನು ಅಪೇಕ್ಷಿಸುವವನು, ಹೊಸದಾಗಿ ಐಶ್ವರ್ಯವನ್ನು ಬಯಸುವವನು, ಆತ್ಮ ಸ್ವರೂಪವನ್ನು ಹೊಂದಲಿಚ್ಛಿಸುವವನೂ, ಭಗವತ್ಪ್ರಾಪ್ತಿಕಾಮನೆಂಬ ನಾಲ್ವರೂ ನನ್ನನ್ನು ಆಶ್ರಯಿಸುತ್ತಾರೆ.

8. ಆರ್ತಃ ಪ್ರತಿಷ್ಠಾ ಹೀನಃ ............ ಪರಮಪ್ರಾಪ್ಯಂ ಮನ್ವಾನಃ – (ಶ್ರೀ ಗೀತಾ ಭಾಷ್ಯಂ 7-16)
ಐಶ್ವರ್ಯವನ್ನು ಕಳೆದುಕೊಂಡವನಾಗಿಯೂ, ಮತ್ತೆ ಆ ಐಶ್ವರ್ಯವನ್ನು ಆಸೆ ಪಡುವವನೂ, 'ಆರ್ತ' ನೆನಿಸುತ್ತಾನೆ. ನೂತನವಾಗಿ ನಿರವಧಿಕವಾದ ಐಶ್ವರ್ಯವನ್ನು ಅಪೇಕ್ಷಿಸುವವನು 'ಅರ್ಥಾರ್ಥೀ' ಎನಿಸುತ್ತಾನೆ. ಇವರಿಬ್ಬರಿಗೂ ಮುಖ ಭೇಧ ಮಾತ್ರವೇ. ಇವರಿಬ್ಬರೂ ಐಶ್ವರ್ಯ ಕಾಮರಾದ್ದರಿಂದ ಒಂದೇ ಅಧಿಕಾರಿಗಳು. ಪ್ರಕೃತಿಯಿಂದ ಬಿಡಲ್ಪಟ್ಟ ಆತ್ಮ ಸ್ವರೂಪವನ್ನು ಹೊಂದಲಿಚ್ಛಿಸುವ ಕೇವಲರು, 'ಜಿಜ್ಞಾಸು' ಎನಿಸುತ್ತಾರೆ. ಜ್ಞಾನವೇ ಈ ಕೇವಲರಿಗೆ ಸ್ವರೂಪವೆಂಬ ಕಾರಣದಿಂದ ಇವರುಗಳನ್ನು 'ಜಿಜ್ಞಾಸು' ಗಳು ಎನ್ನಲಾಗಿದೆ. 'ಜ್ಞಾನಿ'ಯು ಇದಕ್ಕಿಂತಲೂ ಭಿನ್ನವಾದ ಪ್ರಕೃತಿಯನ್ನು, ನನ್ನ ಉತ್ಕೃಷ್ಟ ಪ್ರಕೃತಿಯಾಗಿ ಅರಿಯಬೇಕು. ಎಂಬುದರಿಂದ ಭಗವಂತನಿಗೇ ಶೇಷ ಭೂತವಾದ ಆತ್ಮ ಸ್ವರೂಪವನ್ನು ಅರಿತವನಾಗಿ, ಪ್ರಕೃತಿ ಸಂಬಂಧವಿಲ್ಲದವನಾದ ಕೇವಲಾತ್ಮ ಸ್ವರೂಪದಲ್ಲಿ ತೃಪ್ತಿ ಹೊಂದದೆ ಭಗವಂತನನ್ನೇ ಪರಮ ಪ್ರಾಪ್ಯವಾಗಿ ಭಾವಿಸುವವನು.

9. **ಚತುರ್ವಿಧಾ ಮಮ ಜನಾ ................ ಪೃಥಕ್ ಪೃಥಕ್ – (ಮೋಕ್ಷ ಧರ್ಮಪುರಾಣ)**
ನನ್ನವರಾದ ಜನಗಳು ನಾಲ್ಕು ವಿಧವಾಗಿರುತ್ತಾರೆ. ಅವರುಗಳು ಆರ್ತರೆಂದೂ ಜಿಜ್ಞಾಸುಗಳೆಂದೂ ಅರ್ಥಾರ್ಥೀ ಎಂದೂ ಜ್ಞಾನೀ ಎಂದೂ ಹೀಗೆ ಬೇರೆ ಬೇರೆಯಾದ ಭಕ್ತರುಗಳಾಗೇ ಹೇಳಲ್ಪಡುತ್ತಾರೆ.

10. **ಧರ್ಮಾರ್ಥ ............... ಉದಾಹೃತಃ – (ಮೋಕ್ಷಧರ್ಮ)**
ಧರ್ಮ, ಅರ್ಥ, ಕಾಮ, ಮೋಕ್ಷವೆಂದು ಹೆಸರುಳ್ಳ ಆತ್ಮಾನುಭವ ಮತ್ತು ಭಗವದನುಭವಗಳು ಪುರುಷಾರ್ಥಗಳೆನಿಸುತ್ತವೆ.

11. **ದೇವೇಂದ್ರ ................ ಸಕಲ ಫಲ ಪ್ರದೋಹಿ ವಿಷ್ಣುಃ – (ಮಾಂಗಲ್ಯಸ್ತವ)**
ವಿಷ್ಣುವನ್ನು ತನಗೆ ಅನುಗ್ರಹ ಮಾಡುವಂತೆ ಪ್ರಾರ್ಥಿಸಿ, ದೇವೇಂದ್ರನು ಮೂರು ಲೋಕವನ್ನೂ ಪಡೆದ . ಕುಬೇರನು ಧನವನ್ನೂ, ಕಾರ್ತವೀರ್ಯಾರ್ಜುನನು ತ್ರಿಲೋಕದಲ್ಲಿರುವ ಸಕಲ ಸಮೃದ್ಧಿಯನ್ನೂ, ವಿದೇಹರಾಜನು ಪರಮಪದವನ್ನೂ ಪಡೆದರು. ವಿಷ್ಣುವು ಸಕಲ ಫಲವನ್ನೂ ಕೊಡುವವನಾಗಿದ್ದಾನೆ.

12. **ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ – (ತೈ. ಉ. 2-11)**
ಕಪ್ಪಾದ ಮೋಡವನ್ನು ಮಧ್ಯದಲ್ಲುಳ್ಳ ಮಿಂಚಿನಬಳ್ಳಿಯಂತೆ ಪ್ರಕಾಶದಿಂದ ಕೂಡಿದ.

13. **ಸ್ವಾಭಿಮತಾನುರೂಪೈಕರೂಪ ............ ದಿವ್ಯರೂಪ – (ಶರಣಾಗತಿ ಗದ್ಯ)**
ತನಗೆ ಇಷ್ಟವಾಗಿಯೂ, ಅನುರೂಪವಾಗಿಯೂ, ಷಡ್ಭಾವ ವಿಕಾರವಿಲ್ಲದಾಗಿಯೂ, ಇತರ ಪದಾರ್ಥಗಳೊಡನೆ ಸಮವಾಗಿ ಚಿಂತಿಸಲು ಅಶಕ್ಯವಾಗಿ, ಅಪ್ರಾಕೃತವಾಗಿ, ಆಶ್ಚರ್ಯಾವಹವಾಗಿಯೂ, ನಿತ್ಯ ನಿರ್ದೋಷವಾಗಿಯೂ ಇರುವ ಸರ್ವ ತೇಜಸ್ಸುಗಳನ್ನೂ ತೃಣೀಕರಿಸುವ ಅಪ್ರತಿಹತವಾದ ತೇಜಸ್ಸುಳ್ಳ, ಅವಯವ ಶೋಭೆಯೇನು, ಸರ್ವವನ್ನೂ ಪರಿಮಳಿಸುವಂತೆ ಮಾಡಬಲ್ಲ ಗಂಧವೇನು, ಪುಷ್ಪಹಾಸ ಸುಕುಮಾರವಾಗಿರುವಿಕೆಯೇನು, ಲಾವಣ್ಯವೇನು,ಯೌವ್ವನವೇನು, ಇವೇ ಮೊದಲಾದ ಅಸಂಖ್ಯಾತವಾದ ಗುಣಗಳಿಗೆ ಆಶ್ರಯವಾಗಿರುವ ದಿವ್ಯಮಂಗಳ ವಿಗ್ರಹವುಳ್ಳವನೇ.

14. **ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ – (ಯಜುರ್ವೇದ, ಆರಣ್ಯಕ 3 ಪ್ರಶ್ನೆ)**
ತಮಗೆ ಭೂಮಿದೇವಿಯೂ, ಶ್ರೀದೇವಿಯು ಮಹಿಷಿಗಳಾಗಿರುತ್ತಾರೆ.

15. **ವೈಕುಂಠೇತು ............... ಸೇವಿತಃ ಪರಮೇಶ್ವರಃ – (ಶೈವ ಪುರಾಣಂ)**
ಅಚಿಂತ್ಯವಾದ ಸ್ವರೂಪವುಳ್ಳ ಜಗತ್ಪತಿಯಾದ ವಿಷ್ಣುವು ಮನನ ಶೀಲರಾದ ಮುನಿಗಳಿಂದಲೂ, ಕೈಂಕರ್ಯ ಪರರುಗಳಿಂದಲೂ, ದೇವಿಯರೊಡಗೂಡಿ ವೈಕುಂಠವೆಂಬ ಉತ್ಕೃಷ್ಟವಾದ ನಿತ್ಯ ವಿಭೂತಿಯಲ್ಲಿ ಬಿಜಯ ಮಾಡಿಸಿರುತ್ತಾನೆ.

16. **ಸ್ವಾಭಿಮತ ನಿತ್ಯ ನಿರವದ್ಯ ................ ಏವಂ ಭೂತ ಭೂಮಿನೀಳಾನಾಯಕ – (ಶರಣಾಗತಿ ಗದ್ಯ)**
ತನಗಿಷ್ಟವಾಗಿಯೂ, ನಿತ್ಯವಾಗಿಯೂ, ದೋಷವಿಲ್ಲದ್ದಾಗಿಯೂ, ಅನುರೂಪವಾಗಿಯೂ ಇರುವ ದಿವ್ಯಾತ್ಮ ಸ್ವರೂಪವುಳ್ಳ, ದಿವ್ಯಮಂಗಳ ವಿಗ್ರಹವುಳ್ಳ, ಗುಣಗಳುಳ್ಳ, ವಿಭವಗಳುಳ್ಳ, ಐಶ್ವರ್ಯವುಳ್ಳ, ಶೀಲ ಮೊದಲಾದ ಎಲ್ಲೆಯಿಲ್ಲದ ಅತಿಶಯವಾದ, ಅಸಂಖ್ಯೇಯವಾದ ಕಲ್ಯಾಣಗುಣ ಸಮೂಹಗಳನ್ನುಳ್ಳ ಶ್ರೀ ಮಹಾಲಕ್ಷ್ಮಿಗೆ ಪತಿಯಾದವನೇ, ಹೀಗೆಯೇ ಭೂಮಿ, ನೀಳಾದೇವಿಗೂ ನಾಯಕನಾದವನೇ.

## ಸೂತ್ರ - 2

1. ತದ್ಬ್ರಹ್ಮ .................... ಹೇಯಾಭಾವಾಚ್ಚ ನಿರ್ಮಲಮ್ – (ಶ್ರೀ ವಿ.ಪು. 1-2-15)
ಯಾವೊಂದು ಉತ್ಕೃಷ್ಟವಾಗಿಯೂ, ನಿತ್ಯವಾಗಿಯೂ, ಉತ್ಪತ್ತಿ ಇಲ್ಲದ್ದಾಗಿಯೂ, ನಾಶವಿಲ್ಲದ್ದಾಗಿಯೂ, ಕ್ಷೀಣಿಸದ್ದಾಗಿಯೂ, ಯಾವಾಗಲೂ ಏಕರೂಪವಾಗಿಯೂ, ಸರ್ವಕಾಲದಲ್ಲೂ ಹೇಯವಿಲ್ಲದ್ದಾಗಿಯೂ, ನಿರ್ಮಲವಾಗಿಯೂ ಇರುವುದೋ ಅದು ಬ್ರಹ್ಮ.

2. ಸಮಸ್ತ .................... ಪರಮಂ ಪದಂ – (ಶ್ರೀ ವಿ.ಪು. 1-2-1)
ವಿಷ್ಣು ಎಂದು ಹೆಸರನ್ನುಳ್ಳ ಪರಮ ಪ್ರಾಪ್ಯವು ಸಮಸ್ತ ಹೇಯ ರಹಿತವಾದದ್ದು.

3. ಅವಿಕಾರಾಯ .................... ಸರ್ವ ಜಿಷ್ಣವೇ ನಮಃ॥ – ( ಶ್ರೀ ವಿ.ಪು. 1-2-1)
ವಿಕಾರ ಶೂನ್ಯವಾಗಿಯೂ, ಕ್ಲೇಶಕರ್ಮ ಶೂನ್ಯವಾಗಿ ಶುದ್ಧನಾಗಿಯೂ, ನಿತ್ಯನಾಗಿಯೂ, ಸ್ವತಂತ್ರಾತ್ಮನಾಗಿಯೂ, ತನ್ನ ಸ್ವರೂಪಾನುಗುಣವಾದ ದಿವ್ಯ ಮಂಗಳ ವಿಗ್ರಹವುಳ್ಳವನಾಗಿಯೂ, ಎಲ್ಲವನ್ನೂ ಜಯಿಸುವಂತವನಾಗಿಯೂ, ಇರುವ ವಿಷ್ಣುವನ್ನು ನಮಿಸುತ್ತೇನೆ.

## ಸೂತ್ರ - 3

1. ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ – (ಮುಡಕೋಪನಿಷತ್)
ನಿತ್ಯನಾಗಿಯೂ, ವಿಭುವಾಗಿಯೂ, ಸರ್ವವನ್ನೂ ಪ್ರವೇಶಿಸುವವನಾಗಿಯೂ, ಅತಿಸೂಕ್ಷ್ಮನಾದವನೂ

2. ಅಂತಃ ಪ್ರವಿಷ್ಟ ಶಾಸ್ತಾ ಜನಾನಾಂ ಸರ್ವಾತ್ಮಾ – (ತೈತ್ತಿರೀಯ ಉಪನಿಷತ್)
ಎಲ್ಲ ಚೇತನರ ಒಳಗೂ ವ್ಯಾಪಿಸಿ ನಿಯಾಮಕನಾಗಿಯೂ ಚೇತನರಿಗೆ ಆತ್ಮಾ ಆಗಿಯೂ ಇದ್ದಾನೆ.

3. ನ ತತ್ ಸಮಸ್ಚಾಭ್ಯಧಿಕಶ್ಚ ದೃಶ್ಯತೇ – (ಶ್ವೇತಾಶ್ವತರ)
ಆ ಪರಮಾತ್ಮನಿಗೆ ಸಮಾನರಾದವರೂ, ಅವನಿಗಿಂತ ಅಧಿಕರಾದವರೂ ಕಂಡುಬರುವುದಿಲ್ಲ.

## ಸೂತ್ರ - 5

1. ಆವಿಶೇರುಯಿರಿನುಳ್ಳಾ .............. ಕೂಡಲಾಮೇ – (ತಿರುವಾಯ್ಮೊಳಿ 3-4-10)

2. ಏಷಃ ಸರ್ವ ಭೂತಾಂತ್ಮರಾತ್ಮ ಅಪಹತಪಾಪ್ಮಾ.......... ನಾರಾಯಣಃ – (ಸುಬಾಲೋಪನಿಷತ್)
ಸರ್ವಭೂತಗಳಿಗೂ ಅಂತರಾತ್ಮವಾಗಿಯೂ, ಹೀಗೆ ಅಂತರಾತ್ಮಾವಾಗಿದ್ದರೂ ಅವುಗಳ ದೋಷಗಳೊಂದೂ ತನಗೆ ತಟ್ಟದಂತೆ ಇರುವವನೂ, ಪರಮಪದದಲ್ಲಿರುವವನೂ, ಸ್ವಯಂ ಪ್ರಕಾಶಕನಾಗಿರುವವನೂ ಅದ್ವಿತೀಯನೂ ಆದ ಈ ನಾರಾಯಣನು.

3. ಅನಶ್ನನ್ ಅನ್ಯಃ .............. ಅಭಿಚಾಕಶೀತಿ – (ಋಗ್ವೇದ ದ್ವಾಸುಪರ್ಣಾಶ್ರುತಿ)
ಒಳ್ಳೆಯ ಜ್ಞಾನ ರೂಪವಾದ ರೆಕ್ಕೆಗಳನ್ನುಳ್ಳವರಾಗಿಯೂ, ಒಬ್ಬರಿಗೊಬ್ಬರು ಸಮಾನರುಗಳಾಗಿಯೂ, ಶೇಷ ಶೇಷಿ ಭಾವದೊಡನೆ ಕೂಡಿದವರಾಗಿ (ಎರಡು ಹಕ್ಕಿಗಳು) ಒಂದೇ ಶರೀರವನ್ನು (ಮರವನ್ನು)

ಆಶ್ರಯಿಸಿರುತ್ತಾರೆ. ಆ ಜೀವ ಈಶ್ವರರಲ್ಲಿ ಜೀವನಾದವನು (ಒಂದು ಹಕ್ಕಿಯು) ಕರ್ಮಫಲವನ್ನು ಸ್ವಾದಿಷ್ಟವಾಗಿ ಭುಜಿಸುತ್ತಾನೆ. ಮತ್ತೊಂದು (ಈಶ್ವರನು) ಭುಜಿಸದೆಯೇ ವಿಶೇಷವಾಗಿ ಪ್ರಕಾಶಿಸುತ್ತಾನೆ.

## ಸೂತ್ರ - 7

1. **ಅನನ್ಯಾಧೀನ ಪ್ರಕಾಶತ್ವ ................. ಸ್ವರೂಪಃ**
   ಬೇರೊಂದಕ್ಕೆ ಅಧೀನವಲ್ಲದ ಪ್ರಕಾಶತ್ವವೂ, ಆಹ್ಲಾದಕರ ರೂಪವಾದ ಜ್ಞಾನವೂ ಯಾವ ವಸ್ತುವಿಗೆ ಸ್ವರೂಪವೋ ಅದೇ ಜ್ಞಾನಾನಂದ ಸ್ವರೂಪವಾಗಿರುವುದು.

## ಸೂತ್ರ - 8

1. **ತ ಇಮೇ ಸತ್ಯಾಃ ಕಾಮಾಃ – (ಛಾಂದೋಗ್ಯ ಉಪನಿಷತ್)**
   ಅದುವೇ ಈ ಸತ್ಯವಾದ ಕಲ್ಯಾಣಗುಣಗಳು.
2. **ಕಾಮ್ಯಂತ ಇತಿ ಕಾಮಾಃ ........... ಇತ್ಯರ್ಥಃ**
   ಈ ಕಲ್ಯಾಣಗುಣಗಳು ಬಯಸಲ್ಪಡುವಂತಹವುಗಳಾದ್ದರಿಂದ 'ಕಾಮ' ಗಳು ಎನಿಸಲ್ಪಡುತ್ತವೆ. 'ಸತ್ಯ' ವೆಂದರೆ 'ನಿತ್ಯ' ಎಂದು ಈ ಶ್ರುತಿಗೆ ಅರ್ಥ.
3. **ಈ ರಿಲವಣ್ ಪುಹಳ್ – (ತಿರುವಾಯ್ಮೊಳಿ 1-2-10)**
4. **ಯತೋವಾಚೋ .................ಮನಸಾ ಸಹ – (ತೈತ್ತಿರೀಯ, ಆನಂದವಲ್ಲಿ)**
   ಯಾವ ಪರಮಾತ್ಮನಿಂದ ವೇದವಾಕ್‌ಗಳು ಹಿಂತಿರುಗುತ್ತವೆಯೋ, ಮನಸ್ಸಿನಿಂದಲೂ ಕೂಡ ಯಾವುದನ್ನು ಹೊಂದಲು ಸಾಧ್ಯವಿಲ್ಲವೋ.
5. **ಉಪರ್ಯು ಪರ್ಯಬ್ಜ .............. ನೋದ್ಯಮತೋತಿಶೇರತೇ – (ಸ್ತೋತ್ರ ರತ್ನ 19)**
   ವೇದವಾಕ್‌ಗಳು ಪ್ರಜಾಪತಿಗೂ ಮೇಲೆ ಮೇಲೆ ಮನುಷ್ಯರುಗಳನ್ನು ನೂರು ನೂರು ಪಟ್ಟು ಎಂಬ ಪ್ರಕಾರವಾಗಿ ಕಲ್ಪಿಸಿ, ಒಂದೊಂದು ಕಲ್ಯಾಣ ಗುಣಗಳ ಅವಧಿಯನ್ನು ಹೊಂದುವ ಇಚ್ಛೆಯಿಂದ ನಿರಂತರವಾಗಿ ಯತ್ನಿಸಿ ಆರಂಭಿಸಿದ ಘಟ್ಟಕ್ಕಿಂತ ಮುಂದೆ ಹೋಗಲೇ ಇಲ್ಲ.
6. **ಉಯರ್ವ್ವರ ಉಯರ್ ನಲಂ – (ತಿರುವಾಯ್ಮೊಳಿ 1-1-1)**
7. **ಯಥಾ ರತ್ನಾನಿ ಜಲಧೇ ............. ಮಹಾತ್ಮನ ಃ**
   ಎಲ್ಲೈ ಮಗುವೇ! ಸಮುದ್ರದಲ್ಲಿ ರತ್ನಗಳು ಹೇಗೆ ಎಣಿಸಲಾರದಂತೆ ಇವೆಯೋ, ಹಾಗೆಯೇ ಮಹಾತ್ಮನಾದ ಭಗವಂತನ ಗುಣಗಳು ಎಣಿಸಲಾರದಷ್ಟಿವೆ.
8. **ವರ್ಷಾಯುತೈರಸ್ಯ ........... ವಸುದೇವಾತ್ಮಜಸ್ಯ – (ಶ್ರೀಮನ್ಮಹಾಭಾರತ ಭೀಷ್ಮಪರ್ವ)**
   ಮಹಾತ್ಮನೂ, ಶಂಖ, ಚಕ್ರ, ಗದೆ, ಕತ್ತಿ ಮೊದಲಾದ ಆಯುಧಗಳನ್ನು ಧರಿಸಿದವನೂ, ಜಯಶೀಲನೂ, ವಸುದೇವಪುತ್ರನೂ ಆದ ವಿಷ್ಣುವಿನ ಯಾವ ಕಲ್ಯಾಣಗುಣಗಳು ಎಲ್ಲ ಜನರೂ ಸೇರಿ, ಹಲವು ಸಾವಿರ ವರ್ಷಗಳು ಕೊಂಡಾಡಿದರೂ ಮುಗಿಯುವುದಿಲ್ಲ.

**9. ನ ಹಿ ತಸ್ಯ ............ ಸತ್ವಾದ್ಯೈರಖಿಲೈರ್ಗುಣಾಃ**

ಸತ್ವಗುಣವನ್ನೇ ಪ್ರಧಾನವಾಗುಳ್ಳ ಸಮಸ್ತಗುಣಗಳಿಂದ ಕೂಡಿರುವ ಆ ಪರಮಾತ್ಮನ ಸಮಸ್ತಗುಣಗಳೂ ಸಮಸ್ತ ಋಷಿಗಣಗಳಿಂದಲೂ ಹೇಳಲ್ಪಡುವುದಕ್ಕೆ ಅಶಕ್ಯವಾದುದು ಎಂದು ಪ್ರಸಿದ್ಧವು.

**10. ಎಣ್ಣಿಲ್ ತೊಲ್‌ಪುಹಳ್ – (ತಿರುವಾಯ್ಮೊಳ್ 3-3-3)**

**11. ಏಕೈಕಸ್ಯ ................ ವನಾದ್ರೀಶ್ವರಮ್ – (ಸುಂದರಬಾಹುಸ್ತವ 26)**

ಒಂದೊಂದು ಗುಣದ ಅಲ್ಪಾಂಶವೂ, ತನಗೆ ಆಶ್ರಯವಾದ ಗುಣಿಯನ್ನು ಲೋಕೋತ್ತರನನ್ನಾಗಿ ಮಾಡುವಂತೆ ಪೋಣಿಸಲ್ಪಟ್ಟು ವೈಭವವುಳ್ಳದ್ದಾಗಿಯೂ, ಅಸಂಖ್ಯಾತವಾಗಿಯೂ, ಎಲ್ಲೆಯಿಲ್ಲದವುಗಳಾಗಿಯೂ, ನಿತ್ಯವಾಗಿಯೂ, ಅದಕ್ಕಿಂತ ಅಧಿಕವಾದ ಮುಖ್ಯಾಧಾರವಾದ ದಿವ್ಯಾತ್ಮ ಸ್ವರೂಪವನ್ನು ಆಶ್ರಯಿಸಿದವುಗಳಾಗಿಯೂ, ಇರುವ ದಿವ್ಯ ಗುಣಗಳಿಂದ ಸಮೃದ್ಧನಾಗಿರುವ, ತಿರುಮಾಲಿರುಂ ಶೋಲೈಮಲೈಗೆ ನಿರ್ವಾಹಕನಾದ ಸುಂದರಬಾಹುವನ್ನು ನಾನು ಶರಣು ಹೊಂದಿದ್ದೇನೆ.

**12. ಸ್ವಭಾವತೋ ............... ಪುರುಷೋತ್ತಮೋಭಿಧೀಯತೇ – (ಶ್ರೀ ಭಾಷ್ಯಂ)**

ಸ್ವಾಭಾವಿಕವಾಗಿಯೇ ಸಮಸ್ತ ದೋಷ ರಹಿತನಾಗಿ ಎಲ್ಲೆಯಿಲ್ಲದ ಅತಿಶಯವಾದ ಕಲ್ಯಾಣ ಗುಣಗಳನ್ನುಳ್ಳವನಾಗಿರುವವನು ಪುರುಷೋತ್ತಮ ಎನಿಸಲ್ಪಡುತ್ತಾನೆ.

**13. ಅನುಷಕ್ತೇನ ............. ಭಗವನ್ನಿತ್ಯೇಚ್ಛಾಧೀನಂ – (ಶ್ರುತ ಪ್ರಕಾಶಿಕಾ)**

'ಸ್ವಭಾವತಃ' ಎಂದು ಸೇರಿಸಲ್ಪಟ್ಟ ಪದದಿಂದ ನಿತ್ಯ ಸಿದ್ಧರೊಡನೆ ವ್ಯಾವೃತ್ತಿ(ವ್ಯತ್ಯಾಸ)ಯು ಹೇಳಲ್ಪಟ್ಟಿದೆ. ನಿತ್ಯ ಸಿದ್ಧರಿಗೆ ಇಂತಹ ಗುಣಗಳು 'ಅವರಿಗೆ ಇವು ನಿತ್ಯವಾಗಿ ಇರಲಿ' ಎಂಬ ಭಗವಂತನ ಸಂಕಲ್ಪದಿಂದ ಏರ್ಪಟ್ಟವುಗಳಾಗಿವೆ.

**14. ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾಚ – (ಶ್ವೇ. ಉ.)**

ಜ್ಞಾನ, ಬಲ, ನಿಯಮನ ಎಂಬುದು ಸ್ವಭಾವ ಸಿದ್ಧವಾದದ್ದು.

**15. ಪರಾಸ್ಯೇತಿ ........... ನಿಯಮನಂ – (ಶ್ರುತ ಪ್ರಕಾಶಿಕಾ)**

'ಪರಾಸ್ಯ' ಎಂದು ಜ್ಞಾನಶಕ್ತ್ಯಾದಿಗಳಿಗೆ ಸ್ವಾಭಾವಿಕತ್ವವು ಹೇಳಲ್ಪಟ್ಟಿತು. 'ಕ್ರಿಯಾ' ಎಂದರೆ ಇಲ್ಲಿ ನಿಯಮನ ಎಂದರ್ಥ.

**16. ಅಪಹತಪಾಪ್ಮಾ ............. ಸತ್ಯ ಸಂಕಲ್ಪಃ – (ಛಾಂದೋಗ್ಯ ಉಪನಿಷತ್ 8)**

ಪಾಪವಿಲ್ಲದವನು, ಮುಪ್ಪಿಲ್ಲದವನು, ಮೃತ್ಯುವಿಲ್ಲದವನು, ಶೋಕವಿಲ್ಲದವನು, ಹಸಿವಿಲ್ಲದವನು, ದಾಹವಿಲ್ಲದವನು, ಯಥಾರ್ಥವಾದ ಕಲ್ಯಾಣಗುಣಗಳನ್ನುಳ್ಳವನು, ಸತ್ಯವಾಗುವ ಸಂಕಲ್ಪವುಳ್ಳವನು.

**17. ಸತ್ವಾದಯೋ ನ ಸಂತೀಶೇ ಯತ್ರ ಚ ಪ್ರಾಕೃತಾಗುಣಾಃ**

ಯಾವ ನಿಯಾಮಕನಾದ ಪರಮಾತ್ಮನಲ್ಲಿ ಪ್ರಾಕೃತವಾದ ಸತ್ವಾದಿ ಗುಣಗಳು ಇಲ್ಲವೋ.

**18. ಜ್ಞಾನ ಶಕ್ತಿ .............. ವಿನಾ ಹೇಯೈರ್ಗುಣಾದಿಭಿಃ – (ಶ್ರೀ ವಿ.ಪು. 6-5-79)**

ಹೇಯಗುಣವಿಲ್ಲದೆ ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್‌ಗಳೆಂಬ ಆರು ಗುಣಗಳು ಭಗವತ್ ಶಬ್ದ ವಾಚ್ಯಗಳಾಗಿವೆ.

19. ತೇಜೋಬಲೈಶ್ವರ್ಯ ............ ಪರಾವರೇಶೇ – (ಶ್ರೀ ವಿ.ಪು. 6-8-85)

ತೇಜಸ್, ಬಲ, ಐಶ್ವರ್ಯ, ಶ್ಲಾಘ್ಯವಾದ ಜ್ಞಾನ, ವೀರ್ಯ, ಶಕ್ತಿ, ಇವೇ ಮುಂತಾದ ಗುಣಗಳಿಗೆ ಏಕಾಶ್ರಯವಾಗಿಯೂ, ಬ್ರಹ್ಮಾದಿಗಳಿಗೆ ಪರನಾಗಿಯೂ ಸರ್ವೇಶ್ವರನಿದ್ದಾನೆ. ಆ ಪರನಾದ ಸರ್ವೇಶ್ವರನಲ್ಲಿ ಸಮಸ್ತವಾದ ಕ್ಲೇಶಗಳು ಯಾವುದೂ ಇಲ್ಲ.

20. ದೋಷೋಪಶಾವಧಿ ............. ರತ್ನ ಮನರ್ಘಯಂತಿ – (ಶ್ರೀ ರಂಗರಾಜಸ್ತವ 2-27)

ಹೇ ರಂಗೇಶನೇ। ದೋಷ, ಉಪಾಧಿ, ಎಲ್ಲೆ, ಸಮಾನತೆ, ಉತ್ಕೃಷ್ಟತೆ, ಎಣಿಕೆ, ಇವುಗಳೊಡನೆ ಸಂಬಂಧಿಸದೆ ಇರುವಿಕೆಯನ್ನು ; ಕಲ್ಯಾಣತಮವಾಗಿಯೂ ಇರುವ ದಯೆ, ವಾತ್ಸಲ್ಯ ಮೊದಲಾದ ಗುಣ ಸಮೂಹವನ್ನು ಪರಿಪೂರ್ಣವಾಗುಳ್ಳ ಪ್ರಸಿದ್ಧವಾದ ಆರಾಗಿ ಇರುವ ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ ತೇಜಸ್ಸೆಂಬ ಗುಣಗಳು ರತ್ನವನ್ನು ಕಾಂತ್ಯಾದಿಗಳಂತೆ ಹೇ ಶ್ರೀರಂಗನಾಥನೇ। ತಮ್ಮನ್ನು ಅನರ್ಘ್ಯವಾಗಿಸಿವೆ.

## ಸೂತ್ರ – 9

1. ದ್ವಿಷದನ್ನಂ ................ ಪಾಂಡವಾಃ – (ಮಹಾಭಾರತ ಉದ್ಯೋಗ ಪರ್ವ 74-27)

ಶತ್ರುವಿನ ಅನ್ನವನ್ನು ತಿನ್ನಬಾರದು. ಶತ್ರುವಿಗೆ ಅನ್ನವನ್ನು ನೀಡಬಾರದು. ಪಾಂಡವರನ್ನು ನೀನು ದ್ವೇಷಿಸುವವನು. ನನ್ನ ಪ್ರಾಣವೇ ಪಾಂಡವರು.

2. ಪ್ರಕೃಷ್ಟಂ ವಿಜ್ಞಾನಂ ................ ಪ್ರಸವ ಭೂಃ – (ವರದರಾಜಸ್ತವ 95)

ಹೇ ವರದ। ಉತ್ಕೃಷ್ಟವಾದ ಜ್ಞಾನವೂ, ಅತುಲವಾದ ಬಲವೂ, ಸಮಸ್ತವಾದ ಐಶ್ವರ್ಯವೂ, ಎಲ್ಲೆಯಿಲ್ಲದ ವೀರ್ಯವೂ, ಉತ್ಕೃಷ್ಟವಾದ ಶಕ್ತಿಯೂ, ಉತ್ಕೃಷ್ಟವಾದ ತೇಜಸ್ಸೂ ಎಂಬ ಪರವಾಸುದೇವನಿಂದುಂಟಾದ ಸಮಸ್ತ ಗುಣಗಳಿಗೂ ಮೊದಲೇ ಎಣಿಸಲ್ಪಡುವ ಶ್ಲಾಘ್ಯವಾದ ಆರು ಗುಣಗಳು ಎಲ್ಲೆಯಿಲ್ಲದ, ಎಣಿಸಲಾಗದ ಇತರ ಗುಣಗಳಿಗೆ ಉತ್ಪತ್ತಿ ಸ್ಥಾನವಾಗಿದೆ.

3. ಅಜಡಂ ............ ಗುಣ ಚಿಂತಕಾಃ

ಗುಣವನ್ನು ಚಿಂತಿಸುವವರು ಮೊದಲು 'ಜ್ಞಾನ' ವೆಂದು ಪ್ರಸಿದ್ಧವಾದ ಗುಣವನ್ನು ಅಜಡವಾಗಿಯೂ, (ಸ್ವಯಂ ಪ್ರಕಾಶಕವಾಗಿಯೂ) ತನ್ನನ್ನು ತಾನು ಅರಿಯುವುದಾಗಿಯೂ, ನಿತ್ಯವಾಗಿಯೂ, ಸರ್ವ ವಿಷಯ ಪ್ರಕಾಶಕವಾಗಿಯೂ, ಹೇಳುವರು.

4. ಜಗತ್ ಪ್ರಕೃತಿ ಭಾವೋ ............ ಕೀರ್ತಿತಾಃ.

ಜಗತ್ಕಾರಣವೆಂದು ಯಾವ ಗುಣವುಂಟೋ ಅದು 'ಶಕ್ತಿ' ಎಂದು ಹೇಳಲ್ಪಡುತ್ತದೆ.

5. ಶ್ರಮಹಾನಿಸ್ತು ............... ಚಿಂತಕೈಃ

ಜಗತ್ತನ್ನು ಸೃಷ್ಟಿಸುವ ಆ ಪರಮಾತ್ಮನಿಗೆ ಸರ್ವ ಕಾಲದಲ್ಲೂ ಯಾವ ಶ್ರಮವಿಲ್ಲದಿರುವಿಕೆ ಎಂಬುದುಂಟೋ ಅದು ಗುಣಚಿಂತಕರಿಂದ 'ಬಲ' ಎಂಬುದಾಗಿ ಹೇಳಲ್ಪಡುತ್ತದೆ.

6. ಕರ್ತೃತ್ವಂ ನಾಮ ............... ಚಿಂತಕೈಃ

ಆ ಪರಮಾತ್ಮನಿಗೆ ಸ್ವಾತಂತ್ರ್ಯದೊಡನೆ ಕೂಡಿದ 'ಕರ್ತೃತ್ವಂ' ಎಂಬುದು ಯಾವುದು ಪ್ರಸಿದ್ಧವಾಗಿದೆಯೋ ಅದು ಗುಣಚಿಂತಕರಿಂದ 'ಐಶ್ವರ್ಯ' ವೆಂಬ ಗುಣವಾಗಿ ಹೇಳಲ್ಪಟ್ಟಿದೆ.

7. **ತಸ್ಯೋಪಾಧಾನಭಾವೇಪಿ .............. ಅಚ್ಯುತ ದ್ವಾಪರಾಹ್ವಯಃ**

ಜಗತ್ತಿಗೆ ಉಪದಾನ ಕಾರಣವಾಗಿರುವ ಆ ಸರ್ವೇಶ್ವರತ್ವದಲ್ಲಿ ಯಾವ ವಿಕಾರವೂ ಇಲ್ಲದಿರುವುದೋ, ಆ ಅವಿಕಾರತ್ವವು 'ಅಚ್ಯುತ' ಎಂಬ ಬೇರೆ ನಾಮಧೇಯದಿಂದ ಹೇಳಲ್ಪಡುವ 'ವೀರ್ಯ' ವೆಂಬ ಗುಣವಾಗಿ ಪ್ರಸಿದ್ಧಿ ಪಡೆದಿದೆ.

8 . **ಸಹಕಾರ್ಯನಪೇಕ್ಷಾ ತತ್ತೇಜಸ್ಸಮುದಾಹೃತಮ್.**

ಸಹಾಯವನ್ನು ಅಪೇಕ್ಷಿಸದೇ ಇರುವಿಕೆ ಎಂಬುದು 'ತೇಜಸ್' ಎನಿಸುತ್ತದೆ.

## ಸೂತ್ರ - 10

1. **ಕ್ವಾಹಂ ಅತ್ಯಂತ ............. ತದಾಜ್ಞಾಪಯ ಮಾಧವ – (ಜಿತಂತಾ ಸ್ತೋತ್ರ)**

ಸ್ವಲ್ಪವೂ ಜ್ಞಾನವಿಲ್ಲದ ನಾನು ಆತ್ಮಹಿತವನ್ನು ಕಾಣುವುದು ಹೇಗೆ? ಹೇ ದೇವೇಶ, ನನಗೆ ಯಾವುದು ಹಿತವೋ ಅದನ್ನು ಹೇ ಮಾಧವನೇ ನೀನೇ ನಿಯಮನ ಮಾಡು.

2. **ಅಹಮಸ್ಮಿ ಅಪರಾಧಾನಾಂ ಆಲಯಃ – (ಭಗವತ್ ಶಾಸ್ತ್ರ)**

ನಾನು ಅಪರಾಧಗಳಿಗೆ ವಾಸಸ್ಥಾನವಾಗಿ ಇದ್ದೇನೆ.

3. **ಕ್ಷಮಾಸಾಪರಾಧ .................. ಮಯಿಸ್ಯಾತ್ – (ಶ್ರೀರಂಗರಾಜಸ್ತವ 2-96)**

ಅಪರಾಧಿಯಾಗಿರುವಾಗಲೂ ಅನುತಾಪ ಹೊಂದಿರುವುದಾದರೆ 'ಕ್ಷಮೆ' ಬರುತ್ತದೆ. ಅಪರಾಧಿಯಾಗಿದ್ದೂ ಅನುತಾಪವಿಲ್ಲದೆ ಗರ್ವದಿಂದಿರುವ ನನ್ನ ವಿಷಯದಲ್ಲಿ ಹೇಗೆ ಆ 'ಕ್ಷಮೆ' ಬರುತ್ತದೆ.

4. **ದಯಾ ಪರವ್ಯಸನಹರಾ ................. ದಯಾಧಿಕಃ – (ಶ್ರೀ ರಂಗರಾಜಸ್ತವ 2-98)**

ದಯೆಯಾದರೋ ಇತರರ ವ್ಯಸನವನ್ನು ಪರಿಹರಿಸುವುದು. ನನ್ನ ಸಂಸಾರ ದುಃಖವಾದರೋ ಸುಖವಾಗಿದೆ. ಆದ್ದರಿಂದಲೇ ನಾನು ದಯೆಗೆ ಪಾತ್ರನಾಗದೇ ಇದ್ದೇನೆ.

## ಸೂತ್ರ - 11

1. **ಸಮೋಹಂ ಸರ್ವ ಭೂತೇಷು ನಮೇ ದ್ವೇಷ್ಯೋಸ್ತಿ ನ ಪ್ರಿಯಃ – (ಭಗವದ್ಗೀತೆ 9-29)**

ನಾನು ಎಲ್ಲ ಭೂತಗಳಲ್ಲೂ ಸಮವಾಗಿದ್ದೇನೆ. ನನಗೆ ದ್ವೇಷಿಗಳೂ ಇಲ್ಲ . ಪ್ರಿಯರೂ ಇಲ್ಲ.

2. **ಮಾದವತ್ತೋನ್ ................. ಮಾಂಡಾಸ್ಸೆ – (ಪೆರಿಯಾಳ್ವಾರ್ ತಿರುಮೊಳಿ 4-8-1)**

3. **ಪಿರಪ್ಪಹತ್ತೇ .................... ಸಾಲ್ಪಯ್ಯೆಯಂ – (ಪೆರಿಯಾಳ್ವಾರ್ ತಿರುಮೊಳಿ 4-8-2)**

4. **ಎನ್ನುಡೈಯ ಮನ್ನವಿ .................. ಕಾಣಾಳ್ – (ಪೆರಿಯ ತಿರುಮೊಳಿ 5-8-8)**

5. **ಆಶ್ರಿತರಕ್ಷಣ ವಿಷಯೋ .............. ಸತ್ಯಕಾಮಃ**

ಆಶ್ರಿತರಕ್ಷಣ ವಿಷಯವಾದ ಮನೋರಥವು 'ಕಾಮ' ಎನ್ನಲ್ಪಡುತ್ತದೆ. ಆ ಕಾಮವು ತಡೆಯಿಲ್ಲದೆ ಇರುವುದು. ಎಂಬ ಕಾರಣದಿಂದ 'ಸತ್ಯಕಾಮನು' ಎಂದು ಪರಮಾತ್ಮನು ಕರೆಯಲ್ಪಡುತ್ತಾನೆ.

6. ವರದ ಸಕಲ ಮೇತತ್ ಸಂಶ್ರಿತಾರ್ಥಂ ಚಕಾರ – (ವರದರಾಜಸ್ತವ 63)
ಹೇ ವರದ! ಈ ಸಕಲವೂ ಆಶ್ರಿತರಿಗಾಗಿ ಮಾಡಲ್ಪಟ್ಟವು.

7. ಅಭಿಷಿಚ್ಯಚ ........... ಪ್ರಮುಮೋದಹ! – (ಶ್ರೀ ರಾ. ಬಾಲಕಾಂಡ 1ನೇ ಸರ್ಗ)
ರಾಮನು ವಿಭೀಷಣನನ್ನು ರಾಕ್ಷಸ ರಾಜನಾಗಿ ಲಂಕೆಯಲ್ಲಿ ಅಭಿಷೇಕ ಮಾಡಿ, ಆಗ ಕೃತಾರ್ಥನಾಗಿ, ಜ್ವರ ಬಿಟ್ಟವನಂತೆ ಹರ್ಷಿಸಿದ.

8. ಊರ್ಧ್ವಂ ಮಾಸಾನ್ ನ ಜೀವಿಷ್ಯೇ – (ಶ್ರೀ ರಾ. ಸುಂದರಕಾಂಡ 38-10)
ಹೇ ದಾಶರಥಿಯೇ! ಒಂದು ತಿಂಗಳಿನವರೆಗೆ ಪ್ರಾಣ ಧರಿಸಿರುತ್ತೇನೆ. ಒಂದು ತಿಂಗಳಿಗೆ ಮೇಲೆ ನಾನು ಜೀವಿಸಿರುವುದಿಲ್ಲ, ನಿಮಗೆ ನಾನು ಸತ್ಯವನ್ನೇ ಹೇಳುತ್ತಿದ್ದೇನೆ.

9. ನ ಜೀವೇಯಂ ಕ್ಷಣಮಪಿ ವಿನಾ ತಾಂ ಅಸಿತೇಕ್ಷಣಾ – (ಶ್ರೀ ರಾ.ಸು. ಕಾಂ.)
ಒಂದು ಕ್ಷಣವೂ ಆ ಸುಂದರವಾದ ಕಣ್ಣುಳ್ಳ ಸೀತೆಯನ್ನು ನಾನು ಬಿಟ್ಟಿರಲಾರೆ.

## ಸೂತ್ರ - 12

1. ಸದೇವ ಸೋಮ್ಯೇದ ಮಗ್ರ ಮಾಸೀತ್ – (ಛಾಂ. ಉ. 6-2-1)
ಹೇ! ಸೌಮ್ಯನೇ! ಈ ಜಗತ್ತು ಮೊದಲು ಸತ್ ಆಗಿಯೇ ಇದ್ದಿತು.

2. ಬ್ರಹ್ಮವಾ ಇದಮೇವಾಗ್ರ ಆಸೀತ್ – (ವಾಜಸನೇಯ)
ಈ ಸೃಷ್ಟಿಗೆ ಮುನ್ನ ಬ್ರಹ್ಮ ಒಂದೇ ಇದ್ದಿತು.

3. ಆತ್ಮಾ ವಾ ಇದಮೇವಾಗ್ರ ಆಸೀತ್ – (ಐತರೇಯ ಉಪನಿಷತ್)
ಈ ಜಗತ್ ಸೃಷ್ಟಿಗೆ ಮುಂಚೆ ಆತ್ಮ ಒಂದೇ ಇದ್ದಿತು.

4. ಏಕೋ ಹ ವೈ ನಾರಾಯಣ ಆಸೀತ್ – (ಮಹೋಪನಿಷತ್)
ಈ ಜಗತ್ತು ಸೃಷ್ಟಿಯಾಗುವ ಕಾಲಕ್ಕೆ ಮುನ್ನ ನಾರಾಯಣನೊಬ್ಬನೇ ಇದ್ದನು.

5. ಅಥಾಥೋ ಬ್ರಹ್ಮ ಜಿಜ್ಞಾಸಾ – (ಬ್ರಹ್ಮಸೂತ್ರ 1-1-1)
ವೇದದ ಪೂರ್ವಭಾಗವಾದ ಕರ್ಮಕಾಂಡವನ್ನು ವಿಚಾರ ಮಾಡಿದ ನಂತರ, ಕರ್ಮಗಳು ಅಲ್ಪವೆಂದೂ, ಅಸ್ಥಿರವೆಂದೂ ಜ್ಞಾನವುಂಟಾಗಿದ್ದರಿಂದ, ಅನಂತ ಸ್ಥಿರ ಫಲವಾದ ಬ್ರಹ್ಮವಿಚಾರವನ್ನು ಮಾಡೋಣ.

## ಸೂತ್ರ - 18

1. ಹಿರಣ್ಯಗರ್ಭಸ್ಸಮವರ್ತತಾಗ್ರೇ – (ಯಜುರ್ವೇದ ಕಾಠಕ 4)
ಸೃಷ್ಟಿಗೆ ಮುನ್ನ ಹಿರಣ್ಯಗರ್ಭನೊಬ್ಬನೇ ಇದ್ದನು.

2. ಬ್ರಹ್ಮಾದ್ಯಾ ಸ್ಸಕಲಾ : .......... ಸಂಸಾರವಶವರ್ತಿನಃ – (ವಿಷ್ಣು ಧರ್ಮ)
ಚತುರ್ಮುಖ ಬ್ರಹ್ಮನೇ ಮೊದಲಾದ ಸಕಲದೇವತೆಗಳೂ, ಮನುಷ್ಯರುಗಳೂ, ಹಾಗೆಯೇ ಪಶುಗಳೂ, ವಿಷ್ಣುವಿನ ಮಾಯೆಯ ದೊಡ್ಡ ಸುಳಿಯಲ್ಲಿರುವ ಅಜ್ಞಾನ ಅಂಧಕಾರದಿಂದ ಆವರಿಸಲ್ಪಟ್ಟವರು.

ಜಗತ್ತಿನಲ್ಲಿರುವ ಚತುರ್ಮುಖ ಬ್ರಹ್ಮನಿಂದ ಸಣ್ಣ ಹುಲ್ಲಿನವರೆಗೂ ಸಮಸ್ತ ಜೀವಾತ್ಮರುಗಳೂ ಸಂಸಾರವಶರಾದವರು. ಕರ್ಮವೇ ಕಾರಣವಾಗಿ ಉಂಟಾಗುವವರು.

3. **ತತಃ ಕ್ರೋಧ ಪರಿತೇನ ............ ಭವಿಷ್ಯಸಿ – (ಮಾತ್ಸ್ಯ ಪುರಾಣ)**

ಅನಂತರ ಕೋಪದಿಂದ ವ್ಯಾಪ್ತನಾಗಿ ಕೆಂಪಾದ ಕಣ್ಣುಳ್ಳವನಾದ ನನ್ನಿಂದ, ಎಡಗೈ ಹೆಬ್ಬಟ್ಟಿನ ಉಗುರಿನ ತುದಿಯಿಂದ ನನ್ನ ಪಿತಾವಾದ ಬ್ರಹ್ಮನ ಶಿರಸ್ಸು ಕೀಳಲ್ಪಟ್ಟಿತು. ಯಾವ ಕಾರಣದಿಂದ ತಪ್ಪು ಮಾಡದ ನನ್ನ ಶಿರಸ್ಸು ನಿನ್ನಿಂದ ಭೇದಿಸಲ್ಪಟ್ಟಿತ್ತೋ ಅದರಿಂದ ನೀನು ಕಪಾಲವನ್ನು ಕೈಯಲ್ಲಿ ಉಳ್ಳವನಾಗುವಿಯೆಂದು ನಾನು ಶಾಪ ಹೊಂದಿದೆ.

## ಸೂತ್ರ - 20

1. **ಪ್ರಾಜಾ ಪತ್ಯಂ ತ್ವಯಾ ಕರ್ಮ ಪೂರ್ವಂ ಮಯಿ ನಿವೇಶಿತಂ.**

ನಿಮ್ಮಿಂದ ಮುನ್ನವೇ ಬ್ರಹ್ಮ ಸಂಬಂಧಿಯಾದ ಸೃಷ್ಟಿ ಕಾರ್ಯವು ನನ್ನಲ್ಲಿ ಇಡಲ್ಪಟ್ಟಿತು.

2. **ಏತೌ ................ ಸೃಷ್ಟಿ ಸಂಹಾರಕಾರಕೌ – (ಮೋಕ್ಷಧರ್ಮ ಪುರಾಣ)**

ದೇವತೆಗಳಲ್ಲಿ ಶ್ರೇಷ್ಠರಾಗಿ ಆ ನಾರಾಯಣನ ಅನುಗ್ರಹದಿಂದಲೂ, ಕೋಪದಿಂದಲೂ ಉಂಟಾಗಿರುವ ಈ ಚತುರ್ಮುಖ ಬ್ರಹ್ಮ, ಶಿವ ಎಂಬ ಇಬ್ಬರೂ ಆ ನಾರಾಯಣನಿಂದ ತೋರಲ್ಪಟ್ಟ ಸೃಷ್ಟಿ, ಸಂಹಾರ ಮಾರ್ಗವುಳ್ಳವರಾಗಿ ಸೃಷ್ಟಿ ಸಂಹಾರಗಳನ್ನು ಮಾಡುತ್ತಾರೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ.

3. **ನಿರವದ್ಯಂ ನಿರಂಜನಂ – (ಶ್ವೇತಾಶ್ವತರ ಉಪನಿಷತ್)**

ನಾಶವಿಲ್ಲದವನಾಗಿಯೂ, ಪಾಪವಿಲ್ಲದವನಾಗಿಯೂ ಇರುವ ಈಶ್ವರನು.

4. **ನ ತಸ್ಯೇ ಷೇ ಕಶ್ಚನ – (ಕೈ. 2-1-10)**

ಆ ಪರಮಾತ್ಮನಿಗೆ ಒಬ್ಬರೂ ನಿಯಾಮಕರಿಲ್ಲ.

5. **ಅಚಿದ ವಿಶೇಷಿತಾನ್ .............. .......ಭೂತಕರಣಾವಳಿಕೋರ ಕಿಣೀಮ್ – (ಶ್ರೀರಂಗ ರಾಜಸ್ತವ)**

ಹೇ ವರದನೇ। ಪ್ರಳಯ ಕಾಲದಲ್ಲಿ ಅಚೇತನ ತುಲ್ಯರಾಗಿ ಸಂಸರಿಸುವ ಚೇತನರನ್ನು ಕರುಣಾಮಯವಾದ ಹೃದಯವುಳ್ಳವನಾಗಿ ಶರೀರ, ಇಂದ್ರಿಯಗಳೊಡನೆ ಕೂಡಿಸುವುದಕ್ಕಾಗಿ, ತನ್ನ ಸಂಕಲ್ಪಕ್ಕೆ ವಶನಾಗಿ ಮೂಲ ಪ್ರಕೃತಿಯನ್ನು ಮಹಾನ್, ಅಹಂಕಾರ, ಪಂಚಭೂತಗಳು, ಇಂದ್ರಿಯ ಸಮೂಹಗಳು, ಇವೇ ಮುಂತಾದ ಮೊಗ್ಗುಗಳಿಂದ ಕೂಡಿದಂತೆ ಮಾಡಿರುವಿ.

6. **ಸೋಕಾಮಯತ ಬಹುಸ್ಯಾಂ ಪ್ರಜಾಯೇಯೇತಿ – (ತೈ. ಆರಣ್ಯಕ 6)**

ದೇವ ಮನುಷ್ಯಾದಿ ರೂಪೇಣ ಅನೇಕವಾಗಿ ಆಗುವೆ. ಅದಕ್ಕಾಗಿ ಆಕಾಶಾದಿಗಳನ್ನು ಉಂಟುಮಾಡುವೆ. ಎಂದು ಸಂಕಲ್ಪಿಸಿದನು.

7. **ಮನಸೈವ ........... ವಿಸ್ತರಃ – (ಶ್ರೀ ವಿ.ಪು. 5-22-15)**

ಯಾವ ಪರಮಾತ್ಮನು ಸಂಕಲ್ಪ ಮಾತ್ರದಿಂದಲೇ ಜಗತ್ತಿನ ಸೃಷ್ಟಿ ಸಂಹಾರಗಳನ್ನು ಮಾಡುತ್ತಾನೋ ಅವನಿಗೆ ಶತ್ರು ಪಕ್ಷವನ್ನು ಸಂಹರಿಸುವ ವಿಷಯದಲ್ಲಿನ ಪ್ರಯತ್ನವು ಎಷ್ಟು ಮಾತ್ರದ್ದು?

8. **ನಿನ್ನೈನ್ದ ಎಲ್ಲಾ .............. ಜ್ಞಾನತ್ತುನ್ ಪೆರುಮ್ಮೈ – (ತಿರುವಾಯ್ಮೊಳಿ 1-5-2)**

## ಸೂತ್ರ - 22

1. **ಲೋಕವತ್ತು ಲೀಲಾಕೈವಲ್ಯಮ್ – (ಬ್ರಹ್ಮ ಸೂತ್ರ 2-1-33)**
ಕೇವಲ ಲೀಲೆಯೇ ಜಗತ್ ಸೃಷ್ಟಿಯ ಪ್ರಯೋಜನವಾಗಿದೆ.

2. **ನಳಿರ್ ಮಾಮಲರುನ್ದಿ................ ವಿಮಲನ್ – (ನಾಚ್ಚಿಯಾರ್ ತಿರುಮೊಳಿ 14-9)**

3. **ಇನ್ಬರುಮಿವ್ವಿಳೈಯಾಟ್ಟುಡೈಯಾನ್ – (ತಿರುವಾಯ್ಮೊಳಿ3-10-7)**

4. **ಶೆನ್ರು ಶೆನ್ರಾಕಿಲುಂ ........... ಉಲಹಂ ಪಡೈತ್ತಾನ್ – (ತಿರುವಾಯ್ಮೊಳಿ 3-9-10)**

5. **ಉಯ್ಯ ಉಲಹು ಪಡೈತ್ತುಣ್ಡ ಮಣಿವಯಿರಾ – (ಪೆರಿಯಾಳ್ವಾರ್ ತಿರುಮೊಳಿ 1-6-1)**

6. **ಮಾಯವನ್ ತನ್ನೈ ವಣಂಗವೈತ್ತ ಕರಣಮಿವೈ – (ರಾಮಾನುಜನೂತ್ತಂದಾದಿ 67)**

7. **ರೂಪ ಪ್ರಕಾರ ........... ಅನುಯೋಜ್ಯಮಾಹುಃ – (ಶ್ರೀ ವೈಕುಂಠಸ್ತವ 53)**
ಸ್ವರೂಪ, ಸ್ವಭಾವದ ಪರಿಣಾಮದಿಂದ ಏರ್ಪಟ್ಟಿರುವ ಚೇತನಾಚೇತನಾತ್ಮಕವಾದ ಸಮಸ್ತ ಜಗತ್ತನ್ನೂ ಮಾರ್ಪಡಿಸುವುದಕ್ಕೂ, ಅಸತ್ತಿನೊಡನೆ ಸದೃಶವಾಗುವಂತೆ ಮಾಡುವುದಕ್ಕೂ, ಬೇರೆ ವಿಧವಾಗಿ ಮಾಡುವುದಕ್ಕೂ ಶಕ್ತರಾದ ತಾವು ಅದರ ಕರ್ಮಫಲ ಸ್ವಭಾವಕ್ಕನುಗುಣವಾಗಿ ಕಟಾಕ್ಷಿಸುವಿರಲ್ಲಾ, ಆದ್ದರಿಂದ ತಮ್ಮ ಈಶ್ವರ ಸಂಬಂಧವಾದ ಸ್ವಾತಂತ್ರ್ಯವು ಪ್ರಶ್ನಿಸುವಂಥದ್ದಾಗಿದೆ.

## ಸೂತ್ರ - 24

1. **ಅಖಿಲ ಭುವನ ............ ಲೀಲೇ – (ಶ್ರೀ ಭಾಷ್ಯ ಮಂಗಳಶ್ಲೋಕ)**
ಸಮಸ್ತ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ ಮೊದಲಾದವುಗಳನ್ನು ಆಟವಾಗಿ ಉಳ್ಳ.

2. **ನಿಖಿಲ ಜಗದುದಯ ವಿಭವಲಯ ಲೀಲ – (ಶ್ರೀರಂಗಗದ್ಯಂ)**
ಸಮಸ್ತ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಲೀಲೆಯಾಗುಳ್ಳವನೇ.

## ಸೂತ್ರ - 25

1. **ಯೇನಾಶ್ರುತಂ ................. ವಿಜ್ಞಾತಂ ಸ್ಯಾತ್ – (ಕೇನೋಪನಿಷತ್)**
ಯಾವುದನ್ನು ಕೇಳಿದ್ದರಿಂದ ಕೇಳದೇ ಇರುವುದೆಲ್ಲವನ್ನೂ ಕೇಳಿದಂತಾಗುವುದೋ; ಮತವು ಅಮತವಾಗುವುದೇ, ಅಮತವು ಮತವಾಗುವುದೇ,ತಿಳಿದಿರುವುದು ತಿಳಿಯದೇ ಇರುವುದಾಗಿ, ತಿಳಿಯದಿರುವುದು ತಿಳಿದಂತಾಗಿ ಆಗುವುದೋ.

2. **ಯಥಾ ಸೋಮ್ಯೇನೇಕೇನ ........... ವಿಜ್ಞಾತಂ ಸ್ಯಾತ್ – (ಛಾಂ. ಉ. 6-1-3-4)**
ಎಲೈ ಸೌಮ್ಯ! ಹೇಗೆ ಒಂದು ಮಣ್ಣಿನ ಹೆಂಟೆಯ ಅರಿವಿನಿಂದ ಸಮಸ್ತವಾದ ಮಣ್ಣಿನಿಂದಾದ (ಮಡಕೆ, ಕುಡಿಕೆ, ತಟ್ಟೆ ಇತ್ಯಾದಿ) ವಸ್ತುಗಳ ಅರಿವು ಉಂಟಾಗುತ್ತದೋ ಹಾಗೆ.

3. **ತದಾತ್ಮಾನಂ ಸ್ವಯಮಕುರುತ – (ತೈ. ಉ. ಆ. 7-1)**

ಆ ಅಸತ್ ಎಂದು ಹೇಳಲ್ಪಟ್ಟ ಬ್ರಹ್ಮವು ತನ್ನನ್ನೇ (ಉಪಾದಾನವಾಗಿ ಅಂಗೀಕರಿಸಿ) ತಾನು ಉಂಟುಮಾಡಿಕೊಂಡಿತು.

4. **ಸೃಷ್ಟೌ ಸೃಜತಿ ............... ಸ್ವಯಂ ಪ್ರಭುಃ – (ಶ್ರೀ ವಿ.ಪು. 1-12-67)**

ಬ್ರಹ್ಮನಾಗಿ ಸೃಷ್ಟಿಯಲ್ಲಿ ತನ್ನನ್ನೇ ಸೃಷ್ಟಿಸುತ್ತಾನೆ. ವಿಷ್ಣುವಾಗಿ ರಕ್ಷ್ಯವರ್ಗವನ್ನು ಕಾಪಾಡುತ್ತಾನೆ. ಸಂಹಾರಕರ್ತನಾದ ರುದ್ರನಾಗಿ ಅಂತ್ಯ ಕಾಲದಲ್ಲಿ ಸಂಹರಿಸುತ್ತಾನೆ. ಎಲ್ಲಕ್ಕೂ ತಾನೇ ನಿಯಂತಾವಾಗಿರುತ್ತಾನೆ.

5. **ಸ ಏವ ಸೃಜ್ಯಃ ............... ವರೇಣ್ಯಃ – (ಶ್ರೀ ವಿ.ಪು. 1-2-70)**

ವಿಷ್ಣುವಾದವನು ಚತುರ್ಮುಖ ಬ್ರಹ್ಮ ಮೊದಲಾದ ಅವಸ್ಥೆಗಳಿಂದ ಸರ್ವ ಶರೀರಿಯಾಗಿಯೂ, ಬಲಿಷ್ಠನಾಗಿಯೂ, ಆಶ್ರಿತವರಪ್ರದಾನನಾಗಿಯೂ ಇರುತ್ತಾನೆ. ಸೃಷ್ಟಿಸಲ್ಪಟ್ಟ ಪದಾರ್ಥಗಳೂ ಆ ವಿಷ್ಣುವೇ. ಸೃಷ್ಟಿಸುವವನೂ ಅವನೇ, ರಕ್ಷಿಸುವವನೂ ಅವನೇ. ರಕ್ಷಿಸಲ್ಪಡುವವನೂ ಅವನೇ. ಸಂಹರಿಸುವವನೂ ಅವನೇ. ಸಂಹರಿಸಲ್ಪಡುವುದೂ ಅವನೇ.

6. **ನಿರ್ಗುಣಂ ............... ಶಾಂತಂ – (ಛಾಂ. ಉ.)**

ಹೇಯಗುಣರಹಿತ, ಪಾಪರಹಿತ, ಅವಯವರಹಿತ, ಕ್ರಿಯಾರಹಿತ, ಊರ್ಮಿಷಟ್ರಹಿತವಾದದ್ದು ಪರಬ್ರಹ್ಮ.

## ಸೂತ್ರ - 30

1. **ಯಥಾ ಊರ್ಣನಾಭಿಃ ಸೃಜತೇ ಗೃಹ್ಣತೇ ಚ – (ಮುಂಡಕೋಪನಿಷತ್ 1-1-7)**

ಹೇಗೆ ಜೇಡರಹುಳುವು ತನ್ನ ಬಲೆಯನ್ನು ತಾನೇ ಸೃಷ್ಟಿಸಿ ತಾನೇ ಗ್ರಹಿಸಿಬಿಡುವುದೋ ಹಾಗೆ.

2. **ಊರ್ಣನಾಭಿಃ ............. ಗ್ರಸತೇ ಹರಿಃ.**

ಜೇಡರ ಹುಳುವು ತಾನೇ ಸೃಷ್ಟಿಸಿ ಮತ್ತೆ ತಾನೇ ಅದನ್ನು ಗ್ರಾಸಮಾಡಿ ಬಿಡುವುದೋ, ಅದೇ ರೀತಿ ಈ ಸಕಲವನ್ನು ಸೃಷ್ಟಿಸಿ ಹರಿಯಾದವನು ಅದನ್ನು ತಾನೇ ನುಂಗಿ ಬಿಡುತ್ತಾನೆ.

3. **ಕಾರ್ಯೇನಂತೇ .................. ಸೋರ್ಣನಾಭೌ ವಿಭಾವ್ಯಾ – (ಶ್ರೀರಂಗರಾಜಸ್ತವ 2-31)**

ಹೇ ರಂಗರಾಜನೇ ಯಾವ ಹೇತುವನ್ನೂ ಅಪೇಕ್ಷಿಸದೆ ಇರುವ ನಿನ್ನ ಸಂಕಲ್ಪವು ಸುಕರ, ದುಷ್ಕರ ಎಂಬ ದಡವನ್ನು ಅತಿಕ್ರಮಿಸಿ ಸದಾಕಾಲ ಎಲ್ಲಿವರೆಗೆ ಹರಡುತ್ತದೋ, ಆ ಅನಂತವಾದ ಕಾರ್ಯದಲ್ಲೂ ನಿನ್ನನ್ನು, ನಿನ್ನ ಶರೀರಭೂತವಾದ ಚಿತ್, ಅಚಿತ್‌ಗಳ ಮೂಲಕ ಉಪದಾನ ಕಾರಣವಾಗಿ ಇದೆಯೋ ಅದು ಶಕ್ತಿ ಎಂದು ಹೇಳಲ್ಪಡುತ್ತದೆ. ಆ ಶಕ್ತಿ ತಾನೇ ಸರ್ವೇಶ್ವರತ್ವಕ್ಕಿಂತಲೂ ಅತಿಶಯತೆನ್ನುಂಟುಮಾಡುವುದು. ಆ ಶಕ್ತಿಯು ಜೇಡರ ಹುಳುವಿನಿಂದ ಅರಿಯುವಂತಹುದಾಗಿದೆ.

4. **ತ್ರಿಗುಣಂ .................. ಪ್ರಭವಾಪ್ಯಯಮ್ – (ಶ್ರೀ ವಿ.ಪು. 1-2-22)**

ಆ ಪ್ರಕೃತಿಯು ಮೂರುಗುಣಗಳಿಂದ ಕೂಡಿರುವುದು ಜಗತ್ಕಾರಣವಾಗಿದೆ. ಅದು ಹುಟ್ಟು, ನಾಶ ಇಲ್ಲದ್ದಾಗಿದೆ.

## ಸೂತ್ರ - 31

1. **ತಮಃ ಪರೇ ದೇವ ಏಕೀ ಭವತಿ – (ಸುಬಾಲೋಪನಿಷತ್)**

'ತಮಸ್' ಎಂದು ಹೇಳಲ್ಪಡುವ ಮೂಲ ಪ್ರಕೃತಿ ಪರಮ ಪುರುಷನಲ್ಲಿ ಒಂದಾಗಿ ಬಿಡುತ್ತದೆ.

2. **ತಮಸ್ ಸ್ವಯಂಭೂಃ .................. ವ್ಯಂಜಯನ್ನಿದಂ – (ಮನುಸ್ಮೃತಿ 1-6)**

ಅನಂತರ ಷಾಡ್ಗುಣ್ಯ ಪರಿಪೂರ್ಣನಾಗಿ, ಸ್ವತಂತ್ರನಾದ ಸರ್ವೇಶ್ವರನು ತಮಶ್ಶಬ್ದ ವಾಚ್ಯವಾದ ಅಚಿತ್ತನ್ನು ಪ್ರೇರೇಪಿಸಿ, ಇದನ್ನು (ಈ ಪ್ರಕೃತಿಯನ್ನು) ಪ್ರಕಾಶಿಸಿ, ಎಂದರೆ ತನ್ನಿಂದ ಬೇರ್ಪಡಿಸಿ ಅವ್ಯಕ್ತವಾಗಿಸಿ ನಂತರ ವ್ಯಕ್ತವಾಚ್ಯವಾದ ಸಮಷ್ಟಿ ಸೃಷ್ಟಿ ರೂಪವಾದ ಸಮಸ್ತ ಕಾರ್ಯಗಳೂ ಆಗುವಂತೆ ಆವಿರ್ಭವಿಸಿದ.

## ಸೂತ್ರ - 34

1. **ಚತುರ್ವಿಭಾಗಸ್ಸಂ ಸೃಷ್ಟೌ ............ ಜನಾರ್ದನಃ – (ಶ್ರೀ ವಿ.ಪು.)**

ಜನಾರ್ದನನು ಸೃಷ್ಟಿಯಲ್ಲಿ ನಾಲ್ಕು ವಿಭಾಗವಾಗಿಯೂ, ಸಂರಕ್ಷಣೆಯಲ್ಲಿ ನಾಲ್ಕು ವಿಭಾಗವಾಗಿಯೂ, ಇರುತ್ತಾನೆ. ಯುಗಾಂತ್ಯದಲ್ಲಿ ನಾಲ್ಕು ಭೇದಗಳುಳ್ಳವನಾಗಿ ಪ್ರಳಯವನ್ನು ಮಾಡುತ್ತಾನೆ.

## ಸೂತ್ರ - 35

1. **ಏಕೇನಾಂಶೇನ ............ ರಜೋಗುಣಃ – (ಶ್ರೀ ವಿ.ಪು. 1-22-25)**

ಅವ್ಯಕ್ತ ಸ್ವರೂಪನಾದ ಈ ಜನಾರ್ದನನು ಒಂದು ಅಂಶದಿಂದ ಚತುರ್ಮುಖ ಬ್ರಹ್ಮನಾಗಿ ಆಗುತ್ತಾನೆ. ಎಂದರೆ ಚತುರ್ಮುಖನಿಗೆ ಅಂತರ್ಯಾಮಿಯಾಗಿದ್ದು ಸೃಷ್ಟಿಸುತ್ತಾನೆ. ಮತ್ತೊಂದು ಅಂಶದಿಂದ ಪ್ರಜಾಪತಿಗಳಾದ ಮರೀಚಿ ಮೊದಲಾದವರುಗಳಾಗಿ ಆಗುತ್ತಾನೆ. ಎಂದರೆ ಅವರಿಗೆ ಅಂತರ್ಯಾಮಿಯಾಗಿರುತ್ತಾನೆ. ಮೂರನೆಯ ಅಂಶವು ಕಾಲವಾಗಿಯೂ, ಮತ್ತೊಂದು ಅಂಶದಿಂದ ಈ ಸಮಸ್ತ ಜಂತುಗಳಾಗಿಯೂ ಆಗುತ್ತಾನೆ. ಅಂದರೆ ಅವುಗಳಿಗೆ ಅಂತರ್ಯಾಮಿಯಾಗಿರುತ್ತಾನೆ. ಈ ಜನಾರ್ದನನು ರಜೋಗುಣ ವಿಶಿಷ್ಟನಾಗಿ ಈ ಪ್ರಕಾರವಾಗಿ ಸೃಷ್ಟಿಯಲ್ಲಿ ನಾಲ್ಕು ವಿಧವಾಗಿ ಇರುತ್ತಾನೆ.

## ಸೂತ್ರ - 36

1. **ಮಧ್ಯೇ ವಿರಿಂಚ ಗಿರೀಶಂ ಪ್ರಥಮಾವತಾರಃ – (ಶ್ರೀರಂಗರಾಜಸ್ತವ 2-51)**

ಚತುರ್ಮುಖ ಬ್ರಹ್ಮನಿಗೂ ಶಿವನಿಗೂ ಮಧ್ಯೆ ಮೊದಲ ಅವತಾರ.

2. **ಸುರನರತಿರ ಶ್ಚಾಮವತರನ್ – (ವರದರಾಜಸ್ತವ 17)**

ದೇವ ಮನುಷ್ಯ ತಿರ್ಯಕ್ ಜಾತಿಗಳಲ್ಲಿ ಅವತರಿಸುತ್ತಾ

3. **ಎನ್ನಿನ್ನ ಯೋನಿಯುಮಾಯ್‌ಪ್ಪಿರಂದಾಯ್ – (ತಿರುವಿರುತ್ತಂ 1)**

ಯಾವ ಯಾವ ಯೋನಿಯಲ್ಲೆಲ್ಲಾ ಹುಟ್ಟಿದೆ ಓ ಪರಮಾತ್ಮ.

4. ಯದ್ವೈ ಕಿಂ ಚ ಮನುರವದತ್ ತದ್ಭೇಷಜಮ್ – (ಯಜುರ್ವೇದಮ್)
ಮನು ಏನನ್ನು ಹೇಳಿದ್ದಾನೋ ಅದು ಔಷಧ.

5. ಏಕಾಂಶೇನಾಸ್ತಿ ................ ಪುರುಷೋತ್ತಮಃ – (ಶ್ರೀ ವಿ.ಪು. 1-22ರಿಂದ 28)
ಪುರುಷೋತ್ತಮನಾದ ವಿಷ್ಣುವು ಒಂದು ಅಂಶದಿಂದ ರಕ್ಷಣವನ್ನು ಮಾಡುತ್ತಾನೆ. ಮತ್ತೊಂದು ಅಂಶದಿಂದ ಮನು ಮೊದಲಾದ ರೂಪಗಳಿಂದಲೂ, ಇನ್ನೊಂದು ಅಂಶದಿಂದ ಕಾಲ ರೂಪಿಯಾಗಿಯೂ, ಮತ್ತೊಂದು ಅಂಶದಿಂದ ಸರ್ವಭೂತಗಳಲ್ಲೂ ಇದ್ದು ಸತ್ವ ಗುಣವನ್ನು ಆಶ್ರಯಿಸಿ ಲೋಕ ಸಂರಕ್ಷಣೆಯನ್ನು ಮಾಡುತ್ತಾನೆ.

## ಸೂತ್ರ - 37

1. ಆಶ್ರಿತ್ಯ ತಮಸೋ ................. ಮಹಾತ್ಮನಃ – (ಶ್ರೀ ವಿ.ಪು. 1-22ರಿಂದ 31)
ಉತ್ಪತ್ತಿ ರಹಿತನಾದ ಆ ಪ್ರಭುವಾದ ವಿಷ್ಣುವು, ಸಂಹಾರ ಕಾಲದಲ್ಲಿ ತಮೋಗುಣ ವ್ಯಾಪಾರವನ್ನು ಆಶ್ರಯಿಸಿ ಒಂದು ಅಂಶದಿಂದ ರುದ್ರ ಸ್ವರೂಪನಾಗುತ್ತಾನೆ. ಹಾಗೆಯೇ ಮತ್ತೊಂದು ಅಂಶದಿಂದ ಅಗ್ನಿ, ಯಮ ಮೊದಲಾದ ರೂಪಗಳಿಂದ ಇರುತ್ತಾನೆ. ಮತ್ತೊಂದು ಭಾಗದಿಂದ ಕಾಲ ಸ್ವರೂಪನಾಗಿಯೂ ಮತ್ತೊಂದರಿಂದ ಸಮಸ್ತ ಭೂತಗಳಾಗಿಯೂ, ಇದ್ದು ವಿನಾಶವನ್ನುಂಟು ಮಾಡುತ್ತಾನೆ. ಆ ಮಹಾತ್ಮನಿಗೆ ಹೀಗೆ ನಾಲ್ಕು ಪ್ರಕಾರಗಳಿರುತ್ತವೆ.

2. ಬ್ರಹ್ಮಾ ದಕ್ಷಾದಯಃ ............. ಜನಾರ್ದನ ವಿಭೂತಯಃ – (ಶ್ರೀ ವಿ.ಪು. 1-31 ರಿಂದ 34)
ಜಗತ್‌ಸೃಷ್ಟಿಗೆ ಕಾರಣವಾದ ಬ್ರಹ್ಮನೂ, ದಕ್ಷಾದಿಗಳಾದ ಪ್ರಜಾಪತಿಗಳೂ, ಆ ಪ್ರಕಾರವಾಗಿಯೇ ಸಕಲ ಜಂತುಗಳೂ ವಿಷ್ಣುವಿನ ವಿಭೂತಿಗಳೇ ಆಗಿವೆ. ಹೇ ಮೈತ್ರೇಯ ವಿಷ್ಣುವೂ, ಮನು ಮೊದಲಾದವರುಗಳೂ, ಕಾಲವೂ, ಸಮಸ್ತ ಭೂತಗಳೂ, ಸ್ಥಿತಿಗೆ ಕಾರಣಭೂತವಾದ ವಿಷ್ಣುವಿನ ವಿಭೂತಿಗಳು. ರುದ್ರನೂ, ಕಾಲ, ಯಮ, ಮೊದಲಾದವರುಗಳೂ ಸಮಸ್ತ ಜಂತುಗಳೂ ಹೀಗೆ ನಾಲ್ಕು ವಿಧವಾದವುಗಳೂ ಪ್ರಳಯ ಕಾಲದಲ್ಲಿ ಭಗವಂತನ ವಿಭೂತಿಗಳೆಂದೇ ಪ್ರಸಿದ್ಧವಾಗಿವೆ.

## ಸೂತ್ರ - 39

1. ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್.
ಈಶ್ವರನು ಜಗತ್ ಸೃಷ್ಟಿಕರ್ತಾ ಆದರೆ ಅವನಿಗೆ ಪಕ್ಷಪಾತತ್ವವೂ, ಕ್ರೌರ್ಯವೂ ಏರ್ಪಡುವುದಿಲ್ಲವಾ. ಎಂದರೆ 'ನ' ಇಲ್ಲ, ಏಕೆಂದರೆ ಚೇತನರ ಕರ್ಮ ಸಾಪೇಕ್ಷತೆಯಿಂದ (ಚೇತನರ ಕರ್ಮಾನುಸಾರವಾಗಿ ಸೃಷ್ಟಿಸುವುದರಿಂದ)

2. ನಿಮ್ನೋನ್ನತಂ ಚ ............... ಶ್ರುತಯೋ ಗೃಣಂತಿ – (ಶ್ರೀರಂಗಾರಾಜಸ್ತವ 2-42)
ಹೇ ರಂಗಶಾಯಿಯೇ- ವಿಚಿತ್ರವಾಗಿಯೂ, ಈಶ, ಈಶಿತವ್ಯಗಳೆಂಬ ವೈಷಮ್ಯಗಳೊಡನೆ ಕೂಡಿರುವುದೂ, ದಯೆಗೆ ಅರ್ಹವಾಗಿಯೂ ಇರುವ ಜಗತ್ತನ್ನು ಆಯಾಯಾ ಚೇತನನ ಪುಣ್ಯ ಪಾಪಗಳೆಂಬ ಕರ್ಮವನ್ನು

ವಿಚಾರಿಸಿ ಸೃಷ್ಟಿಸುವ ನಿನಗೆ ಪಕ್ಷಪಾತ, ನಿರ್ದಯತ್ವಗಳು ಇಲ್ಲ ಎಂಬುದು ಯಾವುದುಂಟೋ, ಅದನ್ನು ಬ್ರಹ್ಮ ಸೂತ್ರಗಳನ್ನು ಸಹಾಯಕವಾಗುಳ್ಳ ಶ್ರುತಿಗಳು ಪ್ರತಿಪಾದಿಸುತ್ತವೆ.

## ಸೂತ್ರ - 40

1. **ಕಾರಣಂ ತು ಧ್ಯೇಯಃ — (ಶ್ವೇತಾಶ್ವತರ ಉಪನಿಷತ್)**
ಜಗತ್ಕಾರಣವಾದದ್ದೇ ಧ್ಯಾನಕ್ಕೆ ವಿಷಯವಾಗಿದೆ.
2. **ಯೋ ಬ್ರಹ್ಮಾಣಂ .....................ಪ್ರಹಿಣೋತಿ ತಸ್ಮೈ — (ಶ್ವೇ. ಉ.)**
ಯಾವನು ಲೋಕವನ್ನು ಸೃಷ್ಟಿಸುವುದಕ್ಕೆ ಮುನ್ನ ಚತುರ್ಮುಖನನ್ನು ಸೃಷ್ಟಿಸಿದನೋ, ಯಾರು ಆ ಚತುರ್ಮುಖನಿಗೆ ವೇದಗಳನ್ನು ಉಪದೇಶಿಸಿದನೋ.
3. **ಫಲಮತ ಉಪಪತ್ತೇಃ — (ಬ್ರಹ್ಮಸೂತ್ರ 3-2-37)**
ಯುಕ್ತಿ ಯುಕ್ತವಾದದ್ದರಿಂದ ಈ ಪರಮ ಪುರುಷನಿಂದ ಫಲವು ದೊರೆಯುತ್ತದೆ.

## ಸೂತ್ರ - 41

1. **ಇಚ್ಛಾಗೃಹೀತಾಭಿಮತೋರುದೇಹಃ — (ಶ್ರೀ ವಿ.ಪು. 6-5-84)**
ತನ್ನಿಚ್ಛೆಯಂತೆ ಸ್ವೀಕರಿಸಲ್ಪಟ್ಟ ಅನುರೂಪವಾದ ರಾಮಕೃಷ್ಣಾದಿ ಅನೇಕ ಶರೀರಗಳನ್ನುಳ್ಳ.
2. **ನ ತಸ್ಯ ಪ್ರಾಕೃತಾ ಮೂರ್ತಿಃ — (ಮಹಾಭಾರತ)**
ಅವನದು ಪ್ರಾಕೃತವಾದ ಶರೀರವಲ್ಲ.
3. **ಕಾ ಚಾನ್ಯಾ .................. ಗದಾಭೃತಃ — (ಶ್ರೀ ವಿ.ಪು. 1-9-122)**
ಹೇ ದೇವಿಯೇ! ದೇವ ದೇವನಾದ ಗದಾಧರನಾದ ವಿಷ್ಣುವಿನ ಯೋಗಿಗಳಿಂದ ಧ್ಯಾನ ಮಾಡಲ್ಪಡುವ, ಸಮಸ್ತ ಯಜ್ಞ ಸ್ವರೂಪವಾದ ದಿವ್ಯ ಮಂಗಳ ವಿಗ್ರಹವನ್ನು, ನಿನ್ನ ಹೊರತಾಗಿ ಬೇರೆ ಯಾರು ತಾನೇ ಪಡೆಯಬಲ್ಲರು?
4. **ರೂಪ .................... ಚಿತ್ತಾಪಹಾರಿಣಮ್ — (ಶ್ರೀ ರಾ. ಅಯೋಧ್ಯಾ ಕಾಂಡ 2)**
ಶರೀರ ಸೌಂದರ್ಯದಿಂದಲೂ, ಔದಾರ್ಯದಿಂದಲೂ ಪುರುಷರ ಕಣ್ಣನ್ನೂ, ಮನಸ್ಸನ್ನೂ ಅಪಹರಿಸುವವನು.
5. **ರಾಮಃ .................. ಸರ್ವಸತ್ವ ಮನೋಹರಃ — (ಶ್ರೀ ರಾ. ಸುಂದರ ಕಾಂಡ)**
ತಾವರೆ ಎಲೆಯಂತೆ ಮೈ ಬಣ್ಣವುಳ್ಳವನೂ, ತಾವರೆಯಂತೆ ಕಣ್ಣುಳ್ಳವನೂ ಆದ ರಾಮನು ಸರ್ವಭೂತಗಳ ಮನಸ್ಸನ್ನೂ ಅಪಹರಿಸುವವನಾಗಿದ್ದಾನೆ.
6. **ಕಂಡವರ್ ಮನಂ ವಳಂಗುಂ — (ಪೆರಿಮಾಳ್ ತಿರುಮೊಳಿ 8-2)**
7. **ಪೇರಿನ್ಬಮೆಲ್ಲಾಂ ತುರನ್ದಾರ್ ತೊಳುಥಾರತ್ತೋಳ್ — ( ತಿರುವಂದಾದಿ 42)**
8. **ಕಣ್ ಕೈ ಕಾಲ್ ತೂಯ ಶೆಯ್ಯ ಮಲರ್‌ಗಳ್ — (ತಿರುವಾಯ್ಮೊಳಿ 8-5-1)**

9. **ಅಜಾಯಮಾನೋ ಬಹುಧಾ ವಿಜಾಯತೇ – (ಪುರುಷ ಸೂಕ್ತ)**
ಕರ್ಮನಿಬಂಧನವಾದ ಹುಟ್ಟಿಲ್ಲದ ಈಶ್ವರನು ತನ್ನ ಸ್ವ ಸಂಕಲ್ಪದಿಂದ ಅನೇಕ ಪ್ರಕಾರಗಳಾಗಿ ಬಂದು ಅವತರಿಸುತ್ತಾನೆ.

10. **ಪ್ರಕೃತಿಂ ................. ಸಂಭವಾಮಿ – (ಗೀತೆ 4-6)**
ಹುಟ್ಟಿಲ್ಲದವನಾದರೂ, ನಾಶವಿಲ್ಲದವನೂ, ಆಗಿದ್ದರೂ ಕೂಡ ನನ್ನ ಸ್ವಭಾವದಿಂದ ಸ್ವೀಕರಿಸಿ ನನ್ನ ಸ್ವಸಂಕಲ್ಪದಿಂದ ಅವತರಿಸುತ್ತೇನೆ.

11. **ಕಲ್ಪೇ ಕಲ್ಪೇ ಜಾಯಮಾನಸ್ಸ್ವ ಮೂರ್ತ್ಯಾ.**
ಪ್ರತಿ ಕಲ್ಪದಲ್ಲೂ ತನ್ನ ದಿವ್ಯ ಮಂಗಳ ವಿಗ್ರಹದಿಂದ ಅವತರಿಸುವ ಸರ್ವೇಶ್ವರನು.

12. **ಆದಿಯಂ ಶೋದಿ .............. ಪ್ಪಿರಂದ – (ತಿರುವಾಯ್ಮೊಳಿ 4-5-5)**

13. **ಆತ್ಮಾ ನಮಸ್ಯ ................. ಮಮ ಸಂಸ್ಥಿತಮ್ – (ಶ್ರೀ ವಿ.ಪು. 1-22-67 ರಿಂದ 74)**
ಭಗವಾನ್ ಹರಿಯು ದುಃಖವಿಲ್ಲದವನೂ, ದುರ್ಗುಣವಿಲ್ಲದವನೂ, ಈ ಜಗತ್ತಿನಲ್ಲಿರುವ ಜೀವರುಗಳನ್ನು ಕೌಸ್ತುಭಮಣಿ ಸ್ವರೂಪವಾಗಿ ಧರಿಸಿದವನೂ, ಮೂಲ ಪ್ರಕೃತಿಯನ್ನೂ , ಶ್ರೀವತ್ಸವೆಂಬ ಮಚ್ಚೆಯ ರೂಪದಲ್ಲುಳ್ಳವನೂ, ಅನಂತನಿಂದ ಆಶ್ರಯಿಸಲ್ಪಟ್ಟವನಾಗಿದ್ದಾನೆ. ಬುದ್ಧಿಯನ್ನು ಗದೆಯಾಗಿಯೂ, ಈಶ್ವರನು ಸಾತ್ವಿಕ, ತಾಮಸವೆಂಬ ಎರಡು ವಿಧವಾದ ಅಹಂಕಾರಗಳನ್ನೂ ಶಂಖ ರೂಪವಾಗಿಯೂ, ಶಾಂರ್ಙ್ಗರೂಪವಾಗಿಯೂ ಧರಿಸಿದ್ದಾನೆ. ಅತಿ ಚಂಚಲವಾಗಿಯೂ, ವಾಯುವಿಗಿಂತ ವೇಗವಾಗಿಯೂ ಚಲಿಸುವ ಮನಸ್ಸನ್ನು ಕೈ ಯಲ್ಲಿ ಹಿಡಿದ ಚಕ್ರ ರೂಪವಾಗಿ ವಿಷ್ಣುವು ಧರಿಸಿದ್ದಾನೆ. ಹೇ ಬ್ರಾಹ್ಮಣನೇ। ಐದು ವರ್ಣಗಳನ್ನುಳ್ಳ ವಿಷ್ಣುವಿನ ವೈಜಯಂತಿಮಾಲೆಯು ಭೂತತನ್ಮಾತ್ರೆಗಳ ಸಂಘಾತವಾಗಿದೆ. ಪಂಚ ಭೂತಗಳೂ, ಪಂಚ ಕರ್ಮೇಂದ್ರಿಯಗಳನ್ನೂ ಪಂಚ ಜ್ಞಾನೇಂದ್ರಿಯಗಳನ್ನೂ ಬಾಣಗಳನ್ನಾಗಿ ಧರಿಸಿದ್ದಾನೆ. ಅತ್ಯಂತ ನಿರ್ಮಲವಾದ ಯಾವ ಖಡ್ಗವಿದೆಯೋ ಅದು ಅವಿದ್ಯೆಯೆಂಬ ಒರೆಯೊಳಗಿರುವ ವಿದ್ಯಾಮಯವಾದ ಜ್ಞಾನವಾಗಿದೆ.

## ಸೂತ್ರ - 42

1. **ಮಮ ಪ್ರಕಾರಾಃ ಪಂಚೇತಿ ................ ವೇದಾಂತವಿದೋ ಜನಾಃ – (ವಿಷ್ವಕ್ಸೇನ ಸಂಹಿತಾ)**
ನನ್ನ ಪ್ರಕಾರಗಳು ಐದು ಎಂದು ವೇದಾಂತ ಪಾರಂಗತರು ಹೇಳುತ್ತಾರೆ. ಪರ, ವ್ಯೂಹ, ವಿಭವ, ಅಂತರ್ಯಾಮಿ, ದಯಾಳುವಾದ ಅರ್ಚಾ ಎಂದು ಐದು ಪ್ರಕಾರವಾಗಿ ನನ್ನನ್ನು ವೇದಾಂತವನ್ನರಿತ ಜನಗಳು ಹೇಳುತ್ತಾರೆ.

## ಸೂತ್ರ - 43

1. **ನ ಕಾಲಸ್ಯ ತತ್ರ ವೈ ಪ್ರಭುಃ – (ಮಹಾಭಾರತ)**
ಅಲ್ಲಿ ಕಾಲವು ಒಡೆಯನಲ್ಲ.

2. **ಕಲಾಮುಹೂರ್ತಾದಿ ............ ಪರಿಣಾಮ ಹೇತುಃ**
ಕಲಾ, ಮುಹೂರ್ತ ಮೊದಲಾದ ಖಂಡಗಳಾಗಿಯೂ, ಅಖಂಡವಾಗಿಯೂ ಇರುವ ಕಾಲವಾದರೋ ಆ ಪರಮಾತ್ಮನ ನಿತ್ಯ ವಿಭೂತಿಯ ವಿಕಾರಗಳಿಗೆ ಕಾರಣವಾಗಿಲ್ಲ.

3. **ಯೋ ವೈ ನ ............ ವಿಭೂತಿಃ**

ಯಾವ ನಿತ್ಯ ವಿಭೂತಿಯು ಪರಿಣಾಮಕ್ಕೆ ಆಸ್ಪದವಾಗಿಲ್ಲವೋ, ಅಂತಹ ತಮ್ಮ ಉತ್ಕೃಷ್ಟವಾದ ಮಹತ್ತಾದ ವಿಭೂತಿಯು ಮೂರು ಕಾಲಗಳನ್ನೂ ಮೀರಿದುದಾಗಿದೆ.

4. **ನಲಮಂದಮಿಲ್ಲದೋರ್ ನಾಡುಪುಹುವೀರ್ – (ತಿರುವಾಯ್ಮೊಳಿ 2-8-4)**

ಆನಂದಕ್ಕೆ ಅಂತ್ಯವೇ ಇಲ್ಲದ ನಾಡನ್ನು ಹೊಂದುವಿರಿ.

5. **ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ – (ಪುರುಷ ಸೂಕ್ತ)**

ಎಲ್ಲಿ ಪ್ರಥಮ ಪ್ರಾಪ್ಯಭೂತರಾದ ನಿತ್ಯರುಗಳು ಇರುತ್ತಾರೋ

6. **ಯತ್ರ ಋಷಯಃ ............ ಪುರಾಣಾಃ – (ಯಜುರ್ವೇದ -ಅಚ್ಛಿದ್ರ)**

ಯಾವ ಪರಮ ಪದದಲ್ಲಿ ಋಷಿಗಳು, ನಿತ್ಯಸೂರಿಗಳು ಅನಾದಿ ಸಿದ್ಧರಾಗಿಯೂ ಅತ್ಯಂತ ಹಳಬರಾದರೂ ನೂತನರಾಗಿಯೂ ಇರುತ್ತಾರೆಯೋ.

7. **ಸೂರ್ಯ ಕೋಟಿ ಪ್ರಕಾಶಾಃ ............... ಸಂಸಾರ ಬಂಧನೈಃ – (ಲಕ್ಷ್ಮೀ ತಂತ್ರಂ)**

ಕೋಟಿ ಸೂರ್ಯ ಸಮಾನರಾದ, ಎಣಿಸಲಾಗದಷ್ಟು ಪೂರ್ಣಚಂದ್ರರಿಗೆ ಸಮಾನರಾದ ಮುಕ್ತರು ಯಾವ ಪರಮ ಪದದಲ್ಲಿ ಪ್ರಕಾಶಿಸುತ್ತಾರೋ.

8. **ವೈ ಕುಂಠೇ .................... ಜ್ಞಾನೇನ ವಾಮರಃ**

ವೈಕುಂಠವೆಂಬ ಉತ್ಕೃಷ್ಟವಾದ ಲೋಕದಲ್ಲಿ ನಿತ್ಯನಾಗಿ ವ್ಯವಸ್ಥಿತನಾಗಿರುವ ದೇವನನ್ನು ನಿತ್ಯರುಗಳು ಸದಾ ಕಣ್ಣುಗಳಿಂದ ಜ್ಞಾನದಿಂದಲೇ ಕಾಣುತ್ತಿರುತ್ತಾರೆ.

## ಸೂತ್ರ - 44

1. **ಚತುರ್ವಿಧ .............. ಸೃಷ್ಟಿ ಸ್ಥಿತ್ಯಂತ ಸಿದ್ಧಯೇ – (ವಿಷ್ವಕ್ಸೇನ ಸಂಹಿತೆ )**

ಮುಮುಕ್ಷುಗಳ ಹಿತಕ್ಕಾಗಿ, ಇತರ ಲೋಕಗಳ ಸೃಷ್ಟಿ, ಸ್ಥಿತಿ, ಲಯಕ್ಕಾಗಿ, ಶ್ರುತಿ ಪ್ರಸಿದ್ಧನಾದ ಪರಮಾತ್ಮನು ನಾಲ್ಕು ವಿಧಗಳಾಗಿರುತ್ತಾನೆ.

2. **ಆನಂತ್ಯಾತ್ ............... ಪತತಾಮಧಃ – (ವಿ.ಸಂ.)**

ಸೇನಾಪತಿಯಾಳ್ವಾನೇ, ಅಧಿಕವಾಗಿರುವುದರಿಂದ ಮೊದಲನೆಯದಾಗಿ ವ್ಯೂಹವು ಅನಾದಿ ಕರ್ಮವಶ್ಯರಾದವರಿಗೂ, ಸಂಹಾರದಲ್ಲಿ ನರಕದಲ್ಲಿ ಬೀಳುವವರ ಅನುಗ್ರಹಾರ್ಥವಾಗಿಯೂ ನಿನಗೆ ಹೇಳಲ್ಪಟ್ಟಿದೆ.

3. **ಉಪಾಸಕಾನುಗ್ರಹಾರ್ಥಂ ಜಗತೋ ರಕ್ಷಣಾಯಚ – (ವಿ.ಸಂ.)**

ಉಪಾಸನೆ ಮಾಡುವರ ಅನುಗ್ರಹಾರ್ಥವಾಗಿಯೂ, ಮತ್ತು ಜಗತ್ತಿನ ರಕ್ಷಣೆಗಾಗಿಯೂ,

4. **ಆವಿರಾಸೀತ್ ಭಗವತಃ ................. ಘನಪ್ರಭಃ – (ವಿ.ಸಂ.)**

ಹೀಗೆ ಸ್ವರ್ಣದಂತೆ ಕಾಂತಿಯುಳ್ಳವನಾಗಿಯೂ, ನಿರ್ಮಲನಾಗಿಯೂ, ಸರ್ವಶಾಸ್ತ್ರಗಳಲ್ಲೂ ಹೇಳಲ್ಪಟ್ಟವನಾಗಿಯೂ, ಸರ್ವಾಯುಧಗಳಿಂದ ಅಲಂಕರಿಸಲ್ಪಟ್ಟವನಾಗಿಯೂ ಇರುವ ಪರವಾಸುದೇವನಿಂದ

ಆವಿರ್ಭವಿಸಿದನು. ಅವನು ಪ್ರದ್ಯುಮ್ನನೆಂಬ ಹೆಸರಿನಿಂದ ಕೂಡಿದವನಾಗಿ ಅದಕ್ಕನುಗುಣವಾದ ದಿವ್ಯಮಂಗಳ ವಿಗ್ರಹ ಧರಿಸಿದವನಾದನು. ಈ ಪ್ರದ್ಯುಮ್ನನು, ಸಂಕರ್ಷಣನೆಂಬ ಹೆಸರುಳ್ಳವನಾಗಿ ಅದಕ್ಕನುಸಾರವಾದ ದಿವ್ಯ ಶರೀರವನ್ನು ಹೊಂದಿದನು. ಈ ಸಂಕರ್ಷಣನು ಇಂದ್ರನೀಲ ರತ್ನದಂತೆ ಪ್ರಕಾಶವುಳ್ಳವನು, ಎಂದು ಶಾಸ್ತ್ರಗಳು ಕೊಂಡಾಡುತ್ತವೆ. ಹೇ ಮೈತ್ರೇಯ, ಈ ಸಂಕರ್ಷಣನು ಅನಿರುದ್ಧನೆಂಬ ಹೆಸರುಳ್ಳವನಾಗಿಯಾದನು. ಇವನು ತತ್ಕಾಲದಲ್ಲುಂಟಾದ ಮೇಘದ ಕಾಂತಿಯಿಂದ ಕಂಗೊಳಿಸುವನಾದನು.

5. **ಸಂಪೂರ್ಣ ಷಡ್ಗುಣಸ್ತೇಷು ................ ಜಗತ್ಪತಿಃ – (ಅಹಿರ್ಬುಧ್ನ್ಯಸಂಹಿತೆ)**
ಅವರುಗಳಲ್ಲಿ ಜಗತ್ಪತಿಯಾದ ವಾಸುದೇವಮೂರ್ತಿಯು ಪೂರ್ಣವಾದ ಆರು ಗುಣಗಳೊಡನೆ ಕೂಡಿದವನು.

6. **ಪೂರ್ಣ ಸ್ತಿಮಿತ ಷಾಡ್ಗುಣ್ಯೋ ............ ಸನಾತನಃ**
ವಿನಾಶವಿಲ್ಲದವನಾದ ನಿತ್ಯನಾದ ಭಗವಂತನಾದ ವಾಸುದೇವ ಮೂರ್ತಿಯು ತನ್ನಿಂದ ಏರ್ಪಟ್ಟ ಆರುಗುಣಗಳ ಏಕಕಾಲ ವೃತ್ತಿಯಿಂದ ಅಲೆಯಿಲ್ಲದ ಸಮುದ್ರದಂತಿರುವವನಾಗಿ ಪೂರ್ಣನಾಗಿ ಭಗವಾನಾಗಿ ಕಂಗೊಳಿಸಿದನು.

7. **ತತ್ರ ತತ್ರಾವ ............. ಯಥಾತಥಂ – (ಶ್ರೀ ವಿ.ಪು)**
ಎಲೈ ಮುನಿಯೇ। ಸಂಕರ್ಷಣಾದಿಗಳಲ್ಲಿ ಉಳಿದಿರುವ ನಾಲ್ಕು ಗುಣಗಳೂ ಆಯಾಯಾ ಮೂರ್ತಿಗಳಲ್ಲಿಯೇ ಅವರಿಗುಳ್ಳ ಎರಡು ಗುಣಗಳನ್ನು ಅತಿಕ್ರಮಿಸದೆ ಅನುವರ್ತಿಸುತ್ತದೆ.

8. **ಗುಣೈ ಷಷ್ಟಭಿಸ್ತವೇದೈಃ ............ ಗುಣಾಃ – (ವರದರಾಜಸ್ತವ 16)**
ನಿನ್ನ ಮೊದಲ ಪರವಾಸುದೇವ ಮೂರ್ತಿಯ ಈ ಆರು ಗುಣಗಳಿಂದಲೂ ಪ್ರಕಾಶಿಸುತ್ತಿದೆ. ನಂತರ ಆರುಗುಣಗಳುಳ್ಳ ಭಗವಾನನೇ ಸಂಕರ್ಷಣ, ಪ್ರದ್ಯುಮ್ನ , ಅನಿರುದ್ಧರೆಂಬ ಎರಪರ ಮೂರು ಗುಂಪುಗಳಿಂದ ಒಂದೊಂದರಲ್ಲೂ ಎರಡೆರಡು ಗುಣಗಳಾಗಿ ಪ್ರಕಾಶಿಸುತ್ತವೆ. ಈ ವ್ಯವಸ್ಥೆಯು ಹೀಗೆ ಪ್ರಕಾಶಿಸುವ ಉದ್ದೇಶದಿಂದ ಇದೆಯೋ ಎನ್ನುವಂತೆ, ನೀನು ಎಲ್ಲೆಡೆ ಎಲ್ಲ ಕಾಲದಲ್ಲೂ ಅಗಣಿತವಾದ ಅತಿಶಯವಾದ ಮಂಗಳ ಗುಣಗಳಿಂದ ಕೂಡಿದವನು.

## ಸೂತ್ರ - 46

1. **ತತ್ರ ............ ಹರೇ – (ವಿಷ್ವಕ್ಸೇನ ಸಂಹಿತೆ)**
ವ್ಯೂಹತ್ರಯದಲ್ಲಿ ವಿಷ್ಣುವಿನ ಸಂಕರ್ಷಣ ಸಂಬಂಧವಾದ ರೂಪವು ಜ್ಞಾನ, ಬಲ ಇವರೆಡರಿಂದ ಕೂಡಿದೆ.

2. **ಭಗವಾನಚ್ಯುತಾಪಿ ................ ಮುನೇ – (ಶ್ರೀ ವಿ.ಪು)**
ಎಲೈ ಮುನಿಯೇ। ಈ ಪ್ರಕಾರವಾಗಿ ಆಶ್ರಿತರ ಕೈ ಬಿಡದವನಾದ ಭಗವಾನ್ ಅಚ್ಯುತನು ಹೀಗೆ ಆರು ಗುಣಗಳಿಂದ ಪ್ರಕಾಶಿಸುತ್ತಿದ್ದರೂ, ಕಾರ್ಯಾನುಗುಣವಾಗಿ ಜ್ಞಾನ, ಬಲ ಇವೆರಡು ಗುಣಗಳು ಸಂಕರ್ಷಣನಲ್ಲಿ ಸ್ಫುಟವಾಗಿ ವ್ಯಕ್ತವಾಗುತ್ತವೆ.

3. **ಸೋಯಂ ................ ಸ್ಥಿತಃ**

ಈ ಸಂಕರ್ಷಣನು ಸಮಸ್ತ ಜೀವರುಗಳಿಗೂ ಅಧಿಷ್ಠಾತಾವಾಗಿದ್ದಾನೆ.

4. **ಸಂಕರ್ಷಣಸ್ತು ................. ವಿವಿಚ್ಯತತ್**

ಅನಂತರ ದೇವತೆಗಳಿಗೆ ನಿಯಾಮಕನಾದ ಸಂಕರ್ಷಣನು ಜಗತ್ತನ್ನು ಸೃಷ್ಟಿಸುವ ಮನಸ್ಸುಳ್ಳವನಾಗಿ ಜೀವತತ್ವವನ್ನು ಅನುಪ್ರವೇಶಿಸಿ ಪ್ರಕೃತಿಯಿಂದ ಜೀವತತ್ವವನ್ನು ನಾಮ ರೂಪಗಳು ತೋರುವಂತೆ ಬಿಡಿಸಿ.

5. **ವಿವೇಕಾಂತರಂ ........... ಸಃ**

ಹೀಗೆ ಬಿಡಿಸಿದ ನಂತರ ಆ ಸಂಕರ್ಷಣನು ಪ್ರದ್ಯುಮ್ನನೆಂಬ ರೂಪವನ್ನು ಹೊಂದಿದನು.

6. **ಶಾಸ್ತ್ರ................ ದೇಹಿನಾಂ.**

ದೇಹವುಳ್ಳವರ ಶಾಸ್ತ್ರ ಪ್ರವರ್ತನವನ್ನೂ ಸಂಹಾರವನ್ನೂ ಸಂಕರ್ಷಣನು ಮಾಡುತ್ತಾನೆ.

7. **ಬಲೇನ ............ ವಿಶೇಷತಃ**

'ಬಲ' ಎಂಬ ಗುಣದಿಂದ ಸಂಹಾರವನ್ನು ವೇದ ಶಾಸ್ತ್ರವೆಂದೂ, ಪಾಂಚರಾತ್ರವೆಂದೂ ಪ್ರಸಿದ್ಧವಾದ ಸಮಸ್ತ ಸಿದ್ಧಾಂತಗಳನ್ನೂ ಒಳಗೊಂಡ ಶಾಸ್ತ್ರವನ್ನು 'ಜ್ಞಾನ' ದಿಂದಲೂ ವಿಸ್ತರಿಸುತ್ತಾನೆ. ಎಂದರೆ ಶಾಸ್ತ್ರ ಪ್ರವರ್ತನ ಮಾಡುತ್ತಾನೆ.

## ಸೂತ್ರ - 47

1. **ಐಶ್ವರ್ಯ ವೀರ್ಯ ............... ಉಚ್ಯತೇ – (ವಿಷ್ವಕ್ಸೇನ ಸಂಹಿತೆ)**

ಪ್ರದ್ಯುಮ್ನ ಸಂಬಂಧಿಯಾದ ರೂಪವು ಐಶ್ವರ್ಯ ವೀರ್ಯಗಳೊಡನೆ ಕೂಡಿದವುಗಳಾಗಿ ಹೇಳಲ್ಪಡುತ್ತದೆ.

2. **ಮನೂನಾಂ ................ ತವ ಕೀರ್ತಿತಃ – (ವಿಷ್ವಕ್ಸೇನ ಸಂಹಿತೆ)**

ನಾಲ್ಕಾಗಿರುವ ಬ್ರಾಹ್ಮಣಾದಿಗಳ ಸೃಷ್ಟಿಗೆ ಕಾರಣವಾಗಿರುವ, ಜಗತ್ಪತಿಯಾದ ಪ್ರದ್ಯುಮ್ನನು ಮುಖ, ಕೈ, ತೊಡೆ, ಪಾದ ಇವುಗಳಿಂದ ಮನುಗಳ ಸೃಷ್ಟಿಯನ್ನು ಮಾಡಿದನು. ಬ್ರಾಹ್ಮಣ ಮಿಥುನವನ್ನು (ಸ್ತ್ರೀ ಪುರುಷರು) ಕ್ಷತ್ರಿಯ ಮಿಥುನವನ್ನು ವೈಶ್ಯ ಮಿಥುನವನ್ನು ಆ ಪ್ರಕಾರವಾಗಿ ಶೂದ್ರ ಮಿಥುನವನ್ನು ಹೀಗೆ ನಾಲ್ಕು ಮನುಗಳಾದ ಸ್ತ್ರೀ ಪುರುಷ ಮಿಥುನಗಳಾದ ಮಾನವಶತವು ಉಂಟಾಯಿತು. ಆ ಪ್ರಕಾರವಾಗಿ ಆ ಮನುಗಳಿಂದ ಬಿಡಿ ಬಿಡಿಯಾದ ಭೇದಗಳಿಂದುಂಟಾದ ಅನೇಕ ಮಾನವರುಗಳು ಸ್ತ್ರೀ ಪುರುಷರುಗಳಾಗಿ ಶೀಘ್ರವಾಗಿ ಉಂಟಾದರು. ನಂತರ ಆ ಮಾನವರುಗಳಿಂದ ಮನುಷ್ಯರುಗಳು, ದ್ವೇಷವಿಲ್ಲದವರಾಗಿ ಉಂಟಾದರು. ಈ ಮನುಷ್ಯರು ಶುದ್ಧ ಸತ್ವಸ್ಥರಾಗಿ ದೇಹಾವಸಾನ ಪರ್ಯಂತ ಬೇರೆಯದನ್ನು ಏನೂ ಯೋಚಿಸದೆ, ಫಲಾಪೇಕ್ಷೆ ಇಲ್ಲದೆ, ಕರ್ಮಾನುಷ್ಠಾನ ಮಾಡುವವರಾಗಿಯೂ ಇರುವುದರಿಂದ ಅವರುಗಳು ನನ್ನನ್ನೇ ಪಡೆಯುತ್ತಾರೆ. ದ್ವಾದಶಾಕ್ಷರದಿಂದ (ಓಂ.ನಮೋ ಭಗವತೇ ವಾಸುದೇವಾಯ ಎಂಬ ಮಂತ್ರದಿಂದ) ಅಧ್ಯಾತ್ಮ ಚಿಂತಕರಾಗಿ ಸದಾಕಾಲ ಜಗತ್ಪತಿಯ ವ್ಯೂಹಾನುಭವದಲ್ಲೇ ಮುಳುಗಿರುತ್ತಾರೆ. ಹೇ ಗಣೇಶನಾದ ವಿಷ್ವಕ್ಸೇನನೇ! ಜಗತ್ತನ್ನು ಧರಿಸುವ ನಾಲ್ಕು ವ್ಯೂಹಗಳಲ್ಲಿ ಮೊದಲನೆಯದಾದ ಪ್ರದ್ಯುಮ್ನನಿಂದ ಗುಣ ಪ್ರಧಾನಯೋಗದಲ್ಲೂ ನಿಷ್ಠೆಯುಳ್ಳವರಾಗಿ ಮನಸ್ಸಿನಿಂದ ಸೃಷ್ಟಿಸಲ್ಪಟ್ಟರು. ಈ ಪ್ರಕಾರ ಶುದ್ಧ ಸರ್ಗವು (ಸೃಷ್ಟಿಯು) ಹೇಳಲ್ಪಟ್ಟಿದೆ.

# ಸೂತ್ರ - 48

1. **ಶಕ್ತಿ ತೇಜಸ್ .................. ಹರೇಃ – (ವಿಷ್ವಕ್ಸೇನ ಸಂಹಿತೆ)**

ವಿಷ್ಣುವಿನ ಅನಿರುದ್ಧ ಶರೀರವಾದರೋ ಶಕ್ತಿ ತೇಜಸ್ಸುಗಳ ಉತ್ಕರ್ಷದಿಂದ ಏರ್ಪಟ್ಟಿದೆ.

2. **ಪುರುಷೋಪಿ ...................... ಕಾರ್ಯವಶಾಸ್ ಮುನೇ – (ವಿ. ಸಂ)**

ಮಹಾಧ್ಯಕ್ಷನಾದ ಪರಮ ಪುರುಷನು ಪೂರ್ಣವಾದ ಷಾಡ್ಗುಣ್ಯವುಳ್ಳವನಾಗಿದ್ದಾನೆ. ಆ ಅನಿರುದ್ಧನಿಗೆ ಶಕ್ತಿ ತೇಜಸ್ಸುಗಳೆಂಬ ಗುಣಗಳು ಕಾರ್ಯವಶದಿಂದ ಸ್ಪಷ್ಟವಾಗಿದೆ.

5. **ಶಕ್ತ್ಯಾ ಜಗದಿದಂ..................ಮುನೇ – (ವಿ.ಸಂ.)**

ಹೇಮುನಿಯೇ।ಅನಂತವಾದ ಅಂಡಗಳಿಂದ ನಿರಂತರವಾಗಿ ನಿಬಿಡವಾಗಿರುವ ಈ ಸಮಸ್ತವಾದ ಜಗತ್ತನ್ನು ಶಕ್ತಿಯಿಂದ ಹರಿಯು, ಮಾಣಿಕ್ಯ ಪರ್ವತವು ಅಣುವನ್ನು ಧರಿಸುವಂತೆ ಧರಿಸುತ್ತಾನೆ. ಆತ್ಮನಿಗೆ ತೇಜಸ್ಸಿನಿಂದ ಸಮಸ್ತವಾದ ತತ್ತ್ವಗಳನ್ನೂ ತಿಳಿಸಿ ರಕ್ಷಿಸುತ್ತಾನೆ.

6. **ತುರೀಯೋಯಂ ............... ತವ ಕೀರ್ತತಃ – (ವಿಷ್ವಕ್ಸೇನ ಸಂಹಿತೆ)**

ಈ ವಾಸುದೇವಾದಿಗಳಲ್ಲಿ ನಾಲ್ಕನೆಯವನಾದ ಜಗನ್ನಾಥನಾದ ಅನಿರುದ್ಧನು ಮತ್ತೆ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದನು. ಪರಮೇಷ್ಠಿ ಎಂದು ಹೆಸರುಳ್ಳವನಾದ ಆ ಬ್ರಹ್ಮನ ಮುಖ, ಕೈ, ತೊಡೆ ಕಾಲುಗಳಿಂದ ಉಂಟಾದ ನಾಲ್ಕು ವಿಧವಾದ ಭೂತ (ಪ್ರಾಣಿವರ್ಗ) ಗಳ ಸೃಷ್ಟಿಯು ಆ ಬ್ರಹ್ಮನಿಂದಲೇ ಆಗುತ್ತದೆ. ಹಾಗೆಯೇ ಬ್ರಾಹ್ಮಣರೇ ಮೊದಲಾದ ವರ್ಣಗಳವರೂ, ರಜೋಗುಣ ಪ್ರಚುರರಾಗಿ ವೇದ ಮಾರ್ಗಗಳಲ್ಲಿ ನಿಷ್ಠೆಯುಳ್ಳವರಾಗಿ ಫಲವಾದದಲ್ಲಿ ಆಸಕ್ತರಾಗಿರುತ್ತಾರೆ. ದೇವತೆಗಳನ್ನೇ ಆರಾಧ್ಯರಾಗಿ ಭಾವಿಸಿ, ಸ್ವತಃ ತಾವುಗಳು ನನ್ನನ್ನು ಧ್ಯಾನಿಸುವುದಿಲ್ಲ. ಕೆಲವರು ತಮಃ ಪ್ರಚುರರಾಗಿ ನನ್ನ ನಿಂದೆಯಲ್ಲೇ ಪ್ರವೃತ್ತರಾಗಿರುತ್ತಾರೆ. ಆರಾಧ್ಯನಾಗಿಯೂ, ನಿಯಂತಾವಾಗಿಯೂ ಇರುವ ನನ್ನನ್ನು ಅರಿಯದೆ ಪರಸ್ಪರ ಸಲ್ಲಾಪ ಮಾಡುತ್ತಾ ವ್ಯಗ್ರಗಳಾದ ವೇದಗಳಲ್ಲೇ ನಿಷ್ಠರಾಗಿ ನನ್ನನ್ನು ಅರಿಯದೇ ಹೋಗುತ್ತಾರೆ. ಇವರು ಅಜ್ಞಾನದಿಂದ ನನ್ನಲ್ಲಿ ಭಕ್ತಿಯಿಲ್ಲದವರಾಗಿ ಸ್ವರ್ಗಾದಿಗಳಲ್ಲಿ ರಮಿಸುತ್ತಾರೆ. ಅವರುಗಳು ಸ್ವರ್ಗಾನುಭವದ ಕೊನೆಯಲ್ಲಿ ಕೆಳಗೆ ಈ ಲೋಕದಲ್ಲಿ ಬೀಳುತ್ತಾರೆ. ಹೇ ಶ್ರೇಷ್ಠನೇ, ಈ ಬ್ರಾಹ್ಮಣರು ಕಾಮವಿಷಯಿಕವಾದ ಮನಸ್ಸುಳ್ಳವರಾಗಿ ಜರಾಮರಣಗಳನ್ನು ಹೊಂದಿ ಅಜ್ಞಾನದಿಂದ ಸಂಸಾರ ಮಾರ್ಗದಲ್ಲಿ ಮಗ್ನರಾಗಿರುತ್ತಾರೆ. ಎಂಬುದಾಗಿ ಮಿಶ್ರ ಸರ್ಗವು (ಸೃಷ್ಟಿ) ನಿನಗೆ ಹೇಳಲ್ಪಟ್ಟಿತು ಎಂಬುದಾಗಿದೆ.

7. **ಭಗವನ್ ದೇವ ದೇವೇಶ .............. ಪುರುಷೋತ್ತಮ – (ವಿ.ಸಂ.)**

ಓ ದೇವಾಧಿದೇವನೇ, ಹೇ ಸರ್ವಜ್ಞನೇ, ಪರಮೇಶ್ವರನೇ, ಜಗತ್ಪತಿಯೇ ಪುರುಷೋತ್ತಮನೇ, ಇವರುಗಳ ವಿಷಯದಲ್ಲಿ ನೀನು ನಿರ್ದಯನಾಗಿ ಶುದ್ಧ ಸೃಷ್ಟಿಯನ್ನು ಬಿಟ್ಟು, ಮಿಶ್ರ ಸೃಷ್ಟಿಯನ್ನು ಏಕೆ ಮಾಡಿದೆ?

8. **ವಿಹಾಯ ಶುದ್ಧ ಸರ್ಗಂ ಚ ................ ಲೀಲಯಾಮಯಾ – (ವಿ.ಸಂ)**

ಹೇ ವಿಷ್ವಕ್ಸೇನನೇ, ನೀನು ಶುದ್ಧ ಸೃಷ್ಟಿಯನ್ನು ಬಿಟ್ಟು ಮಿಶ್ರ ಸೃಷ್ಟಿಯ ಕಾರಣವನ್ನು ಕೇಳುವವನಾಗು. ನಾನು ನಿರ್ದಯನಲ್ಲ ದಯಾಳುವೇ, ಸರ್ವಜ್ಞನೇ. ಇದರಲ್ಲಿ ಸಂದೇಹವೇ ಇಲ್ಲ. ಹಾಗಿದ್ದರೂ ಅನಾದಿಯಾದ ಅಜ್ಞಾನದಿಂದ ಅಪಹರಿಸಲ್ಪಟ್ಟ ಜ್ಞಾನದಿಂದ ಕೂಡಿದ ಮನುಷ್ಯರುಗಳನ್ನು ನಾನು ಇಲ್ಲಿ ಸೃಷ್ಟಿಸುತ್ತೇನೆ. ಈ ಮನುಷ್ಯರುಗಳಿಗೆ ಅಜ್ಞಾನ ಉಂಟಾಗುವುದನ್ನೂ, ಮಾಡಬೇಕಾದ್ದನ್ನು ಬಿಡುವುದನ್ನೂ, ಬಿಡಬೇಕಾದ್ದನ್ನು

ಮಾಡುವುದನ್ನೂ ನೋಡಿ ಪರಮೇಷ್ಠಿಯಾದ ಚತುರ್ಮುಖ ಬ್ರಹ್ಮನ ಮೂಲಕ ಮಿಶ್ರವರ್ಗಸೃಷ್ಟಿಯನ್ನು ನಾನು ಮಾಡಿಸುತ್ತೇನೆ. ಹೀಗೆಯೇ ಚೇತನರ ಅಲ್ಪ ಸುಕೃತದಿಂದ ಶುದ್ಧ ವರ್ಗ ಸೃಷ್ಟಿಯನ್ನು ಮಾಡುತ್ತೇನೆ. ಮನು ಮೊದಲಾದವರ ಸೃಷ್ಟಿಯು ಶುದ್ಧ ವರ್ಗ ಸೃಷ್ಟಿಯೆಂದು ನನ್ನಿಂದ ಹೇಳಲ್ಪಟ್ಟಿದೆ. ಎಲ್ಲವೂ ಶುದ್ಧಸತ್ವಮಯರಾಗಿ ಸರ್ವಕಾಲದಲ್ಲೂ ನನ್ನಲ್ಲಿ ಭಕ್ತಿಯುಳ್ಳವರಾಗಿ, ನನ್ನ ಆರಾಧನೆಯಲ್ಲಿ ಆಸಕ್ತಿಯುಳ್ಳವರಾಗಿ ಜಿತೇಂದ್ರಿಯರಾಗಿಯೂ ಇರುತ್ತಾರೆ. ಹೇ। ಮಹಾಮುನೇ, ಅವರುಗಳು ಉತ್ಕೃಷ್ಟವಾದ ಭಕ್ತಿಯಿಂದಲೋ, ಅಥವಾ ಪ್ರಪತ್ತಿಯಿಂದಲೋ, ಪ್ರಾಪ್ಯವಾದ ವೈಕುಂಠವನ್ನು ಹೊಂದಿ ನಾಶವಿಲ್ಲದವರಾಗಿ, ಈ ಲೋಕಕ್ಕೆ ಎಂದೂ ಹಿಂತಿರುಗದವರಾಗಿ ಇರುತ್ತಾರೆ. ಈ ಪ್ರಕಾರವಾಗಿ ಸಮಸ್ತ ಮನುಷ್ಯರೂ, ಮುಮುಕ್ಷುಗಳಾಗಿ ಏರ್ಪಟ್ಟಾಗ ಅಧಿಕವಾಗಿ ಸೃಷ್ಟಿಯ ಕ್ಷಯ ಉಂಟಾಗುತ್ತದೆ. ನರಕ ಭೂಮಿಯಲ್ಲಿ, ಹುಲ್ಲು ಮೊಳೆತು ಬಿಡುತ್ತದೆ. (ಹೋಗುವವರಿಲ್ಲದೆ ಮಾರ್ಗದಲ್ಲಿ ಹುಲ್ಲು ಬೆಳೆದು ಬಿಡುತ್ತದೆ ಎಂದರ್ಥ) ಎಂಬುದಕ್ಕಾಗಿ ಮಿಶ್ರಸೃಷ್ಟಿಯು ನನ್ನಿಂದ ಮಾಡಲ್ಪಡುತ್ತದೆ.

## ಸೂತ್ರ - 49

1. **ವಿಭವೋಪಿ ................. ಹರೇ ರ್ಮುನೇ – (ವಿ. ಸಂ)**

ಹೇ। ಮುನಿಯೇ, ಹಾಗೆಯೇ ವಿಷ್ಣುವಿನ ಅಂತ್ಯವಿಲ್ಲದ ವಿಭವಾವತಾರಗಳೂ ಗೌಣ, ಮುಖ್ಯ ಎಂಬ ವಿಭಾಗಗಳು (ಆವೇಶಾವತಾರ, ಸಾಕ್ಷಾದವತಾರಗಳು) ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ.

2. **ಪ್ರಾದುರ್ಭಾವೋ ................ ಗೌಣ ಮುಖ್ಯ ವಿಭೇದತಃ – (ವಿ. ಸಂ.)**

ಆ ಭಗವಂತನ ಅವತಾರಗಳು ಗೌಣಮುಖ್ಯ ಭೇದಗಳಿಂದ ಎರಡು ಪ್ರಕಾರವಾಗಿ ಹೇಳಲ್ಪಟ್ಟಿವೆ.

## ಸೂತ್ರ - 50

1. **ಮದಿಚ್ಛಯಾ ಹಿ .................... ನ ಚ ಕರ್ಮಣಾ – (ವಿ. ಸಂ.)**

ನನ್ನಿಚ್ಛೆಯಿಂದಲೇ ಅಲ್ಲವೇ, ಆವೇಶ ರೂಪವಾದ ಗೌಣತ್ವವು ಬರುವುದು. ರಾಮಕೃಷ್ಣಾದಿ ಮನುಷ್ಯಾವತಾರವು ಇಚ್ಛೆಯಿಂದಲೇ ಆದಂತೆ ಹಂದಿಯಾಗಿರುವುದು, ಮತ್ಸ್ಯವಾಗಿರುವುದು. ನರಸಿಂಹನಾಗಿರುವುದು, ದಂಡಕಾರಣ್ಯದಲ್ಲಿ ಕುಳ್ಳಗಿನ ಮಾವಿನ ಮರವಾಗಿರುವುದು, ಇವೆಲ್ಲವೂ ನನ್ನಿಚ್ಛೆಯಿಂದಲೇ ಆಗಿದೆ. ಕುದುರೆಮುಖವುಳ್ಳವನಾಗಿರುವುದೂ, ನನ್ನ ಸಂಕಲ್ಪದಿಂದಲೇ ಉಂಟಾಗಿರುವುದು ಹೇ ಸೇನಾಪತಿಯೇ, ಹಾಗೆಯೇ ಗೌಣತ್ವವೂ ನನ್ನ ಇಚ್ಛೆಯಿಂದಲೇ, ವಿನಃ ಕರ್ಮದಿಂದ ಅಲ್ಲ.

2. **ಪ್ರಾದುರ್ಭಾವಸ್ತು .................. ಅನರ್ಚ್ಯಾನಿತರಾನ್ ವಿದುಃ – (ವಿ. ಸಂ.)**

ಯಾವ ಅವತಾರವು ವಿಶೇಷವಾಗಿ ನನ್ನ ಅಂಶವಾಗಿರುವುದರಿಂದ ಮುಖ್ಯಾವತಾರಗಳಾಗಿ ಅಜಹತ್‌ಸ್ವಭಾವ ವಿಭವಗಳಾಗಿ ದಿವ್ಯವಾಗಿಯೂ, ವಿಲಕ್ಷಣವಾಗಿಯೂ, ಅಪ್ರಾಕೃತ ದಿವ್ಯಮಂಗಳ ವಿಗ್ರಹ ಯುಕ್ತವಾಗಿಯೂ, ದೀಪದಿಂದ ಉಂಟಾದ ದೀಪಗಳಂತೆ ಪ್ರಕಾಶಿಸುವುದೋ, ಆ ಮುಖ್ಯ ಅವತಾರಗಳು ಜಗದ್ರಕ್ಷಣಕ್ಕಾಗಿ ಏರ್ಪಟ್ಟವುಗಳು. ಅವುಗಳು ಪ್ರಳಯದಿಂದ ಉದ್ಧರಿಸಲ್ಪಡುವುದಕ್ಕಾಗಿ ಆರಾಧಿಸಲ್ಪಡುವಂತಹುದು. ಮುಖ್ಯಾವತಾರಗಳು ಉಪಾಸನೆಗೆ ಅರ್ಹವಾದವುಗಳು. ಮುಖ್ಯವಾದ ಅಂಶಾವತಾರಗಳನ್ನು ಆರಾಧನೆಗೆ ಅರ್ಹವಲ್ಲವೆಂದು ತಿಳಿಯಲಾಗಿದೆ.

3. **ಅಜೋಽಪಿ ಸನ್.................... ಮಾಯಯಾ – (ಭಗವದ್ಗೀತೆ 4-6)**

ಹುಟ್ಟಿಲ್ಲದವನಾಗಿದ್ದರೂ, ನಾಶವಿಲ್ಲದವನಾಗಿದ್ದರೂ, ಸರ್ವೇಶ್ವರನಾಗಿದ್ದರೂ ನನ್ನಿಚ್ಛೆಯಿಂದ ಈ ಲೋಕದಲ್ಲಿ ನಾನು ಹುಟ್ಟುತ್ತೇನೆ.

## ಸೂತ್ರ - 52

1. **ಅನರ್ಚ್ಯಾನಪಿ ವಕ್ಷ್ಯಾಮಿ ..................... ಜೀವ ಮಿಶ್ರಾ್ಯಧಿಷ್ಠಿತಾಃ – (ವಿ. ಸಂ.)**

ಆರಾಧನೆಗೆ ಅರ್ಹವಲ್ಲದ ಅವತಾರಗಳನ್ನೂ ಕ್ರಮವಾಗಿ ಹೇಳುತ್ತೇನೆ. ಪೂಜ್ಯವಾಗಿ ಸೃಷ್ಟಿ ಕಾರ್ಯದಲ್ಲಿ ನಿಯೋಜಿಸಲ್ಪಟ್ಟ ಶಂಕರನೆಂಬ ಹೆಸರುಳ್ಳ ಮಹಾರುದ್ರನೂ; ಹಾಗೆಯೇ ಮೋಹನನೆಂದು ಹೆಸರುಳ್ಳ ಬುದ್ಧನೂ; ವೇದಗಳನ್ನು ವಿಭಜಿಸುವ ಕಾರ್ಯದಲ್ಲಿರುವ ಮಹರ್ಷಿ ವ್ಯಾಸನೂ; ಬಿಲ್ಲುಗಾರರಲ್ಲಿ ಶ್ರೇಷ್ಠನಾದ ಕಾರ್ತವೀರ್ಯಾರ್ಜುನನೂ; ಮಹಾಜ್ಞಾನಿಯಾದ ಜಮದಗ್ನಿ ಪುತ್ರನಾದ ಪರಶುರಾಮನೂ; ವಸುಗಳಲ್ಲಿ ಪಾವಕನೂ; ಹಾಗೆಯೇ ಕುಬೇರನೂ, ಇವರೆಲ್ಲರೂ ಆವೇಶಾವತಾರ ಅಧಿಷ್ಠಿತರು. ಈ ಎಲ್ಲರೂ ಜೀವಾತ್ಮರುಗಳು.ಈ ವಿಷ್ಣು ಸಂಬಂಧವು ಉಪಾಸನೆಗೆ ಯೋಗ್ಯವಲ್ಲ ಎಂಬುದು ಪ್ರಸಿದ್ಧವು. ಹೇ ತೇಜಸ್ವಿಯೇ। ಈ ಎಲ್ಲರೂ ಒಂದು ಕಾರ್ಯ ಸಾಧನೆಗಾಗಿ ಆವೇಶಿಸಲ್ಪಟ್ಟವರು. ಅಹಂಕಾರದಿಂದ ಕೂಡಿ ಜೀವನೊಡನೆ ಕೂಡಿದ ಇವರುಗಳು ಅಧಿಷ್ಠಿತರಾದವರುಗಳು. ಈ ಎಲ್ಲರೂ ವಿರುದ್ಧರಾಗಿರುವುದರಿಂದ ಪೂಜಿಸಲ್ಪಡುವವರಲ್ಲ.

2. **ಅಕಾರ್ಯಚಿಂತಾ .................... ಪುರಸ್ತಾತ್ – (ರಘುವಂಶ. 6 ಸರ್ಗ)**

ಜನರಿಗೆ ಕೆಟ್ಟ ಕಾರ್ಯವನ್ನು ಮಾಡಬೇಕೆಂಬ ಬುದ್ಧಿ ಹುಟ್ಟುವ ಅದೇ ಕಾಲದಲ್ಲೇ ಅವರ ಮುಂದೆ ಸಾವಿರ ಕೈಗಳ ಧನುರ್ಧಾರಿಯಾಗಿ ಕಾಣಿಸಿಕೊಳ್ಳುತ್ತಿದ್ದ ಕಾರ್ತವೀರ್ಯಾರ್ಜುನ.

3. **ಬ್ರಹ್ಮರುದ್ರಾರ್ಜುನ .............. ದೇವತಾಃ – (ಪಾಂಚರಾತ್ರಂ)**

ಬ್ರಹ್ಮ, ರುದ್ರ, ಕಾರ್ತವೀರ್ಯಾರ್ಜುನ, ವ್ಯಾಸ. ಸೂರ್ಯ, ಪರಶುರಾಮ, ಕಕುತ್ಸ್ಥ, ಆತ್ರೇಯ, (ದತ್ತಾತ್ರೇಯ) ಕಪಿಲ, ಬುದ್ಧ ಇವರೇ ಮೊದಲಾದ ಅನೇಕ ಯಾವ ಹೆಸರುಗಳುಂಟೋ, ಅವುಗಳು ವಿಷ್ಣುವಿನ ತತ್ಕಾಲದಲ್ಲುಂಟಾದ ವಿಗ್ರಹಗಳ ಶಕ್ತಿಯಿಂದ ಆವೇಶಿಸಲ್ಪಟ್ಟ ಅವತಾರಗಳು. ಮುಮುಕ್ಷುಗಳಿಗೆ ಇಂದ್ರ, ಅಗ್ನಿ, ಮೊದಲಾದ ದೇವತೆಗಳು ಹೇಗೆ ಉಪಾಸ್ಯರಲ್ಲವೋ ಹಾಗೆಯೇ ಇವರುಗಳೂ ಉಪಾಸ್ಯರಲ್ಲ.

4. **ಮಾವುರುವಿಲ್ ಕಳ್ಳವೇಡಮ್ – (ಆಚಾರ್ಯ ಹೃದಯ. 2 ನೇ ಪ್ರಕರಣ)**

## ಸೂತ್ರ - 53

1. **ನಿತ್ಯೋದಿತಾತ್..................... ಹರಿಃ – (ವಿ. ಸಂ.)**

'ನಿತ್ಯೋದಿತ'ರೆಂಬ ಹೆಸರುಳ್ಳ ಪರವಾಸುದೇವನಿಂದ 'ಶಾಂತೋದಿತ' ಎಂಬ ವ್ಯೂಹವಾಸುದೇವನು ಉಂಟಾಗುತ್ತಾನೆ.

2. **ಚಾತುರಾತ್ಮ್ಯ ................. ಪಾರಮೇಶ್ವರಂ – (ವಿ. ಸಂ.)**

ನಂತರ ಹೀಗಿದ್ದರೂ ಕೂಡ ಪರಮ ಪುರುಷನ ಕೃಪೆಯಿಂದ ನಾಲ್ಕು ವಿಧವಾಗಿ ಆಯಿತು. ಉಪಾಸಕರ

ಅನುಗ್ರಹಾರ್ಥವಾಗಿ ಆಗಿರುವುದನ್ನು 'ಪರ' ಎಂದು ಹೇಳಲ್ಪಡುವುದು. ಹಾಗೆಯೇ, ನನ್ನ ಚಾತುರಾತ್ಮ್ಯತ್ರಯವು ಅಂದರೆ ಕೇಶವಾದಿ ಮೂರ್ತ್ಯಂತರವು ಶಾಂತೋದಿತವೆಂದು ಹೆಸರುಳ್ಳ ವ್ಯೂಹವಾಸುದೇವನಿಂದ ಪ್ರವರ್ತಿತವಾದದ್ದು. ಸುಷುಪ್ತಿ (ನಿದ್ರೆ) ಸ್ವಪ್ನ, ಜಾಗ್ರದವಸ್ಥೆ ಎಂಬುದೂ ಹಾಗೆಯೇ. ತುರೀಯ ಎಂಬ ನಾಲ್ಕನೆಯ ಅವಸ್ಥೆಯೂ ಚಾತುರಾತ್ಮ್ಯವಾಗಿರುತ್ತದೆ. ಹಾಗೆಯೇ 'ಪಾರಮೇಶ್ವರ' ವು ಐದನೆಯದಾಗಿರುತ್ತದೆ.

3. **ಆದ್ಯೋ ವ್ಯೂಹೋ .................. ಪದಭೇದ ಪ್ರಯೋಜನಮ್ – (ವಿ. ಸಂ.)**

ಮೊದಲನೆಯದಾದ ವ್ಯೂಹವು ನನ್ನಿಂದ ಹೇಳಲ್ಪಟ್ಟಿತು. ಉಳಿದ ಮೂರನ್ನು ಕೇಳುವವನಾಗು. ಅದು ಸ್ವಪ್ನಾದಿ ಪದದಲ್ಲಿರುವ ಉಪಾಸಕರ ಅನುಗ್ರಹಾರ್ಥವಾಗಿದೆ. ನನ್ನ ಸ್ವಪ್ನಾವಸ್ಥಾ ಭೇದವು ಧ್ಯಾನ ಮಾಡುವರ ನಿದ್ರಾಶಾಂತಿಗಾಗಿಯೂ, ಆಯಾಯಾ ಸ್ಥಾನದಲ್ಲಿರುವ ಜೀವಗಳಿಗೆ ಅವು ಅವುಗಳ ನಿವೃತ್ತಿಗಾಗಿಯೂ, (ಸ್ವಪ್ನಾದಿ ಅವಸ್ಥಾ ನಿವೃತ್ತಿಗಾಗಿ) ಆಗಿದೆ. ಆ ಚಾತುರಾತ್ಮ್ಯಗಳು ಮೂರು ಸ್ವಪ್ನಾದಿ ಅವಸ್ಥೆಗಳುಳ್ಳ ಜೀವನಿಗೆ ಅಧಿಷ್ಠಾತಾವಾಗಿರುತ್ತದೆ. ಹೇ ಸೇನೇಶನೇ। ಕರ್ಮವೇ ಸ್ವಭಾವಾದ ಚೇತನರಿಗೆ ನನ್ನ ಇಚ್ಛೆಯಿಂದ ಆ ಪದದಲ್ಲಿದ್ದುಕೊಂಡು ನಾನು ಉಪಾಸನೆಗೆ ವಿಷಯವಾಗುವುದೇ ಪ್ರಯೋಜನವಾಗಿದೆ.

4. **ಏತನ್ನಂತರ್ಗತಾಸ್ಸರ್ವೇ .................... ತಾನ್ ಮಹಾಮುನೇ – (ವಿ. ಸಂ.)**

ಕೇಶವಾದಿ ಮೂರ್ತಿಗಳಲ್ಲಿ ಕೇಶವಾದಿಯಾದ ಮೂರೂ ವ್ಯೂಹವಾಸುದೇವನಿಂದ, ಉಂಟಾಗುತ್ತದೆ. ಆಶ್ಚರ್ಯಕರವಾದ ಗೋವಿಂದ ಮೊದಲಾದ ಮೂರೂ ಸಂಕರ್ಷಣನಿಂದ ಉಂಟಾಗುತ್ತದೆ. ತ್ರಿವಿಕ್ರಮ ಮೊದಲಾದ ಮೂರು ಪ್ರದ್ಯುಮ್ನನಿಂದ, ಉಂಟಾಗುತ್ತದೆ. ಮಹಾಮುನೇ। -ಹೃಷಿಕೇಶಾದಿ ಮೂರೂ ಅನಿರುದ್ಧನಿಂದ ಉಂಟಾಗುತ್ತದೆ.

5. **ಪದ್ಮನಾಭಾದಿಕಾಸ್ಸರ್ವೇ ............... ಇವೇಶ್ವರಃ – (ವಿ. ಸಂ.)**

ಹೇ ಸೇನೇಶನೇ (ವಿಷ್ವಕ್ಸೇನನೇ) ಪ್ರಧಾನವಾಗಿ 36 ಆಗಿರುವ ಪದ್ಮನಾಭನೇ ಮೊದಲಾದವರೂ, ಅದೇ ಪ್ರಕಾರವಾಗಿ ವಿಭವಾವತಾರ ಸಂಬಂಧಿಗಳು. 36 ಭೇಧಗಳಿಂದ ಬೇರೆ ಬೇರಾಗಿರುವ ಪದ್ಮನಾಭ ಮೊದಲಾದ ಸ್ವತಂತ್ರರಾದ ದೇವತೆಗಳು, ದೀಪದಿಂದ ಉತ್ಪನ್ನವಾದ ದೀಪಗಳಂತೆ ಅನಿರುದ್ಧನಿಂದ ಏರ್ಪಟ್ಟವರಾಗಿದ್ದಾರೆ.

6. **ವಿಭವಃ ............... ಪದ್ಮನಾಭಾದಯೋ ಮತಾಃ – (ವಿ. ಸಂ.)**

ಪದ್ಮನಾಭನೇ ಮೊದಲಾದ ವಿಭವಾವತಾರಗಳು 39. ಪದ್ಮನಾಭ, ಧ್ರುವ, ಅನಂತ ಶಕ್ತಿಯೇ ಸ್ವರೂಪವಾಗುಳ್ಳ ಮಧುಸೂಧನ, ವಿದ್ಯಾಧಿ ದೇವನಾದ ಕಪಿಲ, ವಿಶ್ವರೂಪ, ವಿಹಂಗಮ, ಕ್ರೋಧಾತ್ಮನ್, ಬಡಬಾವಕ್ತ್ರ, ಧರ್ಮ, ವಾಗೀಶ್ವರ, ಸಮುದ್ರಶಾಯಿ, ಭಗವಾನ್ ಕಮಲೇಶ್ವರಃ, ವರಾಹ, ನಾರಸಿಂಹ, ಅಮೃತಹರಣ, ಶ್ರೀಪತಿ, ಮನೋಜ್ಞವಾದ ರೂಪವುಳ್ಳ ಅಮೃತಧಾರಕ, ರಾಹುಜಿತ್, ಕಾಲನೇಮಿಘ್ನ, ಪಾರಿಜಾತಹರ, ಲೋಕನಾಥ, ಶಾಂತಾತ್ಮಾ, ದತ್ತಾತ್ರೇಯ, ಮಹಾಪ್ರಭುವಾದ ನ್ಯಗ್ರೋಧಶಾಯಿ, ಏಕಶೃಂಗತನುಃ, ದೇವನಾದ ವಾಮನ, ಸರ್ವವ್ಯಾಪೀ ತ್ರಿವಿಕ್ರಮ, ನರ, ನಾರಾಯಣ, ಹರಿ, ಕೃಷ್ಣ, ಜ್ವಲತ್, ಪರಶುಧೃತ್ ರಾಮ, ಚತುರ್ಗತಿಯುಕ್ತನಾದ ಶ್ರೀರಾಮ, ವೇದ ಪ್ರತಿಪಾದ್ಯ ಭಗವಾನಾದ ಕಲ್ಕಿ, ಪಾತಾಳ ಶಯಿತ ಪ್ರಭುಃ, ಎಂಬುದಾಗಿ ಈ ಪದ್ಮನಾಭನೇ ಮೊದಲಾದ 39 ಮಂದಿ ಹೇಳಲ್ಪಟ್ಟಿದ್ದಾರೆ.

7. **ಪೂರ್ವೋತ್ವನ್ನಾತ್ ................. ಕೃಷ್ಣಃ ತಥೈವಚ – (ವಿ. ಸಂ.)**

ಮೊದಲು ಏರ್ಪಟ್ಟ ವಿಭವದಿಂದ ಯಾವ ಮಹೇಶ್ವರರು ಉಂಟಾದರೋ, ಆ ಮುಖ್ಯರಾದ ಪ್ರಾದುರ್ಭಾವಗಳನ್ನು ಅಂದರೆ ಅವತಾರಗಳನ್ನು ತಿಳಿಯುವವನಾಗು, ಉಪೇಂದ್ರನಾದ ವಾಮನನಿಂದ ತ್ರಿವಿಕ್ರಮನಾದ ಹರಿಯೂ, ದೇವೇಶನಾಗಿ ದರ್ವಿಹಸ್ತನಾಗಿ (ಸೌಟನ್ನು ಕೈಯಲ್ಲಿ ಹಿಡಿದ) ಅಮೃತವನ್ನು ನೀಡುವವನಾಗಿಯೂ ಇರುವ ದಧಿ ಭಕ್ತನೂ, ಕೃಷ್ಣನಿಂದ ಮತ್ಸ್ಯನೂ, ಇವರುಗಳು ಹೇಗೆ ಮುಖ್ಯರಾದವರೋ, ಮತ್ಸ್ಯಾವತಾರಕ್ಕಿಂತ ಹಯಗ್ರೀವ ಅವತಾರವು ಹೇಗೆ ಮುಖ್ಯವಾದುದೋ, ಆ ಪ್ರಕಾರವಾಗಿ ನರನೂ, ನಾರಾಯಣನೂ, ವಿಷ್ಣುವೂ, ಕೃಷ್ಣನೂ ಮುಖ್ಯರಾದವರು.

8. **ಭುಜಾಯುಧಾನಾಂ ................ ಪುರುಷಾಕೃತಿಃ – (ವಿ.ಸಂ.)**

ಭುಜಗಳೂ, ಆಯುಧಗಳ ನಿಯಮವು ಅಲ್ಲಲ್ಲಿ ನನ್ನ ಇಚ್ಛೆಯಿಂದ ಏರ್ಪಡುತ್ತದೆ. 'ಜಾಗ್ರತ' ವೆನ್ನುವ ಚಾತುರಾತ್ಮ್ಯದಲ್ಲಿ ನಾಲ್ಕು ಭುಜಗಳೂ ಇರುತ್ತವೆ.

ಹೇ ಗಣಾಧ್ಯಕ್ಷನೇ ಸ್ವಪ್ನಾದಿ ಪದಸ್ಥ ಮೊದಲಾದ ಶಾಂತೋದಿತರೆಂಬ ವ್ಯೂಹ ವಾಸುದೇವನು ಎರಡು ಭುಜಗಳಿಂದ ಕೂಡಿದವನು. ಆದಿ ದೇವನಾಗಿಯೂ, ಜಗನ್ನಾಥನಾಗಿಯೂ, ವಾಸುದೇವನಾಗಿಯೂ ಇರುವ ಜಗತ್ಪತಿ ನಾಲ್ಕು ಭುಜಗಳಿಂದ ಕೂಡಿದವನಾಗಿ ಶ್ಯಾಮಲಾಂಗನಾಗಿ ಪರಮಪದದಲ್ಲಿ ಇರುವವನು. ಷಡ್ಗುಣಗಳಿಂದ ಕೂಡಿದವನಾಗಿ, ನಿತ್ಯೋದಿತನೆಂಬ ಹೆಸರುಳ್ಳ ಪರವಾಸುದೇವನು ಶಾಂತವಾದ ರೂಪವುಳ್ಳವನಾಗಿ ಪರಮ ಪದದಲ್ಲಿದ್ದಾನೆ. ಶಾಂತೋದಿತನೆಂಬ ಹೆಸರುಳ್ಳ ವ್ಯೂಹವಾಸುದೇವನು ಶಾಂತವಾದ ರೂಪವುಳ್ಳವನಾಗಿ ಎರಡು ಭುಜಗಳಿಂದ ಕೂಡಿದ ಪುರುಷಾಕೃತಿಯಾಗಿದ್ದಾನೆ.

9. **ಕೇಶವಾದ್ಯಾ ................. ಬಾಲಾರ್ಕಶತ ಸನ್ನಿಭಮ್ – (ವಿ. ಸಂ.)**

ಹೇ ಗಣೇಶನೇ, ಮೂರ್ತ್ಯಂತರವೆಂದು ಹೇಳಲ್ಪಡುವ ಕೇಶವ ಮೊದಲಾದವರುಗಳು ಉಪಾಸಕರುಗಳಿಗೆ ಭೋಗ ಮೋಕ್ಷಗಳನ್ನು ನೀಡುವವರು. ಇವರೆಲ್ಲರೂ ಚತುರ್ಭುಜಯುಕ್ತರಾಗಿ, ಪದ್ಮ, ಶಂಖ ಮೊದಲಾದವುಗಳನ್ನು ಧರಿಸಿದವರಾಗಿದ್ದಾರೆ. ಲಾಂಛನ ಆಭರಣ ಮೊದಲಾದವುಗಳು ಆಯಾಯಾ ಶಾಸ್ತ್ರಗಳಿಂದಲೇ ತಿಳಿಯಲ್ಪಡಬೇಕು. ನನ್ನನ್ನೂ ನಾಲ್ಕು ಚಕ್ರಗಳನ್ನು ಧರಿಸಿದವನಾಗಿ ಸ್ವರ್ಣಕಾಂತಿಯುಳ್ಳವನಾಗಿಯೂ (ಕೇಶವನೆಂದೂ) ನಾಲ್ಕು ಶಂಖಗಳನ್ನುಳ್ಳವನಾಗಿಯೂ, ದೇವನಾಗಿಯೂ, ಪ್ರಕಾಶಿಸುವ, ನೀಲ ಮೇಘಶ್ಯಾಮನಾಗಿಯೂ (ನಾರಾಯಣನೆಂದೂ) ಇಂದ್ರ ನೀಲ ರತ್ನದಂತೆ ನೀಲಕಾಂತಿಯುಕ್ತವಾಗಿ, ನಾಲ್ಕು ಕೈಗಳಲ್ಲಿಯೂ ಗದೆಯುಳ್ಳವನಾಗಿಯೂ, (ಮಾಧವನೆಂದೂ) ನಾಲ್ಕು ಕೈಗಳಲ್ಲಿ ಧನುಸ್ಸುಳ್ಳವನಾಗಿ ಚಂದ್ರಕಾಂತಿಯಂತಹ ಪ್ರಕಾಶವುಳ್ಳವನಾಗಿಯೂ (ಗೋವಿಂದನೆಂದೂ) ನಾಲ್ಕು ನೇಗಿಲನ್ನು ನಾಲ್ಕು ಕೈಗಳಲ್ಲಿ ಹಿಡಿದಂತಹವನಾಗಿಯೂ, ದೇವನಾಗಿಯೂ, ಪದ್ಮ ಕಿಂಜಲ್ಕದಂತಿರುವವನಾಗಿಯೂ (ವಿಷ್ಣುವೆಂದೂ) ನಾಲ್ಕು ಕೈಗಳಲ್ಲಿ ಒನಕೆಯನ್ನು ಹಿಡಿದವನಾಗಿ, ತಾವರೆಯ ಕಾಂತಿಯಿಂದ ಕಂಗೊಳಿಸುವವನಾಗಿಯೂ, (ಮಧುಸೂದನನೆಂದೂ) ಖಡ್ಗ ಪಾಣಿಯಾಗಿ ಅಗ್ನಿ ಪ್ರಕಾಶದಿಂದ ಬೆಳಗುವನಾಗಿಯೂ (ತ್ರಿವಿಕ್ರಮನೆಂದೂ) ನಾಲ್ಕು ಕೈಗಳಲ್ಲಿ ವಜ್ರಾಯುಧವನ್ನು ಧರಿಸುವ ದೇದೀಪ್ಯವಾಗಿ ಹೊಳೆಯುವ ಬಾಲ ಸೂರ್ಯನಂತೆ ಕಂಗೊಳಿಸುವನಾಗಿಯೂ, (ವಾಮನನೆಂದೂ) ಪಟ್ಟಸವೆಂಬ ಆಯುಧವನ್ನು ಧರಿಸಿ ಬಿಳಿ ತಾವರೆಯಂತಹ ಕಾಂತಿಯುಳ್ಳವನಾಗಿ (ಶ್ರೀಧರನೆಂದೂ) ಚತುರ್ಭುಜಯುಕ್ತನಾಗಿ ಮುದ್ಗರವೆಂಬ ಆಯುಧವುಳ್ಳವನಾಗಿ ಪ್ರಕಾಶಿಸುವವನಾಗಿ (ಹೃಷಿಕೇಶನೆಂದೂ)

ಮಿಂಚಿನಂತೆ ಕಾಂತಿಯುಕ್ತನಾಗಿ ಪಂಚಾಯುಧಧಾರಿಯಾಗಿ ಸೂರ್ಯನಂತೆ ಪ್ರಕಾಶಿಸುವವನಾಗಿ, (ಪದ್ಮನಾಭನೆಂದು) ಪಾಶವನ್ನು ನಾಲ್ಕು ಕೈಗಳಲ್ಲಿ ಹಿಡಿದವನಾಗಿ, ಅನೇಕ ಬಾಲ ಸೂರ್ಯರಂತೆ ಪ್ರಕಾಶಿಸುವವನಾಗಿ (ದಾಮೋದರನೆಂದು) ಸ್ಮರಿಸು ನನ್ನನ್ನು ಸ್ಮರಿಸು.

## ಸೂತ್ರ - 54

1. **ಪಲಪಿರಪ್ಪಾಯ್ ............ ಅನೇಕ ಜನ್ಮವುಳ್ಳವನಾಗಿ – (ತಿರುವಾಯ್ಮೊಳಿ 3-2-3)**
2. **ಮನಿಶರುಂ ಮತ್ತುಂ ಮುತ್ತುಮಾಯ್ – (ತಿರುವಾಯ್ಮೊಳಿ 3-5-6)**
3. **ಸಂಭವಾಮಿ ಆತ್ಮಮಾಯಯಾ – (ಭಗವದ್ಗೀತೆ 4-6)**

   ನನ್ನ ಸಂಕಲ್ಪದಂತೆ ಹುಟ್ಟುತ್ತೇನೆ.
4. **ಇಯಂ ವೈ .............. ಸ್ತಗಯಸಿ – (ವರದರಾಜಸ್ತವ)**

   ಹೇ ಹಸ್ತಿಗಿರೀಶ! ಈ ಸ್ಥಿತಿಯು ವ್ಯೂಹವು. ಅದಕ್ಕೆ ಮೇಲೆ ಇಚ್ಛಾನುಸಾರವಾಗಿ ನಿನ್ನ ವಿಭೂತಿಯಾದ ದೇವ, ಮನುಷ್ಯ, ತಿರ್ಯಕ್ಕುಗಳ ನಡುವೆ ಅವತರಿಸಿ ವಿಭವಾವತಾರವೆಂದು ಪ್ರಸಿದ್ಧನಾಗಿ ಶ್ರೇಷ್ಠ ಗುಣ ಸಮೂಹಗಳಿಂದ ಪೂರ್ಣನಾಗಿದ್ದರೂ ದೇವ ತಿರ್ಯಕ್ ಮನುಷ್ಯ ಸಜಾತೀಯನಾಗಿರುವ ಕಾರಣದಿಂದ ಆ ಗುಣ ಸಮೂಹವನ್ನು ಮರೆಸಿ ಕೊಂಡಿರುವೆ.
5. **ಏವಂ ಸ್ಥಿತೇ ................ ಸಮವಾತರಿಷ್ಯಃ – (ಅತಿಮಾಮಷಸ್ತವ -8)**

   ಈ ಪ್ರಕಾರ ಇಂದ್ರಿಯಗೋಚರನಲ್ಲದಿರುವಾಗ ನೀನು ಸ್ವೇಚ್ಛೆಯಾಗಿ ಸಂಚರಿಸುವ ಇಚ್ಛೆಯಿಂದ ದೇವ, ಮನುಷ್ಯ ಮೊದಲಾದ ಯೋನಿಗಳಲ್ಲಿ ಅವತರಿಸದೇ ಇದ್ದರೆ ನಿನ್ನನ್ನು ಆಶ್ರಯಿಸುವ ಉಪಾಯವು ಇಲ್ಲದೇ ಹೋಗುತ್ತಿತ್ತು.
6. **ಪರಿತ್ರಾಣಾಯ ............. ಯುಗೇ ಯುಗೇ – (ಭಗವದ್ಗೀತೆ 4-8)**

   ಸಾಧುಗಳ ರಕ್ಷಣಾರ್ಥವಾಗಿಯೂ, ದುಷ್ಟರ ನಾಶಕ್ಕಾಗಿಯೂ, ಧರ್ಮವನ್ನು ಸ್ಥಾಪನೆ ಮಾಡುವುದಕ್ಕಾಗಿಯೂ, ಯುಗ ಯುಗದಲ್ಲೂ, ಅಂದರೆ (ಕಾಲ ನಿಯಮನವನ್ನು ಕೂಡ ಗಮನಿಸದೆ) ಅವತರಿಸುತ್ತೇನೆ.
7. **ಸಾಧವಃ ............ ನಾಸ್ತಿ ಇತ್ಯರ್ಥಃ – (ಗೀತಾಭಾಷ್ಯಂ-4-8)**

   ಸಾಧುಗಳು ಹೀಗೆ ಮೇಲೆ ಹೇಳಲ್ಪಟ್ಟ ಲಕ್ಷಣವುಳ್ಳವರಾಗಿಯೂ, ವೈಷ್ಣವಾಗ್ರೇಸರಾರಾಗಿಯೂ, ನನ್ನ ಆಶ್ರಯಣದಲ್ಲಿ ಪ್ರವೃತ್ತರಾಗಿ, ನನ್ನ ನಾಮ, ವ್ಯಾಪಾರ, ಸ್ವರೂಪಾದಿಗಳು ವಾಕ್ಕಿಗೂ, ಮನಸ್ಸಿಗೂ ನಿಲುಕಲಾರದವುಗಳಾದ್ದರಿಂದ ನನ್ನ ದರ್ಶನದ ಹೊರತಾಗಿ ಆತ್ಮಧಾರಣ ಪೋಷಣಾದಿಗಳಿಲ್ಲದವರಾಗಿ ಕ್ಷಣ ಕಾಲವೂ ಅವರಿಗೆ ಯುಗಗಳಾಗಿ, ಶಿಥಿಲ ಗಾತ್ರರಾಗಿ ನನ್ನ ಸ್ವರೂಪ, ಚೇಷ್ಟಿತ, ಕಟಾಕ್ಷಾದಿಗಳನ್ನು ನೀಡುವುದರಿಂದಲೇ ಅವರಿಗೆ ಧಾರಣೆ ಏರ್ಪಡುತ್ತದೆ. ಇಂತಹವರಿಂದ ನೇರ ವಿಪರೀತರಾಗಿರುವ (ದುಷ್ಟರ) ನಾಶಕ್ಕಾಗಿಯೂ, ಕ್ಷೀಣಿಸಿರುವ ನನ್ನ ಆರಾಧನ ರೂಪವಾದ ವೈದಿಕ ಧರ್ಮವನ್ನು, ಆರಾಧ್ಯವಾದ ನನ್ನ ಸ್ವರೂಪವನ್ನು ತೋರುವುದರ ಮೂಲಕ ಸ್ಥಾಪಿಸುವುದಕ್ಕಾಗಿಯೂ, ದೇವ ಮನುಷ್ಯಾದಿ ರೂಪಗಳಿಂದ ಯುಗಯುಗದಲ್ಲೂ (ಇಂತಹುದೇ ಕೃತ, ತ್ರೇತ ಎಂಬ ಕಾಲ ಬರಬೇಕೆಂಬ ನಿಯಮವಿಲ್ಲದೆ) ಅವತರಿಸುತ್ತೇನೆ.

8. **ಯೇ ಭಕ್ತಾಃ .............. ಪ್ರಾರ್ಥನಂ – (ಸುಂದರ ಬಾಹುಸ್ತವ -86)**

ಹೇ ವನಾದ್ರೀಶ್ವರ । ಆತ್ಮ ಸಂಜೀವನವನ್ನು ಹೊಂದದ ನಿನ್ನ ಸಂಶ್ಲೇಷದಲ್ಲಿ ಆಸಕ್ತರಾದ ಯಾವ ಭಕ್ತರು ಇದ್ದಾರೆಯೋ, ಆವರೊಡನೆ ಕೂಡುವಿಕೆಯಿಂದ ಅವರ ವಿರೋಧಿಗಳನ್ನು ನೀಗುವುದಕ್ಕಾಗಿ, ಅಂಡ ಮಧ್ಯದಲ್ಲಿ ದೇವ, ಮನುಷ್ಯ ಮೊದಲಾದವರ ಆಕಾರದಂತೆಯೇ ದಿವ್ಯ ಮಂಗಳವಿಗ್ರಹವನ್ನು ಪರಿಗ್ರಹಿಸಿ ಅವತರಿಸಿದೆ ಎಂಬುದು ಏನುಂಟೋ ಆದರಿಂದಲೇ ದೇವ, ಮನುಷ್ಯರುಗಳಿಂದ ಮಾಡಲ್ಪಟ್ಟ ಪ್ರಾರ್ಥನೆಯು ಫಲಿಸಿತು.

9. **ಪತಿವ್ರತಾ ..................... ಭವಿಷ್ಯತಿ – (ಶ್ರೀರಾಮಾಯಣ ಉತ್ತರಕಾಂಡ 51)**

ಪತಿವ್ರತೆಯಾಗಿಯೂ, ಧರ್ಮಪರಾಯಣೆಯಾಗಿಯೂ, ನನಗೆ ಪ್ರಿಯಳಾದವಳು ಯಾರಿಂದ ಕೊಲ್ಲಲ್ಪಟ್ಟಳೋ ಅವನು ಚಿರಕಾಲ ಪತ್ನೀ ವಿರಹವನ್ನು ಪಡೆದವನಾಗಲಿ.

## ಸೂತ್ರ - 57

1. **ತಪಸಾರಾಧಿತೋ ದೇವೋ ............. ಗೃಹ್ಯ ಮುಕ್ತವಾನ್ – (ಶ್ರೀ ರಾ. ಉತ್ತರಕಾಂಡ -15)**

ತಪಸ್ಸಿನಿಂದ ಆರಾಧಿಸಲ್ಪಡುವ ಭಕ್ತವತ್ಸಲನಾದ ದೇವನು ಒಂದು ಮಾತನ್ನು ಹೇಳಿದನು. ಆ ಶಾಪದ ಮಾತು ಲೋಕದ ಪ್ರಿಯಾರ್ಥವಾಗಿ ಗ್ರಹಿಸಲ್ಪಡಬೇಕು.

2. **ಸರ್ವಾವರ್ತೇಷು .................. ಲೀಲಯಾ – (ಲೈಂಗ ಪುರಾಣಂ)**

ವಿಷ್ಣುವಿನ ಸರ್ವ ಅವತಾರಗಳಲ್ಲೂ ಜನನವು ಸ್ವೇಚ್ಛೆಯಿಂದಲೇ ಆಗುತ್ತದೆ. ಬ್ರಾಹ್ಮಣ ಶಾಪವೆಂಬ ಒಂದು ವ್ಯಾಜವಾಗಿದೆ. ಲೀಲೆಯಿಂದಲೇ ಅವತರಿಸಿದರೂ ವಿಷ್ಣುವೂ ಬೇಡನ ಅಸ್ತ್ರವೆಂಬ ವ್ಯಾಜದಿಂದ ತನ್ನಿಚ್ಛೆಯಿಂದಲೇ ಈ ವಿಶ್ವದಿಂದ ನಿರ್ಗಮಿಸುತ್ತಾನೆ.

## ಸೂತ್ರ - 58

1. **ಅಂತಃ ಪ್ರವಿಷ್ಟಾ ಶಾಸ್ತಾ ಜನಾನಾಂ – (ಸುಬಾಲೋಪನಿಷತ್)**

ಜನರ ಒಳಗೆ ಪ್ರವೇಶಿಸಿದವನಾಗಿ ಶಾಸನ ಮಾಡುವವನಾಗಿರುತ್ತಾನೆ.

2. **ಶಾಸ್ತಾ ವಿಷ್ಣುರ ಶೇಷಸ್ಯ ................ ಹೃದಿಸ್ಥಿತ : – (ಶ್ರೀ ವಿ.ಪು. 4-1-17)**

ಹೃದಯದಲ್ಲಿ ಇರುವ ವಿಷ್ಣು ವು ಸಮಸ್ತ ಜಗತ್ತಿಗೂ ಶಾಸಕನಾಗಿದ್ದಾನೆ.

## ಸೂತ್ರ - 59

1. **ಅಂತರ್ಯಾಮಿ ............. ಸ್ಥಿತಃ – (ಶ್ರೀ ವಿ. ಪು. 4-1-17)**

ಅಂತರ್ಯಾಮಿ ಸ್ವರೂಪವು ಸಮಸ್ತ ಲೋಕಕ್ಕೂ ಬಂಧುವಿನಂತಿರುವುದು.

2. **ಸ್ವರ್ಗ ನರಕ ................. ಹಿ ಕೇಶವಃ – (ವಿಷ್ವಕ್ಸೇನ ಸಂಹಿತೆ)**

ಅಂತರಾತ್ಮನಾದ ಕೇಶವನು ಸ್ವರ್ಗ ನರಕ ಪ್ರವೇಶಗಳಲ್ಲೂ ಬಂಧುವಾಗಿರುತ್ತಾನೆ.

3. ಅಂಗುಷ್ಠ ಮಾತ್ರಃ ............ ಧೂಮಕಃ – (ಕಠೋಪನಿಷತ್ 2-4-13)
ಹೆಬ್ಬೆರಳಿನ ಅಳತೆಯಷ್ಟಿರುವ ಪುರುಷನು ಹೊಗೆಯಿಲ್ಲದ ಜ್ಯೋತಿಯಂತೆ ಪ್ರಕಾಶಿಸುತ್ತಾನೆ.

4. ಪದ್ಮ ಕೋಶ ................ ಅಧೋಮುಖಮ್ – (ತೈ. ಉಪನಿಷತ್ ನಾರಾಯಣಾನುವಾಕ)
ತಾವರೆಯ ಮೊಗ್ಗಿನಂತಿರುವುದೂ, ಕೆಳಮುಖವಾಗಿರುವುದೂ ಆದ ಹೃದಯದಲ್ಲಿ.

## ಸೂತ್ರ - 60

1. ತಮರು ಕನ್ದದೆವ್ವುರುವಂ ಅವ್ವುರುವಂ ತಾನೇ – (ಮುದಲ್ ತಿರುವಂದಾದಿ)
2. ಅರ್ಚಕ ಪರಾಧೀನಃ ಅಖಿಲಾತ್ಮಸ್ಥಿತಿಃ – (ಶ್ರೀ ರಂಗರಾಜಸ್ತವ)
ಅರ್ಚಕರಿಗೆ ಅಧೀನವಾಗಿರುವ ಎಲ್ಲಾ ಸ್ಥಿತಿಗಳನ್ನೂ ಉಳ್ಳವನಾಗಿ.

## ಸೂತ್ರ - 61

1. ಎನ್ನ ಮುದಿನ್ನೈ ............... ಕ್ಕಾಣಾವೇ – (ಅಮಲನಾದಿಪಿರಾನ್-10)
2. ಸುರೂಪಾಂ ............ ಬ್ರಹ್ಮ ರೂಪಿಣೀಮ್.
ಚಿನ್ನ, ಬೆಳ್ಳಿ ಮೊದಲಾದವುಗಳಿಂದ ಸುಂದರವಾದ ಮುಖ, ಕಣ್ಣುಗಳನ್ನುಳ್ಳದ್ದೂ, ತನಗೆ ಪ್ರೀತಿಕರವಾಗಿಯೂ ಇರುವ ವಿಷ್ಣುವಿನ ಪ್ರತಿಮೆಯನ್ನು ಮಾಡಿ ಅದನ್ನೇ ಪೂಜಿಸಬೇಕು. ಅದನ್ನೇ ಭಜಿಸಬೇಕು. ಅದನ್ನೇ ಚಿಂತಿಸಬೇಕು. ಹೀಗೆ ಮಾಡುವವನು ದೋಷ ದೂರನಾದ ಆ ಬ್ರಹ್ಮರೂಪಿಣಿಯಾದ ಅವನನ್ನೇ ಹೊಂದುತ್ತಾನೆ.

## ಸೂತ್ರ - 62

1. ಸ್ವತ್ವಮಾತ್ಮನಿ ............ ಸ್ಥಿತಮ್
ಸ್ವತ್ತಾಗಿ ಇರುವುದು ಆತ್ಮನಲ್ಲಿ ಇರುವುದು. ಸ್ವಾಮಿತ್ವವು ಬ್ರಹ್ಮನಲ್ಲಿರುವುದು.
2. ನ ತಸ್ಯೇಶೇ ಕಶ್ಚನ – (ತೈ.ಉ.)
ಯಾರೂ ಅವನಿಗೆ ಪ್ರಭುವಲ್ಲ.
3. ಸರ್ವೇಶ್ವರ ಃ ........... ಪರಮೇಶ್ವರಾಖ್ಯಃ – (ಶ್ರೀ ವಿ.ಪು.)
ಎಲ್ಲರಿಗೂ ಪ್ರಭುವಾದವನು, ಎಲ್ಲರನ್ನೂ ನೋಡುವವನು, ಎಲ್ಲವನ್ನೂ ಅರಿಯುವವನು, ಎಲ್ಲವನ್ನೂ ಮಾಡಲು ಶಕ್ತಿಯುಳ್ಳವನು, ಪರಮೇಶ್ವರನೆಂದು ಪ್ರಖ್ಯಾತನಾದವನು.
4. ಅರ್ಚಾ ............ ಸ್ಥಿತಮ್ – (ವಿಷ್ವಕ್ಸೇನ ಸಂಹಿತೆ)
ಭಕ್ತರಲ್ಲಿ ವಾತ್ಸಲ್ಯವುಳ್ಳ ಅರ್ಚಾವತಾರವು ಎಲ್ಲರಿಗೂ ಬಂಧುವಾದದ್ದು. ಸ್ವತ್ವವು ಆತ್ಮನಿಗುಳ್ಳದ್ದು. ಸ್ವಾಮಿತ್ವವು ನನಗುಳ್ಳದ್ದು.

5. **ಇತಿ .................... ಲಾಂಛನಃ – (ವಿ. ಸಂ)**

ಹೀಗೆ ವ್ಯವಸ್ಥೆಯಿದ್ದರೂ ' ಕೇಶವನು ನನ್ನವನು ' ಎಂದೂ' ದೇವನಾದ ಪರಶುರಾಮನು ನನ್ನವನು' ಎಂದೂ ಹೇಳುತ್ತಾರೆ.

6. **ಮಮಾಯಮ್ ..................... ನಾರಾಯಣಸ್ತಥಾ – (ವಿ.ಸಂ.)**

'ವಾಮನನು, ಪ್ರಭುವಾದ ನರಸಿಂಹನೂ, ವರಾಹ ಭಗವಾನನೂ, ನಾನೂ, ಹಾಗೇ ನಾರಾಯಣನೂ, ' ನನ್ನವನೆಂದೂ.

7. **ತಥಾ ................ ಧೀರ್ಭವೇತ್ – (ವಿ. ಸಂ.)**

ಹಾಗೆಯೇ ಕೃಷ್ಣನೂ, ರಾಮನೂ, ನನ್ನವನೆಂದು ಹೇಳಬೇಕು. ನನ್ನ ಗ್ರಾಮದಲ್ಲಿರುವ ದೇವನು ನನ್ನವನೆಂದೂ ತಿಳಿಯಬೇಕು.

8. **ಚಿಂತಯೇತ್ ................ ಜಗತ್ಪತಿಃ – (ವಿ. ಸಂ.)**

ಅಧಿಕವಾದ ತೇಜಸ್ಸುಳ್ಳವನಾಗಿಯೂ ಭಕ್ತವತ್ಸಲನಾಗಿಯೂ ಇರುವ ಜಗತ್ಪತಿಯು ಅರ್ಚಕನ ಇಚ್ಛೆಯಿಂದಲೇ ಭುಜಿಸುತ್ತಾನೆ, ಸ್ನಾನ ಮಾಡುತ್ತಾನೆ, ಪಾನ ಮಾಡುತ್ತಾನೆ, ಹಾಗೆಯೇ ಎಲ್ಲ ಕೆಲಸವನ್ನೂ ಮಾಡುತ್ತಾನೆ.

9. **ಸ್ವತಂತ್ರಸ್ಸ .............................. ಚೇಷ್ಟತೇ – (ವಿ. ಸಂ.)**

ಆ ಜಗನ್ನಾಥನು ಸ್ವತಂತ್ರನಾದರೂ ಪರತಂತ್ರನಂತೆ ಇರುತ್ತಾನೆ. ಜಗತ್ತನ್ನು ಸೃಷ್ಟಿಸುವವನು ಸರ್ವಶಕ್ತನಾದರೂ ಅಶಕ್ತನಂತೆ ವರ್ತಿಸುತ್ತಾನೆ.

10. **ಸರ್ವಾನ್ ಕಾಮಾನ್..................... ದಯಾಮ್ – (ವಿ. ಸಂ.)**

ಎಲ್ಲ ಕೋರಿಕೆಗಳನ್ನು ನೀಡುವ ಸ್ವಾಮಿಯಾದರೂ, ಅಶಕ್ತನಂತೆ ತೋರುತ್ತಾನೆ. ಜನರ ಅಪರಾಧಗಳನ್ನು ಅರಿಯದವನಂತೆ ಸದಾ ದಯೆಯಿಂದ ಕೂಡಿರುತ್ತಾನೆ.

11. **ಅರ್ಚಾವತಾರ ವಿಷಯೋ ........... ವರ್ಷ ಶತೈರಪಿ – (ವಿ. ಸಂ.)**

ಅರ್ಚಾವತಾರ ವಿಷಯದಲ್ಲಿ ಗುಣಗಳ ಬಗ್ಗೆ ನಾನೇ ಹೇಳಿದ್ದೇನೆ. ಹಾಗೆಯೇ ನೂರು ವರ್ಷಗಳಾದರೂ ಆ ಗುಣಗಳನ್ನು ಹೇಳಿ ಮುಗಿಸಲು ಸಾಧ್ಯವಿಲ್ಲ.

12. **ಋತೇ ಚ ............ ಸ್ವಕೋಜ್ಞಾನಾ ಕ ಮೇನ ವಾ – (ವಿ. ಸಂ.)**

ನನ್ನ ಅನುಗ್ರಹವನ್ನೂ, ಸ್ವತಸ್ಸಿದ್ಧವಾದ ಜ್ಞಾನವನ್ನೂ ಬಿಟ್ಟು.

13. **ಏವಂ ................. ಉತ್ತರೋತ್ತರಃ – (ವಿ. ಸಂ.)**

ಹೀಗೆ ಐದು ಪ್ರಕಾರವಾಗಿರುವ ನಾನು ಸಂಸಾರದಲ್ಲಿ ಬೀಳುವ ಆತ್ಮಗಳಿಗೆ ಹಿಂದು ಹಿಂದಿನ ಅವಸ್ಥೆಗಳಿಗಿಂತಲೂ ಮುಂದು ಮುಂದಿನ ಅವಸ್ಥೆಗಳಲ್ಲಿ ಶ್ರೇಷ್ಠನಾಗಿದ್ದೇನೆ.

14. **ಸೌಲಭ್ಯತೋ ............ ಉತ್ತರೋತ್ತರಃ – (ವಿ. ಸಂ.)**

ಜಗನ್ನಾಥನು ಸೌಲಭ್ಯದಿಂದ ಮೇಲೇ ಮೇಲೇ ಸುಲಭನಾಗಿದ್ದಾನೆ.

15. ಸರ್ವಾತಿ ಶಾಯಿಾ ................ ಸ್ಥಿತಮ್ – (ವಿ. ಸಂ.)

ಸರ್ವವನ್ನೂ ಅತಿಶಯಿಸಿರುವ ಷಾಡ್ಗುಣವು ಮಂತ್ರದಲ್ಲೂ, ಬಿಂಬದಲ್ಲೂ (ವಿಗ್ರಹ) ಇರುತ್ತದೆ. ಮಂತ್ರದಲ್ಲಿ ಅರ್ಥವಾಗಿಯೂ, ಬಿಂಬದಲ್ಲಿ ನಿತ್ಯನಾಗಿಯೂ ಕೃಪೆಯಿಂದ ಇರುತ್ತದೆ.

॥ ಈಶ್ವರ ಪ್ರಕರಣ ಸಂಪೂರ್ಣಂ ॥

ಸರ್ವಜ್ಞ ಜಗದಾಚಾರ್ಯ ಕೃತ ತತ್ವತ್ರಯಸ್ಯ ಯಃ।
ವ್ಯಾಖ್ಯಾಮಾಖ್ಯನ್ನ ಮಸ್ತಸ್ಮೈ ಸೌಮ್ಯಜಾಮಾತೃ ಯೋಗಿನೇ॥

ಪಿಳ್ಳೈ ಲೋಕಾಚಾರ್ಯರ್ ತಿರುವಡಿಗಳೇ ಶರಣಮ್।
ಮಣವಾಳಮಾಮುನಿಜೀಯರ್ ತಿರುವಡಿಗಳೇ ಶರಣಮ್।
ವಾನಮಾಮಲೈ ಜೀಯರ್ ತಿರುವಡಿಗಳೇ ಶರಣಮ್।